# ಗಲಗಲಿ ಅವ್ವ ಜೀವನ ಮತು ಕೃತಿಗಳು

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕಿ
ಟಿ.ನಂದಿನಿ

ಮಾರ್ಗದರ್ಶಕರು
ಡಾ. ಎಸ್.ಆರ್.ಚನ್ನವೀರಪ್ಪ
ಸಹ ಪ್ರಾಧ್ಯಾಪಕರು





ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೩

# ಗುಲಗುಲಿ ಅವ್ವ

# ಜೀವನ ಮತ್ತು ಕೃತಿಗಳು

(ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ
ಪಿಎಚ್.ಡಿ.ಪದವಿಗಾಗಿ ಸಾದರಪಡಿಸಿದ ನಿಬಂಧ)

ಸಂಶೋಧಕಿ
ಟಿ.ನಂದಿನಿ

ಮಾರ್ಗದರ್ಶಕರು
ಡಾ. ಎಸ್.ಆರ್.ಚನ್ನವೀರಪ್ಪ
ಸಹ ಪ್ರಾಧ್ಯಾಪಕರು



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೩

# ಪ್ರಮಾಣ ಪತ್ರ

ಗಲಗಲಿ ಅವ್ವ: ಜೀವನ ಮತ್ತು ಕೃತಿಗಳು ಎಂಬ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಡಾ. ಎಸ್.ಆರ್.ಚನ್ನವೀರಪ್ಪ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸಿದ್ದೇನೆ. ಪ್ರಸ್ತುತ ಮಹಾಪ್ರಬಂಧವು ನನ್ನ ಸ್ವಂತ ಪರಿಶ್ರಮದ ಫಲವಾಗಿದ್ದು, ಈ ಮೊದಲು ಇದನ್ನು ಇನ್ನಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಟಿ.ನಂದಿನಿ
ಸಂಶೋಧಕಿ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ

ದಿನಾಂಕ : 20.07.12

# ದೃಢೀಕರಣ ಪತ್ರ

ಗಲಗಲಿ ಅವ್ವ: ಜೀವನ ಮತ್ತು ಕೃತಿಗಳು ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ. ಪದವಿಗಾಗಿ ಟಿ.ನಂದಿನಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಸ್.ಆರ್.ಚನ್ನವೀರಪ್ಪ
ಮಾರ್ಗದರ್ಶಕರು ಮತ್ತು ಸಹ ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 20.07.12

# ಪರಿವಿಡಿ

೧

# ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಹರಿದಾಸ ಸಾಹಿತ್ಯವು ಧಾರ್ಮಿಕವಾಗಿ ಮಹತ್ವದ ಸ್ಥಾನ ಪಡೆದಿದೆ. ಜನಸಾಮಾನ್ಯರಲ್ಲಿ ಧರ್ಮ ವಹಿಸುವ ಪಾತ್ರ ಹಿರಿದಾದ್ದು. ಅದಕ್ಕೆ ಅನುಗುಣವಾಗಿರುವ ಜೀವನಮಟ್ಟಗಳಿಗೆ ಹರಿದಾಸರು ಪ್ರಾಮುಖ್ಯತೆ ನೀಡಿದ್ದಾರೆ. ಗೇಯ ಪ್ರಧಾನ ಸಾಹಿತ್ಯಿಕ ರಚನೆಗಳಾದ ಕೀರ್ತನೆ ಉಗಾಭೋಗ, ಸುಳಾದಿ, ದೀರ್ಘಹಾಡುಗಳು, ಸಣ್ಣ ಹಾಡುಗಳು ಇತ್ಯಾಗಳೆಲ್ಲಾ ಭಕ್ತಿ ಪ್ರಧಾನವಾಗಿವೆ. ಹರಿದಾಸರು ವೇದಾಗಮ ಶಾಸ್ತ್ರ, ಪುರಾಣ, ಭಾಗವತ, ರಾಮಾಯಣ, ಮಹಾಭಾರತ ಕಾವ್ಯಗಳಿಂದ ವಸ್ತು ವಿಷಯಗಳನ್ನು ಆಯ್ದುಕೊಂಡಿದ್ದಾರೆ. ನೀತಿ, ತತ್ವ, ಸತ್ಯ, ಧರ್ಮ ಮುಂತಾದ ವಿಚಾರಗಳನ್ನು ಸರಳವಾಗಿ, ಸಾಂದರ್ಭಿಕವಾಗಿ ತಮ್ಮ ರಚನೆಗಳಲ್ಲಿ ಬಳಸಿಕೊಂಡಿದ್ದಾರೆ. ಸಂಸ್ಕೃತ ಭಾಷೆಯನ್ನು ತಿಳಿದವರು ವೇದಾಗಮಗಳನ್ನು ಬಲ್ಲವರು, ಅವುಗಳಲ್ಲಿ ಅಡಕವಾಗಿರುವ ನೀತಿಯುತ ಬೋಧಕ ವಿಚಾರಗಳನ್ನು ತಮ್ಮ ಗೇಯ ಗೀತೆಗಳಲ್ಲಿ ಅಳವಡಿಸಿಕೊಂಡು ಹಾಡಿದರು. ಈ ಪ್ರಯತ್ನದಲ್ಲಿ ಹಲವಾರು ಹರಿದಾಸರು ಯಶಸ್ಸು ಸಾಧಿಸಿದರು. ದಾಸಕೂಟದಲ್ಲಿ ರಚನೆಯಾದ ಕೀರ್ತನೆಗಳು, ಸುಳಾದಿ, ಉಗಾಭೋಗಗಳು, ಖಂಡಕಾವ್ಯಗಳು, ಪಂಡಿತರನ್ನೂ ಸೇರಿದಂತೆ ಮುಖ್ಯವಾಗಿ ಜನಸಾಮಾನ್ಯರನ್ನು ಆಕರ್ಷಿಸಿದವು.

ದಾಸ ಸಾಹಿತ್ಯದ ನಾಲ್ಕು ಘಟ್ಟಗಳ ಅಧ್ಯಯನದಲ್ಲಿ ಮೊದಲನೆಯ ಘಟ್ಟದಲ್ಲಿ ದಾಸ ಸಾಹಿತ್ಯ, ಧರ್ಮಪ್ರಸಾರಕ್ಕೆ ಪ್ರಾಮುಖ್ಯತೆ ನೀಡಿತು. ಅನಂತರದ ಮೂರು ಹಾಗೂ ನಾಲ್ಕನೆ ಘಟ್ಟಗಳಲ್ಲಿ ದಾಸ ಸಾಹಿತ್ಯವು ಜನಭಾಷೆಗೆ ಹೆಚ್ಚು ಒತ್ತುನೀಡುವ ಮೂಲಕ ಸಾಮಾಜಿಕ ಕಳಕಳಿಯನ್ನು ಪ್ರಮುಖವಾಗಿಸಿಕೊಂಡಿತು. ಜನಸಾಮಾನ್ಯರ ಹಿತ ಮತ್ತು ಸಾಮಾಜಿಕ ಕಳಕಳಿ ಕನ್ನಡ ಕೀರ್ತನಕಾರರ ಪ್ರಮುಖ ಉದ್ದೇಶವಾಗಿತ್ತು. ಅವರ ಜೀವನ ಪ್ರೀತಿಯು ನೀತಿ, ಮೌಲ್ಯ, ಆತ್ಮವಿಮರ್ಶೆಯ ಗುಣಗಳು ಕೀರ್ತನೆಗಳ ರಚನೆಯಲ್ಲಿ ಸ್ಪಷ್ಟವಾಗಿ ಕಂಡುಬರುತ್ತವೆ. ತತ್ವಯುತ ಧಾರ್ಮಿಕ ವಿಚಾರಗಳನ್ನು

ಜನಸಾಮಾನ್ಯರಲ್ಲಿಗೆ ಕೊಂಡೊಯ್ಯಲು ಕೀರ್ತನ ಪ್ರಕಾರದ ಮಾಧ್ಯಮ ತುಂಬ ಸಹಾಯಕವಾಯಿತು. ಒಲಿದಂತೆ ಹಾಡುವ ವಚನಕಾರರಂತೆಯೇ ಕಂಡ ಅನುಭವವನ್ನು ಹಾಡಾಗಿಸುವುದು ಹರಿದಾಸರ ಅಭಿವ್ಯಕ್ತಿಯ ಕ್ರಮವಾಯಿತು. ಅಂತೆಯೇ ಹರಿದಾಸರ ಕಾರ್ಯಕ್ಷೇತ್ರ ಸಮಾಜವಾಯಿತು. ಸಮಾಜದ ಪ್ರತಿಯೊಂದು ವಿಷಯ ವೈವಿಧ್ಯ-ವೈರುಧ್ಯ, ನಡೆ-ನುಡಿ, ಆಚಾರ-ವಿಚಾರಗಳು ಇವರ ರಚನೆಗಳ ವಸ್ತುವಾದವು.

ಈ ನಿಟ್ಟಿನಲ್ಲಿ ಹರಿದಾಸ ಮಹಿಳೆಯರ ರಚನೆಗಳು ದಾಸಸಾಹಿತ್ಯದ ತಟಸ್ಥ ಸ್ಥಿತಿಯ ಕಾಲದಲ್ಲಿ ಮುಖ್ಯವೆನಿಸುತ್ತವೆ. ಇವರು ತಮ್ಮ ಧಾರ್ಮಿಕ ಪರಿಪಕ್ವತೆಯ ಬದುಕಿನೊಳಗಿಂದಲೇ ಸಮಕಾಲೀನ ಸಮಾಜದ ಬದುಕನ್ನು ಕಂಡಿದ್ದಾರೆ. ಧರ್ಮ ಪ್ರಸಾರದಂತಹ ವಿಷಯವುಳ್ಳ ಕೃತಿಗಳನ್ನು ಸುಲಭವಾಗಿ, ಸರಾಗವಾಗಿ ಹಾಡುವಂತೆ, ರಚಿಸುವಲ್ಲಿ ಮಹಿಳೆಯರ ಪರಿಶ್ರಮ ಅರ್ಥಪೂರ್ಣವಾದುದು. ಬಹಳಷ್ಟು ಮಹಿಳೆಯರು ವೈರಾಗ್ಯದಿಂದ ಭಕ್ತಿಯಲ್ಲಿ ತೊಡಗಿಸಿಕೊಂಡಿದ್ದರೆ, ಇನ್ನೂ ಕೆಲವರು ಭಕ್ತಿಯ ಮೂಲಕ ವೈರಾಗ್ಯ ಜೀವನವನ್ನು ಸಾಧಿಸಿದ್ದಾರೆ. ಸಂಗೀತ ಸಾಹಿತ್ಯಗಳೆರಡನ್ನು ಒಂದರೊಳಗೊಂದು ಸಾಮರಸ್ಯಗೊಳಿಸಿಕೊಂಡು ಸಹೃದಯರ ರಸಾನಂದವನ್ನೂ ಇಮ್ಮಡಿಗೊಳಿಸಿದ್ದಾರೆ.

೧೮ನೇ ಶತಮಾನದ ಆಚೀಚೆಗೆ ಕಾಣಸಿಗುವ ಮಹಿಳಾ ರಚನೆಗಳು ದಾಸ ಸಾಹಿತ್ಯದ ಪುನರುಜ್ಜೀವನಕ್ಕೆ ಕಾರಣವಾದವು. ಆದರೆ ಬಹುತೇಕ ಮಹಿಳೆಯರ ಕೃತಿಗಳು ಇಡಿಯಾಗಿ ಲಭ್ಯವಾಗಲಿಲ್ಲ. ಒಂದೊಮ್ಮೆ ಲಭ್ಯವಾದರೂ ಖಚಿತ ಆಧಾರಗಳಿಲ್ಲದೆ ಅಜ್ಞಾತ ಕವಯಿತ್ರಿಯರ ರಚನೆಗಳ ಸಾಲಿಗೆ ಸೇರಿದವು. ಹೀಗೆ ಅನೇಕ ಕೃತಿಗಳ ವಿಚಾರವು ಬೆಳಕಿಗೆ ಬಾರದೇ ಹೆಸರಿಸಲು ಮಾತ್ರ ಸೀಮಿತವಾಗಿವೆ.

ಇಂತಹ ರಚನೆಗಳಲ್ಲಿ ಖಚಿತವಾದ ಆಧಾರಗಳುಳ್ಳ ಕೃತಿಗಳ ಅಧ್ಯಯನವು ಮುಖ್ಯವಾಗುತ್ತವೆ. ಮಹಿಳೆಯರ ಬದುಕು-ಬರಹಗಳಲ್ಲಿನ ಧಾರ್ಮಿಕ ಆಸಕ್ತಿ ಹಾಗೂ ಅವರ ರಚನೆಯಲ್ಲಿ ಕಾಣಸಿಗುವ ಪ್ರತಿಭೆ, ಪರಿಶ್ರಮಗಳು ಪ್ರಮುಖ ಅಧ್ಯಯನ ವಿಷಯವಾಗುತ್ತವೆ. ವಿಶಿಷ್ಟವಾದ ಸಾಮಾಜಿಕ ಕಳಕಳಿ ಜೀವನಪ್ರೀತಿಯನ್ನು ಪರಿಚಯಿಸುವ ಕೃತಿಗಳು ಸಂಶೋಧನಾ ಅಧ್ಯಯನಕ್ಕೆ ಎಡೆಮಾಡಿಕೊಡುತ್ತವೆ. ಈ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆಯ ಗಲಗಲಿ ಅವ್ವನವರ ಬದುಕು-ಬರಹಗಳನ್ನು ಕುರಿತ ಸಂಶೋಧನಾತ್ಮಕ ಅಧ್ಯಯನವನ್ನು ಪ್ರಸ್ತುತ ನಿಬಂಧದಲ್ಲಿ ಕೈಗೊಳ್ಳಲಾಗಿದೆ. ಡಾ. ಸರೋಜಿನಿ ಮಹಿಷಿಯವರು ತಮ್ಮ "ಕರ್ನಾಟಕ ಕವಯತ್ರಿಯರು" ಕೃತಿಯಲ್ಲಿ ಅಜ್ಞಾತ ಕವಯಿತ್ರಿಯರ ಸಾಲಿನಲ್ಲಿ ಗಲಗಲಿ ಅವ್ವನವರನ್ನು ಹೆಸರಿಸುತ್ತಾರೆ. ಕರ್ನಾಟಕದಲ್ಲಿ ಹರಿದಾಸ ಸಾಹಿತ್ಯವನ್ನು ನಾಲ್ಕು ಘಟ್ಟಗಳಲ್ಲಿ ಅಭ್ಯಸಿಸುತ್ತೇವೆ. ಮೊದಲೆರಡು ಘಟ್ಟಗಳಲ್ಲಿ ನರಹರಿತೀರ್ಥರಿಂದ ಆರಂಭವಾಗಿ ಶ್ರೀಪಾದರಾಜರು ಅವರ ಶಿಷ್ಯ ಸಮೂಹದಲ್ಲಿ ಪುರಂದರ, ವ್ಯಾಸ, ವಾದಿರಾಜರವರೆಗೂ ಮುನ್ನಡೆದಿರುವುದು. ಇವರು ಪ್ರಮುಖ ಹರಿದಾಸರಾಗಿ ದಾಸಸಾಹಿತ್ಯದ ಉನ್ನತಿಗೆ ಶ್ರಮಿಸಿದರು. ಸಮಾಜದಲ್ಲಿ ಕಂಡುಂಡ

ಅನುಭವಗಳನ್ನೆಲ್ಲಾ ಹಾಡಾಗಿಸಿದರು. ಅದು ಕೀರ್ತನ ಸಾಹಿತ್ಯವಾಯಿತು. ಮುಂದಿನ ದಿನಗಳಲ್ಲಿ ಧರ್ಮ ಸೈದ್ಧಾಂತಿಕ ವಿಚಾರಗಳಲ್ಲಿ ಕ್ಲಿಷ್ಟ ತತ್ವವಿಚಾರಗಳ ಅನುಸರಣೆಯು ಜನಸಾಮಾನ್ಯರಿಗೆ ನಿಲುಕಲಿಲ್ಲ. ಪರಿಣಾಮ ದಾಸಸಾಹಿತ್ಯದ ಮೂರು, ನಾಲ್ಕು ಘಟ್ಟಗಳಲ್ಲಿ ಹರಿದಾಸ ಸಾಹಿತ್ಯದ ಜನಪ್ರಿಯತೆ ಮತ್ತು ಜನಾಕರ್ಷಣೆ ಕ್ಷೀಣವಾಗಲಾರಂಭಿಸಿತು. ಆಗ ರಾಜ್ಯದಲ್ಲಿ ಎರಡನೆ ಇಬ್ರಾಹಿಂನ ಆಡಳಿತವಿತ್ತು. ಅಲ್ಲಿ ಅನೇಕ ಹಿಂದೂ ಸಂತರು, ಷರೀಫರು, ಪಂಡಿತರು, ವಿದ್ವಾಂಸರು ಆಶ್ರಯ ಪಡೆದಿದ್ದರು. ಅವರಲ್ಲಿ ಬಿಜಾಪುರದ ಕಾಖಂಡಕಿಯ ಮಹಿಪತಿದಾಸರು ಪ್ರಮುಖರು. ಇಂತಹ ಸಂಕೀರ್ಣ ಸಂದರ್ಭದಲ್ಲಿ ಮಹಿಪತಿದಾಸರ ಸಮಕಾಲೀನರಾಗಿ, ಗಲಗಲಿ ಪಂಡಿತ ಮನೆತನದ ಪ್ರತಿಭಾವಂತೆ ಮಹಿಳೆಯಾಗಿ "ಅವ್ವ". (ಗಲಗಲಿ ಅವ್ವ) ಕಾಣಿಸಿಕೊಳ್ಳುತ್ತಾರೆ. ಈಕೆಯನ್ನು ಬಾಗಲಕೋಟೆ ಪ್ರಾಂತ್ಯದ ವಿದ್ವಾಂಸರಲ್ಲಿ "ಅವ್ವನವರು" ಎಂದೇ ಗೌರವಿಸಲಾಗಿದೆ. ಅಂತೆಯೇ ಅವ್ವನವರನ್ನು ಪ್ರಥಮ ಹಾಗೂ ಪ್ರಮುಖ ಮಹಿಳಾ ಹರಿದಾಸರೆಂದೇ ಗುರುತಿಸಲಾಗಿದೆ.

ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡೂ ಅವ್ವನವರಿಗೆ ಕರಗತವಾಗಿದ್ದವು. ಅವರ ಕೀರ್ತನೆಗಳಲ್ಲಿ ಕನ್ನಡ ಭಾಷೆಯು ಸೊಗಸಾಗಿ ಮೂಡಿಬಂದಿದೆ. ಉನ್ನತವಾದ ವಿದ್ಯಾಸಂಪನ್ನರೂ, ಧಾರ್ಮಿಕ ತತ್ವ ವಿಚಾರಗಳನ್ನು ತಿಳಿದವರಾಗಿ ಅವ್ವನವರು ಕಠಿಣವಾದ ಅರ್ಥ ವಿಶೇಷಗಳನ್ನೊಳಗೊಂಡ ಪ್ರಮೇಯಗಳನ್ನು ಸರಳವಾಗಿ ಬಿಡಿಸಿ ಅರ್ಥೈಸಿ ಅವುಗಳಿಗೆ ಸೂಕ್ತ ಪರಿಹಾರವನ್ನು ತಿಳಿಸುತ್ತಿದ್ದರು. ಪ್ರತಿಭಾ ಸಂಪನ್ನರಾದ ಅವ್ವನವರಿಗೆ ಅನೇಕ ಪ್ರಶಸ್ತಿ, ಸನ್ಮಾನ, ಪುರಸ್ಕಾರಗಳಿಂದ ಗೌರವಿಸಲಾಗಿದೆ. ಇದಕ್ಕೆ ಅವರಿಗೆ ದೊರೆತ ಶಿಕ್ಷಣವೇ ಕಾರಣವಾಗಿದೆ. ವೈರಾಗ್ಯದ ಬದುಕನ್ನು ಶಿಕ್ಷಣದಿಂದ ಸುಮುಖವಾಗಿಸಿದ್ದಾರೆ. ಅವರ ಬದುಕಿನ ಕಟ್ಟಕಡೆಯ ದಿನದವರೆಗೂ ವಿದ್ಯೆ, ಪ್ರತಿಭೆಗಳು ವೈರಾಗ್ಯವನ್ನು ಮರೆಸಿದವು. ಜೊತೆಗೆ ಉನ್ನತವಾದ ಗೌರವಾದರಗಳು ದೊರಕಿಸಿದವು. ಇದರಿಂದ ಅವ್ವ, ತಮ್ಮ ಬದುಕಿನ ದಾರಿಯನ್ನು ಕೌಟುಂಬಿಕ ಚೌಕಟ್ಟಿನಲ್ಲಿ ಕಂಡುಕೊಂಡಳು. ಇದು ಸನಾತನ ಕಟ್ಟುಪಾಡನ್ನೊಳಗೊಂಡ ಬ್ರಾಹ್ಮಣ ಕುಟುಂಬದ ವಿಧವಾ ಮಹಿಳೆಯೊಬ್ಬರಿಗೆ ಸುಲಭ ಸಾಧ್ಯವಾದುದಲ್ಲ. ಆದರೆ ಅವ್ವನವರ ಕೌಟುಂಬಿಕ ಹಿನ್ನೆಲೆ, ಧಾರ್ಮಿಕ ಪರಿಸರದ ಜೊತೆಗೆ ಅಂದಿನ ರಾಜಕೀಯ ಸ್ಥಿತಿಗಳು ಅವರ ರಚನೆಗೆ ಪೂರಕವೆನಿಸುತ್ತವೆ.

ಈ ಕ್ರಮದಿಂದ ಅವ್ವನವರ ಬದುಕಿನ ಶೈಲಿಯು ಅಂದಿನ ಮಹಿಳೆಯರಲ್ಲಿ ಅಪರೂಪದ ಪ್ರಸಂಗವೆಂದೇ ಹೇಳಬಹುದು. ಏಕೆಂದರೆ, ಸಾಮಾಜಿಕವಾಗಿ ವಿಧವಾ ಮಹಿಳೆಯರ ಬದುಕು ಕಷ್ಟವಾಗಿತ್ತು. ಇಂತಹ ಸಮಯದಲ್ಲಿಯೇ ಅವ್ವನವರು ಕಿರಿಯ ವಯಸ್ಸಿನಲ್ಲಿ ವೈಧವ್ಯಕ್ಕೆ ಗುರಿಯಾದರು. ಆದರೂ ಆಕೆ ಕಿಂಚಿತ್ತೂ ಖೇದಗೊಳ್ಳದೇ ತಮ್ಮ ಪತಿಯ ಮರಣದ ನಂತರದ ಮಂಗಳ ಕಾರ್ಯಗಳನ್ನೆಲ್ಲ ನೆರವೇರಿಸಿಕೊಳ್ಳುವುದು ಅವರ ದಿಟ್ಟ ಮನಸ್ಸಿನ ಸೂಚನೆಯಾಗಿದೆ. ಅನಂತರ ತಮ್ಮ ಪತಿಯ

ಇಚ್ಛೆಯಂತೆ ಬಲಮಕ್ಕಳಿಂದ ಶಿಕ್ಷಣ ಪಡೆಯುತ್ತಾರೆ. ಈ ಮೂಲಕ ಮುಂದಿನ ಬದುಕಿನ ದಾರಿಯನ್ನು ಸಾರ್ಥಕವೆನಿಸಿಕೊಂಡಿದ್ದಾರೆ. ಶಿಕ್ಷಣದಿಂದ ಅವರು ವೈಚಾರಿಕ ವಿವೇಚನೆಯನ್ನು ಪಡೆದುಕೊಂಡಿರುವರು, ಎಂಬುದು ಅವ್ವನವರ ಸ್ವತಂತ್ರ ನಿಲುವುಗಳಿಂದ ತಿಳಿಯಬಹುದು. ಅವ್ವನವರ ರಚನೆಗಳು ಸಾಂಪ್ರದಾಯಿಕ ವೈದಿಕ ಚೌಕಟ್ಟಿನೊಳಗೇ ರಚನೆಗೊಂಡಿದ್ದರೂ ಸ್ವತಂತ್ರ ವೈಚಾರಿಕ ಒಳನೋಟಗಳನ್ನು ಮೈಗೂಡಿಸಿಕೊಂಡಿವೆ. ಇಂದಿಗೂ ಉತ್ತರ ಕರ್ನಾಟಕ ಭಾಗದಲ್ಲಿ ಮದುವೆ ಇನ್ನಿತರ ಶುಭ ಸಮಾರಂಭಗಳಲ್ಲಿ ಅವರ ಹಾಡುಗಳು ಬಳಕೆಯಲ್ಲಿವೆ. ಮಹಿಳೆಯರ ಆಕರ್ಷಣೆಯ ಕೇಂದ್ರವಾದ ಆಭರಣಗಳ ವರ್ಣನೆಯು ವಿಶೇಷವಾಗಿವೆ. ಈ ಸೆಳೆತದಿಂದ ಮಹಿಳಾ ವಲಯದ ಅಪ್ಯಾಯಮಾನ ಹಾಡುಗಳಾಗಿವೆ ಎಂಬ ಅಂಶ ವನ್ನು ಇಲ್ಲಿ ವಿವೇಚಿಸಲಾಗುತ್ತದೆ. ನಂತರದ ಮಹಿಳಾ ಹರಿದಾಸರು ಅವ್ವನವರಿಂದ ಪ್ರಭಾವಿತಗೊಂಡು ಕಾವ್ಯ ರಚನೆಗೆ ತೊಡಗಿಕೊಂಡಿದ್ದಾರೆ. ಅವರ ಬದುಕಿನಲ್ಲಿ ಧಾರ್ಮಿಕ ವಿಚಾರಗಳ ತಿಳಿವಳಿಕೆ ಹಾಗೂ ವೈರಾಗ್ಯ ಎರಡನ್ನು ಭಕ್ತಿಯ ಮರೆಯಲ್ಲಿರಿಸಿದ್ದಾರೆ. ಆದರೂ ಅವರ ರಚನೆಯಲ್ಲಿ ಜೀವನಪ್ರೀತಿಯನ್ನು ಗುರುತಿಸುವುದು. ಹಾಗೂ ಆಹಾರ, ಅಲಂಕಾರಗಳ ವರ್ಣನೆ, ಪ್ರಕೃತಿ ವರ್ಣನೆ ಜೊತೆಗೆ ಸಹಜ ಮನುಷ್ಯ ಸ್ವಭಾವಗಳಾದ ಪ್ರೀತಿ, ಮಮತೆ, ಮತ್ಸರ, ಪೈಪೋಟಿಗಳು ಸುಂದರ ಪ್ರಸಂಗಗಳಾಗಿ ರೂಪು ಪಡೆಯುವುದನ್ನು ಗುರುತಿಸಬಹುದು. ಇದು ಸ್ಪಷ್ಟವಾಗಿ ಅವ್ವನವರ ಪ್ರಭಾವವಾಗಿದೆ. ಅವ್ವನವರು ಶಿಕ್ಷಣದಿಂದ ವೈಚಾರಿಕ ಮನೋಭಾವವನ್ನು ಪಡೆದಿದ್ದಾರೆ. ಇದನ್ನು ಅವರು ಸ್ವತಂತ್ರವಾಗಿ ನಿರ್ಧರಿಸುವ ರೀತಿಯಿಂದ ಗುರುತಿಸಬಹುದು.

೧. ಭೋಗಾಪುರೇಶ ಚಿಕ್ಕಮೂರ್ತಿಯೊಂದನ್ನು ತವರಿನ ನೆನಪಿಗಾಗಿ ತಂದು ಗಲಗಲಿಯಲ್ಲಿ ಪ್ರತಿಷ್ಠಾಪಿಸಿ ಪೂಜಿಸುವುದು. ವಿಗ್ರಹ ಪ್ರತಿಷ್ಠಾನೆ ಎಂಬುದು ಶಾಸ್ತ್ರೀಯವಾಗಿ ಪುರುಷಯತಿಗಳಿಂದ ಸಾಧ್ಯವೆನಿಸುವುದನ್ನು, ಅವ್ವ ಅತ್ಯಂತ ಲೀಲಾಜಾಲವಾಗಿ ನಿರ್ವಹಿಸಿರುವುದು ಅನನ್ಯವಾದ ಭಕ್ತಿಯ ಮೂಲಕ ಎಂಬುದು ಗಮನೀಯ ಅಂಶವಾಗಿದೆ.

೨. ಅಂದಿನ ಹಲವು ಪ್ರಕಾಂಡ ವಿದ್ವಾಂಸರಿಗೆ ಅರ್ಥೈಸಲಾಗದ ಧಾರ್ಮಿಕ ತತ್ವ, ತರ್ಕ ವಿಚಾರಗಳನ್ನು ಸೂಕ್ತವಾದ ಗ್ರಂಥಗಳ ಆಧಾರದಿಂದ ಪರಿಹರಿಸುವ ವಿದ್ಯೆ ಆಕೆಗೆ ಪ್ರತಿಭಾಯುತವಾಗಿಯೇ ಕರಗತವಾಗಿತ್ತು.

೩. ಒಮ್ಮೆ ಪ್ರಯಾಣದ ಸಂದರ್ಭದಲ್ಲಿ ಮೈಸೂರಿನ ಅರಸರ ಮನೆಯಲ್ಲಿ ತಂಗಿದ್ದರು. ಆಗ ಅರಸರಲ್ಲಿ ಅವ್ವ, ತಮ್ಮ ಪೂಜೆ, ನೈವೇದ್ಯ, ತೀರ್ಥಪ್ರಸಾದಗಳನ್ನು ತಮ್ಮಿಂದಲೇ ಪಡೆಯಬೇಕೆಂಬ ಷರತ್ತನ್ನು ವಿಧಿಸುವುದು. ಜೊತೆಗೆ ಅಂದಿನ ಆಸ್ಥಾನ ಪಂಡಿತರೆಲ್ಲ ಅಚ್ಚರಿಪಡುವಂತೆ ಧರ್ಮಸೂಕ್ಷ್ಮಗಳನ್ನು ಬೋಧಿಸುವುದು ಮುಂತಾದ ವಿಚಾರಗಳು ಅವ್ವನವರು ಆತ್ಮವಿಶ್ವಾಸಿಗಳೆಂಬುದನ್ನು ದೃಢಪಡಿಸುತ್ತವೆ.

೪. ಔತ್ತರೇಯ ವಿದ್ವಾಂಸರು ಭಾಗವಹಿಸಿದ ಸಮಾವೇಶಗಳಲ್ಲಿ ಅವ್ವ ತಮ್ಮ ಮಕ್ಕಳೊಡನೆ ಪಾಲ್ಗೊಂಡು ಅಲ್ಲಿನ ಚರ್ಚೆಗಳಲ್ಲಿ ದಕ್ಷಿಣದ ವಿದ್ವಾಂಸರು ಸೋಲೊಪ್ಪುವ ಪ್ರಸಂಗ ಎದುರಾಯಿತು. ಆಗ ಅಲ್ಲಿಯೇ ಇದ್ದ ಅವ್ವನವರು ತಮ್ಮ ಮಕ್ಕಳ ಮೂಲಕ ಔತ್ತರೇಯ ವಿದ್ವಾಂಸರಿಗೆ ತರ್ಕ ಪ್ರಮೇಯಗಳ ಕುರಿತು ಸೂಕ್ತ ಉತ್ತರವಿತ್ತು ಅವುಗಳಿಗೆ ಪರಿಹಾರಗಳನ್ನು ಸೂಚಿಸುತ್ತಾರೆ. ಈ ಘಟನೆಯಿಂದ ಅವರಿಗೆ ಮರಾಠ ಪೇಶ್ವೆಗಳು ವರ್ಷಾಸನ ನೀಡಿ ಗೌರವಿಸಿದರು.

ಈ ಎಲ್ಲಾ ಕಾರಣಗಳಿಂದ ಅವ್ವನವರು ತಮ್ಮ ವಿದ್ಯೆ ವಿಶಿಷ್ಟ ಪ್ರತಿಭೆಯಿಂದ ಅಪಾರವಾದ ಗೌರವ, ಸನ್ಮಾನಗಳನ್ನು ಪಡೆದಿದ್ದಾರೆ. ಈ ಹಿನ್ನೆಲೆಯಲ್ಲಿ ಇಂದಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಅವರ ಬದುಕು-ಬರಹಗಳು ಅತ್ಯಂತ ಅಧ್ಯಯನ ಯೋಗ್ಯವಾಗಿರುವವು.

ಅವ್ವನವರು ವಿಶಿಷ್ಟ ವ್ಯಕ್ತಿತ್ವ ಹೊಂದಿದವರಾಗಿದ್ದು, ದಿಟ್ಟ ಮನೋಭಾವದ ಮಹಿಳೆಯಾಗಿ, ಸಾಮಾಜಿಕವಾಗಿ ಪಡೆದುಕೊಂಡ ಗೌರವಾದರಗಳು ಪ್ರಮುಖವಾಗಿವೆ. ಅವರ ಹಾಗೂ ಅವರ ರಚನೆಗಳ ಕುರಿತು ಅಧ್ಯಯನವು ಇಲ್ಲಿ ಪ್ರಮುಖ ಉದ್ದೇಶವಾಗಿದೆ. ಅವ್ವನವರ ಬದುಕು-ಬರಹಗಳು ಕುರಿತು ಕ್ರಮಬದ್ಧವಾದ ಸಮಗ್ರ ಅಧ್ಯಯನ ಇಲ್ಲಿಯವರೆಗೂ ಆಗಿಲ್ಲವೆಂದೇ ಹೇಳಬಹುದು. ಈ ಮೂಲಕ ಅವರ ಬದುಕು-ಬರಹಗಳ ವಿಸ್ತಾರವಾದ ಸೂಕ್ಷ್ಮ ಅಧ್ಯಯನವನ್ನು ಕೈಗೊಳ್ಳುವುದು ಈ ನಿಬಂಧದ ಆಶಯವಾಗಿದೆ. ಈ ಹಿನ್ನೆಲೆಯಲ್ಲಿ ಒಟ್ಟಾರೆ ಗಲಗಲಿ ಅವ್ವನವರ ಬದುಕು ಮತ್ತು ಬರಹವನ್ನು ಕುರಿತು ಈ ಕೆಳಗಿನಂತೆ ಎಂಟು ಅಧ್ಯಾಯಗಳಲ್ಲಿ ವಿವೇಚಿಸಿ, ವಿಸ್ತರಿಸಲಾಗಿದೆ.

**ಅಧ್ಯಾಯ ೧ ಅಧ್ಯಯನದ ಉದ್ದೇಶ ಮತ್ತು ಸ್ವರೂಪ:** ಸಮಗ್ರ ದಾಸಸಾಹಿತ್ಯದ ಹಿನ್ನೆಲೆಯಲ್ಲಿ ಅವ್ವನವರ ಬದುಕು-ಬರಹಗಳನ್ನು ಅಭ್ಯಸಿಸುವುದು. ಅವರ ಪ್ರತಿಭಾ ಪಾಂಡಿತ್ಯವು ಮುಂದಿನ ಮಹಿಳಾ ಹರಿದಾಸರಿಗೆ ಮಾರ್ಗದರ್ಶನವಾದ ಬಗೆ. ಮಹಿಳಾ ಹರಿದಾಸರಲ್ಲಿಯೇ ಅವ್ವ ಸಾಂಸ್ಕೃತಿಕ ಮಹತ್ವ ಪಡೆದ ಪ್ರಥಮ ಮಹಿಳಾ ಹರಿದಾಸರೆಂದು ಅಭ್ಯಸಿಸುವುದು ಇಲ್ಲಿನ ಪ್ರಮುಖ ಉದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ ಮುಂದಿನ ಎಂಟು ಅಧ್ಯಾಯಗಳಲ್ಲಿ ವಿವರವಾದ ಅಧ್ಯಯನವನ್ನು ಕೈಗೊಳ್ಳಲಾಗಿದೆ.

**ಅಧ್ಯಾಯ ೨ ಮಹಿಳಾ ಹರಿದಾಸ ಪರಂಪರೆ:** ಪರಂಪರಾಗತವಾದ ನಂಬಿಕೆಗಳಲ್ಲಿ ಧಾರ್ಮಿಕ ಆಚರಣೆಗಳನ್ನು ರೂಢಿಗೊಳಿಸಿರುವುದು ಮಹಿಳಾ ಹರಿದಾಸರ ಪ್ರಮುಖವಾದ ಲಕ್ಷಣವಾಗಿವೆ. ಈ ನಿಟ್ಟಿನಲ್ಲಿ ಮಹಿಳಾ ಹರಿದಾಸರು ಲಿಖಿತ ಹಾಗೂ ಮೌಖಿಕವಾಗಿ ಕೌಟುಂಬಿಕ ಬದುಕಿನಲ್ಲಿ ಹಾಡು, ಭಜನೆ, ಕಥೆ ಹಾಗೂ ಸಂಪ್ರದಾಯಗಳಲ್ಲಿ ಧರ್ಮವನ್ನು ಅನುಸರಿಸಿ ಆ ಮೂಲಕ ತಮ್ಮ ಧಾರ್ಮಿಕ ಹಿರಿಮೆಯನ್ನು ಉಳಿಸಿ ಬೆಳೆಸಿದರು. ಅವರು ಭಾವಪ್ರಪಂಚವನ್ನು ಭಕ್ತಿಯೊಂದಿಗೆ ಬದುಕಿನೊಂದಿಗೆ ಸಮೀಕರಿಸಿಕೊಂಡರು. ಅಂತೆಯೇ ಇಲ್ಲಿ ಮಹಿಳಾ ಹರಿದಾಸರ ರಚನೆಗಳು ಮುಖ್ಯವಾಗುತ್ತವೆ. ಅವರ

ಸಾಮಾಜಿಕ ಕಳಕಳಿ, ಸಾಂಸ್ಕೃತಿಕ ಹಿರಿಮೆ ಧಾರ್ಮಿಕ ತತ್ವವಿಚಾರಗಳ ಮಹತ್ವ ಮುಂತಾದವುಗಳು ಜನಮುಖಿಯಾಗಿರುವವು. ಅವರು ಜನಭಾಷೆಗೆ ಹೆಚ್ಚು ಹತ್ತಿರವಾಗಿದ್ದಾರೆ. ಈ ನೆಲೆಯಿಂದ ವಿವಿಧ ಮಹಿಳಾ ಹರಿದಾಸರ ಬದುಕು-ಬರಹಗಳ ವಿಶಿಷ್ಟತೆಗಳನ್ನು ವಿವೇಚಿಸಲಾಗಿದೆ.

**ಅಧ್ಯಾಯ ೩ ಗಲಗಲಿ ಅವ್ವನವರ ಪರಿಸರ ಮತ್ತು ಇತಿವೃತ್ತ ವಿಚಾರ:** ಇಲ್ಲಿ ಅವ್ವನವರ ಇತಿವೃತ್ತ ವಿಚಾರ ಮತ್ತು ಅವರು ಬಾಳಿ ಬದುಕಿದ ಪರಿಸರವನ್ನು ಸೋದಾಹರಣವಾಗಿ ವಿವೇಚಿಸಲಾಗಿದೆ.

**ಅಧ್ಯಾಯ ೪ ಗಲಗಲಿ ಅವ್ವನವರ ಕೀರ್ತನೆಗಳು: ಸಾಮಾಜಿಕ ಮೌಲ್ಯ:** ಅವ್ವ ದ್ವೈತ ಮತ ಪ್ರತಿಪಾದಕರು, ಮಾನವ ಸಂಬಂಧಗಳ ಮೂಲಕ ದ್ವೈತ ಮತವನ್ನು ಅನಾವರಣಗೊಳಿಸಿದ್ದಾರೆ. ಕೌಟುಂಬಿಕ ಪರಿಸರದಲ್ಲಿನ ಸಂಬಂಧಗಳ ಸರಸ-ವಿರಸ ಪ್ರಸಂಗವನ್ನು ತಮ್ಮದೇ ಆದ ಶೈಲಿಯಲ್ಲಿ ಕಟ್ಟಿಕೊಡುವ ಮೂಲಕ ಸಾಮಾಜಿಕ ಮೌಲ್ಯಗಳನ್ನು ಪುನರ್‌ಸ್ಥಾಪಿಸುವ ಕಳಕಳಿಯನ್ನು ಹೊಂದಿದ್ದಾರೆ. ಅವರ ಹಾಡುಗಳಲ್ಲಿ ನೀತಿಬೋಧೆ, ಆತ್ಮವಿಮರ್ಶಾತ್ಮಕ ಕೀರ್ತನೆಗಳನ್ನು ತುಲನಾತ್ಮಕವಾಗಿ ಇಲ್ಲಿ ಅಭ್ಯಸಿಸಲಾಗಿದೆ.

**ಅಧ್ಯಾಯ ೫ ಗಲಗಲಿ ಅವ್ವನವರ ಕೀರ್ತನೆಗಳು: ಸಾಹಿತ್ಯಿಕ ಮೌಲ್ಯ:** 'ಗೇಯತೆ' ಹರಿದಾಸ ಸಾಹಿತ್ಯದ ಪ್ರಮುಖ ಲಕ್ಷಣವಾಗಿದೆ. ಅವ್ವನವರ ಹಾಡುಗಳು ಇದಕ್ಕೆ ಹೊರತಲ್ಲ. ಆದರೆ ವಿಶೇಷವಾಗಿ ಅವರು ವರ್ಣಿಸುವ ಆಭರಣಗಳು, ದೀರ್ಘ ಕಥನಕಾವ್ಯವಾಗಿ ರೂಪುಗೊಂಡಿವೆ. ಮಧುರ ಭಾವಕ್ಕಿಂತ ಭಿನ್ನವಾದ ನಿಂದಾಸ್ತುತಿ ತಂತ್ರದಿಂದ ಹಾಡುಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೋಲುಪದ, ಮುಯ್ಯದ ಹಾಡುಗಳು ಮೋರೆಗೆ ನೀರು ತರುವ ಹಾಡು, ಶೃಂಗಾರ ತಾರತಮ್ಯ, ಇತ್ಯಾದಿಗಳು ಜನಪದರ ಬದುಕಿನಲ್ಲಿ ಆಚರಣಾತ್ಮವಾಗಿ ನಡೆದುಬಂದಿವೆ. ಹೀಗೆ ಅನಾವರಣಗೊಳ್ಳುವ ವಸ್ತುವಿಷಯಗಳ ಕುರಿತು ವಿವೇಚಿಸುವುದು ಈ ಅಧ್ಯಾಯದ ಆಶಯವಾಗಿದೆ.

**ಅಧ್ಯಾಯ : ೬ ಗಲಗಲಿ ಅವ್ವನವರ ಕೀರ್ತನೆಗಳು: ಭಾಷೆ ಮತ್ತು ಶೈಲಿ:** ಅವ್ವನವರು ಹಾಡುಗಳ ರಚನೆಯಲ್ಲಿ ಯಾವುದೇ ಸಂಕೀರ್ಣತೆಗೆ ಎಡೆಗೊಡದೆ, ಸರಳತೆ ಹಾಗೂ ಸುಸಂಬದ್ಧ ಸಂವಹನದತ್ತ ಗಮನಹರಿಸಿದ್ದಾರೆ. ದೇಸಿ ಶೈಲಿಯಿಂದ ಕೂಡಿದ ಸರಳ ನಿರೂಪಣೆ, ಕಥನ ಮುಂದುವರಿಕೆಯ ಕ್ರಮ, ಪಾತ್ರ ವಿಶ್ಲೇಷಣೆ, ಹಾಗೂ ಪಾತ್ರ ವಿಮರ್ಶೆಯಲ್ಲಿ ಸಂದಿಗ್ಧತೆ ದೂರವಾಗಿ ಸ್ಪಷ್ಟತೆ ಕಾಣಿಸಿಕೊಳ್ಳುತ್ತದೆ. ನಡುಗನ್ನಡದ ದೇಸಿ ಪ್ರಕಾರಗಳನ್ನು ಅವ್ವ ಬಳಸಿಕೊಂಡು ರಚಿಸಿರುವ ಹಾಡುಗಳಲ್ಲಿ ಇಂಪು ಪ್ರಾಪ್ತವಾಗಿದೆ. ಅವ್ವನವರ ನಿರೂಪಣೆಯಲ್ಲಿ ಅಡಗಿರುವ ನಿಂದಾಸ್ತುತಿತಂತ್ರವು ಹೆಚ್ಚು ಪರಿಣಾಮಕಾರಿಯಾಗಿರುವುದಲ್ಲದೆ, ಆತ್ಮೀಯ ಭಾವವನ್ನು ಪ್ರಕಟಿಸುತ್ತವೆ. ಈ ಎಲ್ಲ ಅಂಶಗಳನ್ನು ಕೇಂದ್ರೀಕರಿಸಿಕೊಂಡು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

**ಅಧ್ಯಾಯ ೭ ಉತ್ತರಕಾಲೀನ ಮಹಿಳಾ ಹರಿದಾಸರ ಮೇಲೆ ಗಲಗಲಿ ಅವ್ವನವರ ಪ್ರಭಾವ:** ಪ್ರತಿಭಾ ಸಂಪನ್ನರಾದ ಅವ್ವ, ಮುಂದಿನ ಮಹಿಳಾ ಹರಿದಾಸರಿಗೆ ಪ್ರಭಾವ ಬೀರಿದ್ದಾರೆ. ಅವರ ರಚನೆಯ ವಸ್ತು, ವರ್ಣನೆಗಳು ನಂತರದ ಮಹಿಳಾ ಹರಿದಾಸರ ರಚನೆಗೆ ದಾರಿತೋರಿದಂತಿವೆ. ಅಂತೆಯೇ ಉತ್ತರಕಾಲೀನ ಮಹಿಳಾ ಹರಿದಾಸರ ರಚನೆಗಳ ಮೇಲೆ ಅವ್ವನವರ ಪ್ರಭಾವವಿರುವುದನ್ನು ಸ್ಪಷ್ಟವಾಗಿ ಗುರುತಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಈ ಎಲ್ಲ ಅಂಶಗಳೆಡೆಗೆ ಗಮನಹರಿಸಿ ಅವ್ವನವರ ಪ್ರಭಾವವನ್ನು ಕುರಿತು ತೌಲನಿಕ ಅಧ್ಯಯನವನ್ನು ಈ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ.

**ಅಧ್ಯಾಯ ೮ ಕನ್ನಡ ಮಹಿಳಾ ಸಾಹಿತ್ಯದಲ್ಲಿ ಗಲಗಲಿ ಅವ್ವನವರ ಸ್ಥಾನ:** ಕನ್ನಡ ಮಹಿಳಾ ಸಾಹಿತ್ಯದಲ್ಲಿ ಅಕ್ಕಮಹಾದೇವಿ ಪ್ರಥಮ ಕವಯಿತ್ರಿಯಾಗಿದ್ದಾಳೆ. ಅಕ್ಕನ ನಂತರದಲ್ಲಿ ಕಾಣಬರುವ ಮಹಿಳಾ ಕವಯಿತ್ರಿಯರ ಬದುಕು ಬರಹಗಳ ಕುರಿತು ತೌಲನಿಕವಾಗಿ ಅಭ್ಯಸಿಸಿ, ಅವ್ವನವರ ಸಾಹಿತ್ಯಿಕ ಸ್ಥಾನ ಮನ್ನಣೆಯನ್ನು ಗುರುತಿಸುವ ಪ್ರಯತ್ನ ಇಲ್ಲಿರುವುದು.

**ಅಧ್ಯಾಯ ೯ ಸಮಾರೋಪ:** ಮೇಲಿನ ಎಂಟು ಅಧ್ಯಾಯಗಳನ್ನು ಸಮಗ್ರವಾದ ದಾಸಸಾಹಿತ್ಯದ ಹಿನ್ನಲೆಯಲ್ಲಿ ಅಭ್ಯಸಿಸುವುದು, ಮಹಿಳಾ ಹರಿದಾಸ ಸಾಹಿತ್ಯವನ್ನು ತೌಲನಿಕವಾಗಿ ಚರ್ಚಿಸುವುದು. ಅವುಗಳ ಸಾಧಿತ ಅಂಶಗಳನ್ನು ದಾಖಲಿಸಿ ಈ ಅಧ್ಯಾಯದಲ್ಲಿ ವಿವೇಚನೆಗೊಳಪಡಿಸಲಾಗಿದೆ.

೨

# ಮಹಿಳಾ ಹರಿದಾಸ ಪರಂಪರೆ

ಕನ್ನಡ ಸಾಹಿತ್ಯದಲ್ಲಿ ಬಹುಮುಖ್ಯವಾಗಿ ಎರಡು ಭಕ್ತಿಯ ನೆಲೆಗಳ ಪರಿಚಯವಿದ್ದು, ಅವುಗಳಲ್ಲಿ ವಚನ ಸಾಹಿತ್ಯವು ೧೨ನೇ ಶತಮಾನದಿಂದಲೂ, ದಾಸ ಸಾಹಿತ್ಯ ೧೪ನೇ ಶತಮಾನದಿಂದಲೂ ಆರಂಭಗೊಂಡಿರುವುದನ್ನು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಹುಮುಖ್ಯವಾಗಿ ಗಮನಿಸಬಹುದಾಗಿದೆ.

೧೨ನೇ ಶತಮಾನದ ಶಿವಶರಣೆಯರ ವಚನಗಳಿಂದ ಪ್ರಭಾವಿತವಾದ ದಾಸ ಸಾಹಿತ್ಯವು ಮಹಿಳೆಯರ ಅನೇಕ ರಚನೆಗಳನ್ನು ತಡವಾಗಿಯಾದರೂ ಗೌರವಿಸಿತ್ತೆಂದೇ ತಿಳಿಯಬಹುದಾಗಿದೆ. ಏಕೆಂದರೆ, ಹರಿದಾಸ ಸಾಹಿತ್ಯವು ಶ್ರೀ ನರಹರಿತೀರ್ಥರಿಂದ ಆರಂಭವಾಗಿ(ಪ್ರೊ.ಎ.ವಿ.ನಾವಡ ಹಾಗೂ ಗಾಯಿತ್ರಿ ನಾವಡ ಅವರು ಸಂಪಾದಿಸಿರುವ ಸಾವಿರ ಕೀರ್ತನೆಗಳು ಎಂಬ ಸಂಪುಟವನ್ನು ಗಮನಿಸಲಾಗಿದೆ) ವ್ಯಾಸರಾಯರಾದಿಯಾಗಿ ಸಾಗುತ್ತಾ ವಿಶಿಷ್ಟವಾದ ದಾಸಕೂಟವೇ ರಚಿತವಾಯಿತು. ಅವರಲ್ಲಿ ನಾವೆಲ್ಲರೂ ತಿಳಿದಿರುವಂತೆ ಪುರಂದರ ಕನಕದಾಸರಾದಿಯಾಗಿ ಮುನ್ನೆಡೆದು ಗೋಪಾಲದಾಸ, ಜಗನ್ನಾಥದಾಸರ ತನಕ ಅಪರೂಪದ ಸಂಗೀತದ ತಾಳಲಯಗಳ ಮೂಲಕ ಕೀರ್ತನೆಗಳ ರಚನೆಯು ಪ್ರಾರಂಭವಾಗಿವೆ.

ಕ್ರಮೇಣ ಮಹಿಳಾ ಹರಿದಾಸರ ರಚನೆಗೆ ವಚನಕಾರ್ತಿಯರ ವಚನಗಳು ಹಾಗೂ ದಾಸರ ಹರಿಪಾರಮ್ಯತೆ ಸಾರುವ, ಸಂಗೀತದ ಮಟ್ಟುಗಳಿರುವ ಸಾಲುಗಳ ಕೀರ್ತನೆಗಳು ಒಂದಾದ ನಂತರ ಒಂದರಂತೆ ಕಾರಣವಾದವು.

ಮಹಿಳಾ ಹರಿದಾಸರು ವಿಶೇಷವಾಗಿ ಶಿಷ್ಟ ಸಂಪ್ರದಾಯಗಳಲ್ಲಿ ಬದುಕಿ ಬಾಳಿದವರು ಬಹಳಷ್ಟು ಮಹಿಳೆಯರು ತಮ್ಮ ನಿತ್ಯದ ಬದುಕಿನ ಬವಣೆಗಳನ್ನು ಪರಿಹರಿಸಿಕೊಳ್ಳುವ ಮಾರ್ಗವಾಗಿ ಕೀರ್ತನೆಗಳ ಮೊರೆ ಹೊಕ್ಕವರು ಮುಖ್ಯವಾಗಿ ಬಹುಪಾಲು ಕೀರ್ತನಕಾರ್ತಿಯರು ಬಾಲ ವೈಧವ್ಯಕ್ಕೆ ತುತ್ತಾದವರು, ಬದುಕಿನ ಬಂಡಿ ಸಾಗಿಸಲು ಕೌಟುಂಬಿಕ ದುಡಿಮೆಯಲ್ಲಿ ಸವೆದು ಹೋದವರು. ತಮ್ಮ ಕಷ್ಟ ಪರಂಪರೆ

ಯನ್ನೆಲ್ಲ ಒಪ್ಪಿಸುವ ಮಾರ್ಗವಾಗಿ ತಮ್ಮ ಚೌಕಟ್ಟಿನಲ್ಲಿ ದೊರೆಯುವ ಸಂಪ್ರದಾಯ ಬದ್ಧ ಕೌಟುಂಬಿಕ ವಿಧಾನಗಳನ್ನು ಹಾಡನ್ನು ರಚಿಸುವ ಮೂಲಕ ಅಲ್ಲಿ ತಮ್ಮ ಕೌಶಲ್ಯ ತೋರುವ ದಾರಿ ಕಂಡುಕೊಂಡರು.

ಮಹಿಳಾ ಹರಿದಾಸರ್ಯಾರು ಶಾಲೆಗೆ ಹೋಗಿ ಅಕ್ಷರ ಕಲಿತವರಲ್ಲ. ಅವರಲ್ಲಿ ಬಹುಪಾಲು ಮಹಿಳೆಯರಿಗೆ ಮನೆಯಲ್ಲಿ ನಡೆಯುವ ಸಮಾರಂಭಗಳೇ ಶಿಕ್ಷಣದ ತಾಣಗಳಾದವು ಎನ್ನಬಹುದು. ಮಹಿಳೆಯರು ವಿಶೇಷವಾಗಿ ಹರಿ ಸಂಕೀರ್ತನೆಯಲ್ಲಿ ತೊಡಗಿ ತಮ್ಮ ಅನುಭವ, ವೇದನೆ, ಭಕ್ತಿ, ತನ್ಮಯ ಭಾವಗಳನ್ನು ಹಾಡಿಕೊಳ್ಳುತ್ತಾ, ಹರಿಭಕ್ತಿಯನ್ನು ರೂಢಿಸಿಕೊಳ್ಳುತ್ತಾ ಸಾಗಿ ಬಂದವರಾಗಿದ್ದಾರೆ.

ದಾಸರಿಗೆ ಭಕ್ತಿಯೇ ಮೂಲ ಆಕರ. ಶೃತಿ ಬದ್ಧವಾಗಿ ಹಾಡುವ ದಾಸರ ಪದಗಳೇ ಶಕ್ತಿ. ಈ ಕಾಲದಲ್ಲಿಯೇ ಮಹಿಳೆಯರು ಹಿಂದೆಗೆಯದೇ ಕೀರ್ತನೆಗಳ ರಚನೆಯಲ್ಲಿ ಭಕ್ತಿ, ವೈರಾಗ್ಯಗಳ ಮೂಲಕ ತಮ್ಮ ಬದುಕಿನ ಅನುಭವಗಳ ಮೂಲಕ ಕೃತಿ ರಚನೆ ಮಾಡಲಾರಂಭಿಸಿದರು. ತಮ್ಮ ಕೀರ್ತನೆಗಳಲ್ಲಿ ಮುಖ್ಯವಾಗಿ ಹಾಡುಗಬ್ಬ, ಸಂಗೀತ ಪ್ರಧಾನವಾಗಿಸಿಕೊಂಡರು, ಇವರ ಕೀರ್ತನೆ, ಸುಳಾದಿ ಉಗಾಭೋಗ ಚಿಕ್ಕ ದೊಡ್ಡ ಕಾವ್ಯಗಳು, ಕೋಲಾಟದ ಪದಗಳು, ಕೊರವಂಜಿ ಪದಗಳು, ಜೋಗುಳ ಪದಗಳು ಹೀಗೆ ಸಾಲು ಸಾಲು ರಚನೆಗಳನ್ನು ಗುರುತಿಸಬಹುದು. ಇಂಥವರಲ್ಲಿ ನಾವು ಪ್ರಮುಖವಾಗಿ ಗಮನಿಸುವ ಮಹಿಳೆಯೆಂದರೆ,

ಗಲಗಲಿ ಅವ್ವ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಓರುಬಾಯಿ ಲಕ್ಷ್ಮೀದೇವಮ್ಮ, ನಿಡುಗುರುಕಿ ಜೀವುಬಾಯಿ, ಇನ್ನೂ ಮುಂತಾದವರನ್ನು ಹೆಸರಿಸಬಹುದಾಗಿದೆ.

೧೮ನೇ ಶತಮಾನದ ಪ್ರಾರಂಭದಲ್ಲಿ ಭಾಗವತ ಸಾಹಿತ್ಯದ ನಿರ್ಮಾಣ ಹೆಚ್ಚು ಫಲಪ್ರದವಾಗಿತ್ತು. ಮೈಸೂರು ಅರಸರ ಊಳಿಗದಲ್ಲಿದ್ದ ಹೊನ್ನಮ್ಮನ ವಿಷ್ಣು ಭಕ್ತಿಯು ಆಕೆಯ 'ಹದಿಬದೆಯಧರ್ಮ' ಕೃತಿಯಲ್ಲಿ ವ್ಯಕ್ತವಾಗಿದೆ. ನಂತರದಲ್ಲಿ ಬರುವ ಚೆಲುವಾಂಬೆಯು ಶ್ರೀವೈಷ್ಣವ ಭಕ್ತಿಗೆ ಹೆಚ್ಚಿನ ಮಹತ್ವ ನೀಡಿದ್ದಾಳೆ. ಮಹಿಳಾ ಹರಿದಾಸರು ಒಬ್ಬರಿಂದ ಒಬ್ಬರು ಸ್ಫೂರ್ತಿ ಪಡೆದು ಕೀರ್ತನ ಸಾಹಿತ್ಯ ರಚನೆಗೆ ತೊಡಗಿಕೊಂಡರು.

ಅವರಲ್ಲಿ ಮೊದಲಿಗರು 'ಗಲಗಲಿ' ಅವ್ವನವರು, ಈ ಮೊದಲು ದಾಸ ಸಾಹಿತ್ಯದಲ್ಲಿ ಹೆಸರಿಸುವಷ್ಟಕ್ಕೆ ಹಾಗೂ ಆಕೆಯ ಕೀರ್ತನೆಗಳ ಸಂಪಾದನ ಕಾರ್ಯವು ನಡೆದಿರುವುದು ಅನಂತರದಲ್ಲಿ ಗಲಗಲಿ ಅವ್ವನವರ ಶಿಷ್ಯೆ ಎಂತಲೇ ಗುರುತಿಸಿಕೊಂಡಿರುವ ಭಾಗಮ್ಮ(ಪ್ರಯಾಗಬಾಯಿ)ರವರು ಕೂಡ ಕೆಲವಾರು ಕೀರ್ತನೆಗಳ ರಚನೆ ಮಾಡಿರುವರು.

ಹರಿದಾಸ ಸಾಹಿತ್ಯದ ಮಹಿಳಾ ಕೃತಿಕಾರರಲ್ಲಿ ಪ್ರಮುಖಳಾಗಿ ಹೆಳವನಕಟ್ಟೆ ಗಿರಿಯಮ್ಮ ತನ್ನ ಕೀರ್ತನೆಗಳ ರಚನೆಯಿಂದಲೂ, ಅಲ್ಲಿನ ವಸ್ತು, ವಿಷಯಗಳ ದೃಷ್ಟಿಯಿಂದ ಗಿರಿಯಮ್ಮ ಅಧ್ಯಯನಕ್ಕೆ

ಒಳಪಟ್ಟು ಅವರ ಸಮಗ್ರವಾದ ಅಧ್ಯಯನವೇ ನಡೆದಿದೆ. ಅದರಂತೆ ಹರಪನಳ್ಳಿ ಭೀಮವ್ವ ಕೂಡ ತನ್ನ ಕೀರ್ತನೆಗಳ ಮೂಲಕವೇ ಜನ ಸಾಮಾನ್ಯರ ಪದಗಳಲ್ಲಿ, ಕಂಡುಬರುವಳು.

ಹರಪನಳ್ಳಿ ಭೀಮವ್ವಳ ಕುರಿತು, ಆಕೆಯ ಬದುಕು, ರಚಿಸಿದ ಕೀರ್ತನೆಗಳ ಅಧ್ಯಯನ ನಡೆದಿದ್ದು, ಭಕ್ತಿ, ವೈರಾಗ್ಯಗಳ ಕುರಿತು ಬರೆದ ಕೀರ್ತನೆಗಳು ಹೆಚ್ಚು ಪ್ರಚಾರ ಪಡೆದಿರುವುದನ್ನು ನಾವಿಲ್ಲಿ ಕಾಣಬಹುದಾಗಿದೆ. ಕೀರ್ತನ ಪರಂಪರೆಯು ಅಂದಿನಿಂದಲೂ, ಈ ತನಕವೂ ನಿರಂತರವಾಗಿ ಹರಿಯುವ ಜೀವವಾಹಿನಿಯಂತಿರುವುದು. ಏಕೆಂದರೆ ವೈಧಿಕ ಸಂಪ್ರದಾಯವು ಮಠಗಳಲ್ಲಿ, ಮನೆಮನೆಗಳ ಅಚರಣೆಯಲ್ಲೂ ಹಾಡುಗಾರಿಕೆಯಿಂದ ಮತ್ತು ಬಾಯಿಪಾಠಗಳ ಮೂಲಕ ಉಳಿದಿರುವುದೆಂದು ಹೇಳಬಹುದು.

ದಾಸ ಸಾಹಿತ್ಯವು ಸಂಗೀತದ ತಾಳಲಯಗಳೊಂದಿಗೆ ಪ್ರಚಾರ ಪಡೆಯುತ್ತಾ ಅದರ ಸುಮಧುರತೆಯಿಂದ ಜನರತ್ತ ಆಕರ್ಷಿತವಾಗಲು ಮಹಿಳಾ ಹರಿದಾಸರು ಜೋಪಾನಗೊಳಿಸಿದ ಕೀರ್ತನ ಸಾಹಿತ್ಯವು ಅಮೂಲ್ಯವಾದುದು. ಹೀಗೆ, ಸುಮಾರು ೧೫ನೇ ಶತಮಾನದಿಂದ ದಾಸ ಸಾಹಿತ್ಯವು ಜನಮಾನಸದಲ್ಲಿ ಬೇರೂರಿ ತನ್ನದೇ ಆದ ಧಾರ್ಮಿಕ, ಸಾಮಾಜಿಕ ವಿಷಯಗಳ ಮೂಲಕ ಇಂದಿಗೂ ತನ್ನ ಛಾಪು ಉಳಿಸಿಕೊಂಡಿದೆ. ಮುಂದುವರಿದು ಮಹಿಳಾ ಹರಿದಾಸರು ಒಬ್ಬೊಬ್ಬರು ತಮ್ಮ ತಮ್ಮ ಬದುಕಿನ ಬವಣೆಗಳ ನಿವಾರಣೆಗೋ ಎಂಬಂತೆ, ಭಕ್ತಿಯಿಂದ ಹರಿಯ ಸಾನಿಧ್ಯ ಪಡೆಯುವ ದಾರಿಯನ್ನು ಕೀರ್ತನೆಗಳಲ್ಲಿ ವರ್ಣಿಸುತ್ತಾ ಅವರು ವಿವರಿಸುವ ಧಾಟಿಯು ಭಕ್ತಿಯ ತಿಳುವಳಿಕೆ ಹಾಗೂ ತನ್ಮಯಭಾವದ ರಚನೆಗಳು ಹೆಚ್ಚು ಕುತೂಹಲಗಳನ್ನು ಉಳಿಸಿಕೊಂಡಿವೆ.

ಪ್ರತಿಯೊಬ್ಬ ಮಹಿಳೆಯು ಹರಿದಾಸ ಸಾಹಿತ್ಯದಲ್ಲಿ ಕಾಣಲು ಪ್ರಯತ್ನಿಸುವುದು ಶ್ರೀಕೃಷ್ಣನ ಬಾಲಲೀಲೆಯನ್ನು, ಮುಂದೆ ಶ್ರೀಹರಿಯಾಗಿ, ಆಪದ್ಬಾಂದವನಾದ ಚಿತ್ರಣವನ್ನು, ಹೇಳುತ್ತಾರೆ. ಜೊತೆ ಜೊತೆಗೆ ಸೋತವರ, ನೊಂದವರ ಪರವಾಗಿ ನಿಲ್ಲುವ ಅಪರಜ್ಞಾನಿ ಪರಮಾತ್ಮ ಎಂಬಂತಹ ತಹ ತಹಿಕೆಯು ಕಾಣಬರುವುದು ಅವರ ಕೀರ್ತನೆಗಳಲ್ಲೇ ಎಂಬುದನ್ನು ಗಮನಿಸಬಹುದು.

ಇಲ್ಲಿ ನಾವು ಒಬ್ಬೊಬ್ಬರ ಕೀರ್ತನೆಗಳ ರಚನೆಯ ಕುರಿತು ಬರಹದೊಳಗಿನ ಬದುಕಿನ ಚಿತ್ರಣ ಕುರಿತು ಮತ್ತು ಬದುಕಿನ ದಾರಿ ಸವೆಸಲು ಆರಿಸಿಕೊಂಡ ಮಾರ್ಗಗಳ ಕುರಿತು, ಅವರು ಅನುಸರಿಸಿದ ಭಕ್ತಿ ವೈರಾಗ್ಯಗಳ ಕುರಿತು ತಿಳಿಯುವುದು ಹೆಚ್ಚು ಸೂಕ್ತವೂ, ಸಮಂಜಸವೂ ಎನಿಸುವುದು. ಮೊದಲಿಗೆ, ಪ್ರಥಮ ಹರಿದಾಸ ಮಹಿಳೆ ಎಂಬುದಾಗಿ ಗುರುತಿಸುವ ಗಲಗಲಿ ಅವ್ವ.

ದಾಸ ಸಾಹಿತ್ಯದಲ್ಲಿ ಮಹಿಳೆಯರು ಕೃತಿ ರಚನೆ ಮಾಡಿರುವುದು ಬಹಳ ನಿಧಾನವಾಗಿ ಎಂಬುದನ್ನು ಈಗಾಗಲೇ ಗ್ರಹಿಸಿರುವೆವು. ಇಲ್ಲಿ ಗಲಗಲಿ ಅವ್ವನವರೆಂದೇ ಖ್ಯಾತರಾಗಿರುವ ಶ್ರೀಮುದ್ಗಲಾಚಾರ್ಯರ

ಪತ್ನಿ ರಮಾರವರು ಮಹಿಳಾ ಹರಿದಾಸರಲ್ಲಿಯೇ ಪ್ರಥಮ ಮಹಿಳಾ ಹರಿದಾಸರೆಂದು ಗುರುತಿಸುತ್ತಿದ್ದೇವೆ. ದಾಸ ಸಾಹಿತ್ಯವು ನರಹರಿತೀರ್ಥರ ಕಾಲದಿಂದಲೂ ವಿಕಸನಗೊಳ್ಳುತ್ತಾ ಕರ್ನಾಟಕದಲ್ಲಿ ದಾಸಕೂಟ, ವ್ಯಾಸಕೂಟಗಳೆಂಬ ಕವಲುಗಳು ಬೆಳೆದು ಪುರಂದರದಾಸರ ಕಾಲಕ್ಕೆ ಅತ್ಯುನ್ನತಿಯನ್ನು ತಲುಪಿದ್ದು, ಕನಕದಾಸರು ಹಾಗೂ ಆ ಕಾಲದ ದಾಸಯತಿಗಳು ಮುಂದುವರಿಸಿದರು. ''ಕೊಪ್ಪಳ ತಾಲೂಕಿನ ಭೋಗಾಪುರದ ಶ್ಯಾನುಭೋಗರ ಮಗಳಾದ 'ರಮಾ' ಅವರಿಗೆ ಬಿಜಾಪುರ ಜಿಲ್ಲೆಯ ಗಲಗಲಿಯ ''ಮುದ್ಗಲಾಚಾರ್ಯರೊಡನೆ ವಿವಾಹವಾಯಿತು. ಆ ಸಮಯಕ್ಕೆ ಆಕೆಗೆ ಹನ್ನೆರಡು ವರ್ಷ. ಶ್ರೀ ಮುದ್ಗಲಾಚಾರ್ಯರಿಗೆ ತೊಂಭತ್ತೈದು ವರ್ಷ! ಮದುವೆಯಾದ ಎಂಟು ದಿನಗಳಲ್ಲಿಯೇ ಪತಿ ಪರಲೋಕ ವಾಸಿಯಾದರು. ಆದರೆ ಮುದ್ಗಲಾಚಾರ್ಯರು ತಮ್ಮ ಮಕ್ಕಳಿಗೆ ಕೊನೆಯ ದಿನಗಳಲ್ಲಿ ಪತ್ನಿ ರಮಾರವರಿಗೆ ವಿದ್ಯಾಭ್ಯಾಸ ಮಾಡಿಸಬೇಕೆಂಬ ಇಚ್ಛೆ ವ್ಯಕ್ತಪಡಿಸಿದ್ದರು. ಅದರಂತೆಯೇ ಅವರ ವಿದ್ವಾಂಸ ಮಕ್ಕಳು ರಮಾರವರಿಗೆ ಶಾಸ್ತ್ರ, ವೇದಾಧ್ಯಯನಗಳ ಕಲಿಯುವಿಕೆಗೆ ಅನುವು ಮಾಡಿಕೊಟ್ಟರು.''[೧] 'ರಮಾ'ರವರನ್ನು ಅವ್ವನವರೆಂದೂ, ಮುದ್ಗಲಾಚಾರ್ಯರನ್ನು 'ಅಪ್ಪ'ನವರೆಂದು ಕರೆಯುವುದು ವಾಡಿಕೆಯಾಗಿತ್ತು. ಹಾಗಾಗಿ ಅವ್ವನವರು ಗಲಗಲಿಯ ಆಚಾರ್ಯರ ಪತ್ನಿಯೆಂದು ತುಂಬ ಗೌರವದಿಂದ 'ಗಲಗಲಿಯ-ಅವ್ವ'ನವರೆಂದೇ ಕರೆಯುವುದು ರೂಢಿಯಾಗಿತ್ತು. ಅವ್ವನವರು ಶ್ರವಣ ಮಾತ್ರದಿಂದಲೇ ತಮ್ಮ ಮನೆಯಲ್ಲಿ ನಡೆಯುತ್ತಿದ್ದ ಅನೇಕ ಶಾಸ್ತ್ರಾಧ್ಯಯನ, ವೇದ, ಪುರಾಣ ಇತ್ಯಾದಿಯಾಗಿ ಗ್ರಹಿಕೆಯ ಮೂಲಕವೇ ಕೃತಿ ರಚನೆಗೆ ತೊಡಗಿರುವುದು ತಿಳಿಯುತ್ತದೆ.

ಗಲಗಲಿ ಅವ್ವನವರು ಸದಾ ಕಾಲ ಶಾಸ್ತ್ರ ವೇದಾಧ್ಯಯನಗಳ ಪರಿಸರದಲ್ಲಿ ವಾಸಿಸುತ್ತಿದ್ದರು. ಸಹಜವಾಗಿ ಆಕೆಗೆ ಅಲ್ಲಿನ ಪಾಂಡಿತ್ಯಪೂರ್ಣ ವಿಚಾರಗಳಲ್ಲಿ, ವಾದ ಮಂಡನೆ ಸಭೆಗಳಲ್ಲಿ ಮಂಡಿತಗೊಳ್ಳುವ ವಿಷಯಗಳು ಪರಿಚಯವಿದ್ದು, ಆ ಕಾರಣಕ್ಕೆ ಆಕೆಗೆ ಕೃತಿರಚನೆಗೆ ಮೂಲ ಪ್ರೇರಣೆಗಳು ಕುಟುಂಬ ಮೂಲದಿಂದಲೇ ಬಂದಿರುವುದು ಎನ್ನುವುದನ್ನು ಕಾಣಬಹುದು. ಜೊತೆಗೆ ಅವ್ವನವರು ಸಹ ಅಪಾರ ಪಾಂಡಿತ್ಯ ಹೊಂದಿದ್ದ, ಅತ್ಯಂತ ವಿನಯದಿಂದಲೇ ಕೀರ್ತನೆಗಳನ್ನು ರಚಿಸಿದ್ದಾರೆ. ಅವರ ಒಂದು ಕೀರ್ತನೆಯನ್ನು ಸ್ಮರಿಸುವುದು ನೋಡುವುದಾದರೆ

''ಮುದ್ಗಲ್ಲವಾಸನ ಶುದ್ಧನಾಮದವರು
ಮುದ್ದುಪಾದಗಳ ಸ್ಮರಿಸುತ ರಚಿಸಿದ ಅ
ಪದ್ಧ ನೋಡದಲೆ ಹರಿಕೊಳ್ಳೊ
ಮೂಢಳು ನಾನೊಂದು ಬೇಡಿ ಬಯಸಿಕೊಂಡೆ
ಮಾಡಿವೆ ರಚನಿ ಮನ ಉಬ್ಬಿ''[೨]

ಎಂಬುದಾಗಿ ವಿನಯದಿಂದ ನುಡಿದಿರುವರು.

ಅವ್ವನವರ ಪಾಂಡಿತ್ಯಕ್ಕಾಗಿಯೇ ಆದಿಲ್‌ಶಾಹಿ ನಿಜಾಮರಿಂದಲೂ ಪೇಶ್ವೆಗಳಿಂದಲೂ ಸನ್ಮಾನಗಳನ್ನು ಪಡೆದಿದ್ದಿದರು ಎಂಬುದಕ್ಕೆ ಮರಾಠ ಸರ್ಕಾರದ "ವರ್ಷಾಸನ"ವು ಸಾಕ್ಷಿಯಾಗಿದೆ. ಮುಂದೆ, ಅವ್ವನವರು ತಮ್ಮ ಕೀರ್ತನೆಗಳನ್ನು ಧಾರ್ಮಿಕ, ಪೌರಣಿಕ ಮತ್ತು ಸಾಮಾಜಿಕ ವಸ್ತು ವಿಷಯಗಳನ್ನೊಳಗೊಂಡ ಕೀರ್ತನೆಗಳನ್ನು ರಚಿಸಿದ್ದಾರೆ. ಆಕೆಯ ಕೀರ್ತನೆಗಳಲ್ಲಿ ಕಾಣಬರುವ ವಸ್ತು, ವರ್ಣನಾ ಕೌಶಲ್ಯ, ವಿಶೇಷವಾದ ನಿಂದಾಸ್ತುತಿ ತಂತ್ರದಿಂದ ಹೆಣೆದಿರುವಳು. ಕಥನ ಕೌಶಲವು ಅಲ್ಲಿನ ಸಾಂಸ್ಕೃತಿಕ ಪರಿಸರದಲ್ಲಿ ಅರಳುವ ಕೌಟುಂಬಿಕ ಸರಸ, ಬಿಗುಮಾನ ತುಂಬಿದ ನಡವಳಿಕೆ ಹೀಗೆ ತನ್ನ ರಚನೆಯಲ್ಲಿ ಅನೇಕ ಸಾಂಸ್ಕೃತಿಕ ಅಂಶಗಳನ್ನು ಹಿಡಿದಿಟ್ಟಿದ್ದಾಳೆ. ಮುಯ್ಯದ ಹಾಡುಗಳನ್ನು ಅವ್ವನವರು ವಿಶೇಷವಾಗಿ ರಚಿಸಿದ್ದಾರೆ. ಅವುಗಳಲ್ಲಿ ಮುಯ್ಯ ಹಿಂತಿರುಗಿಸುವ ಹಾಡು, ಮುಯ್ಯ ಕೊಡುವ ಹಾಡು ಎಂಬುದಾಗಿ ಎರಡು ರೀತಿಯ ಕೀರ್ತನೆಗಳನ್ನು ಕಾಣಬಹುದಾಗಿದೆ.

ಉದಾಹರಣೆಗೆ ನೋಡುವುದಾದರೆ,

**ಮುಯ್ಯ ಕೊಡುವ ಹಾಡು**

"ಮುಯ್ಯ ಒಯ್ಯೋಣು ಬಾರೆ ಮಾನನಿಯರೆಲ್ಲರು ನೀರೆ
ಮೈ ಮರೆದೇನೆ ನಾರಿ ಮಾರನಯ್ಯನ ತೋರೆ ||ಪ||
ಹರದಿ ಸುಭದ್ರಾ ತಮ್ಮ ದೊರೆಗಳಿಗೆ ಅರುಹಲು
ಪರಮ ಹರುಷರಾಗಿ ಐವರು ಚಪಲಾಕ್ಷಿ
ಪರಮ ಹರುಷರಾಗಿ ಐವರು ಮುಯ್ಯಕ್ಕ
ದುರರಿಂದ ಭೇರಿ ಹೊಯ್ಸಿದರ ಚಪಲಾಕ್ಷಿ"[೩]

ಹೀಗೆ ಅತ್ಯಂತ ಸಂಭ್ರಮ ಸಡಗರದಿಂದ ವರ್ಣಿಸುವ ಕವಯಿತ್ರಿ ಇಲ್ಲಿ ಮುಯ್ಯ ಒಯ್ಯುವ ಪದ್ಧತಿ ಪರಿಚಯಿಸುವುದರಲ್ಲಿಯೇ, ಮಾನಿನಿಯರ ಮಾರನಯ್ಯನ ಕುರಿತು ಹರುಷದ ಭಕ್ತಿ ಸಾರಿದ್ದಾಳೆ. ಗಲಗಲಿಯ ಅವ್ವನವರು ಕೋಲಾಟದ ಹಾಡುಗಳು, ಶೃಂಗಾರ ತಾರತಮ್ಯ ಮೋರೆಗೆ ನೀರು ತರುವ ಹಾಡುಗಳು ಮುಂತಾಗಿ ಕೃತಿ ರಚನೆ ಮಾಡಿರುವರೆಂದು ತಿಳಿದುಬರುತ್ತದೆ. ಆದರೆ ಈಗ ನಮಗೆ ಅಷ್ಟೂ ಕೀರ್ತನೆಗಳು ಲಭ್ಯವಾಗಿಲ್ಲ. ಸಮಗ್ರ ದಾಸ ಸಾಹಿತ್ಯ ಸಂಪುಟದ ಮಾಲಿಕೆಯಲ್ಲಿ ದೊರೆಯುವ ಕೀರ್ತನೆಗಳು ಮಾತ್ರ ಅಧ್ಯಯನಕ್ಕೆ ಲಭ್ಯವಾಗಿವೆ.

ಅವ್ವನವರ ಇನ್ನೊಂದು ಕೃತಿ 'ಜೋಗುಳದ ಹಾಡು' ಸರಳ ನುಡಿಗಳಲ್ಲಿ, ನಿರೂಪಿತಗೊಂಡಿದ್ದು ಐವತ್ತೆರಡು ನುಡಿಗಳಲ್ಲಿ ಕೃಷ್ಣನ ಬಾಲ್ಯವನ್ನು ವಿಧಿವತ್ತಾದ ಸಂಪ್ರದಾಯಗಳೊಂದಿಗೆ ಬಹು ಸ್ವಾರಸ್ಯಕರವಾಗಿ ಮೂಡಿಬಂದಿದೆ.

''ದಕ್ಷಿಣೆ ತಾಂಬೂಲ ಆ ಕ್ಷಣಕೆ ಕೊಟ್ಟು
ಲಕ್ಷ ಕೋಟಿ ದ್ರವ್ಯ ಸೂರಿ ಬಿಟ್ಟು
ಕುಕ್ಷಿಲೋಕನ ಫಣಿಗೆ ರಕ್ಷವನಿಟ್ಟು
ಲಕ್ಷಣವಂತಿ ಬಾಣಂತಿ ಸುಖವೆಷ್ಟು ಜೋ ಜೋ''[೪]

ಪುಟ್ಟ ಕೃಷ್ಣನ ತಾಯಿಯಾದ ಯಶೋಧೆಗೆ ಸುಖದ ಪರಮಾವಧಿಯನ್ನು ಕೃಷ್ಣನ ಬಾಲ್ಯದ ಸಂಭ್ರಮವನ್ನಿಲ್ಲಿ ಇಡಿಯಾಗಿ ಚಿತ್ರಿಸಿರುವುದನ್ನು ಕಾಣಬಹುದು.

ಹೀಗೆ ಅವ್ವನವರು ಸೇತು ಬಂಧನದ ಹಾಡು, ರಾಮಭಕ್ತಹನುಮ, ಕೃಷ್ಣ ಭಕ್ತ ಪಾರ್ಥನ ನಡುವೆ ನಡೆಯುವ ಪ್ರೀತಿಯ, ಭಕ್ತಿಯ ಸ್ಪರ್ಧೆ ಇವುಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಹಾಗೆಯೇ, ಅವ್ವನವರು ಅಪಾರವಾದ ಸಂಸ್ಕೃತದ ಪಾಂಡಿತ್ಯ ಪಡೆದಿದ್ದರಿಂದ ಅವರ ಕೀರ್ತನೆಗಳಲ್ಲಿ ಪ್ರೌಢ ವಿಚಾರಗಳೂ ಪ್ರಸ್ತಾಪಗೊಂಡಿವೆ. ಅತ್ಯಂತ ಪ್ರೀತಿಯಿಂದ ಪರಿಸರವನ್ನು ವರ್ಣಿಸಿರುವುದನ್ನು ನೋಡಬಹುದು.

''ನೆಲ್ಲಿ ನೇರಲೆ ನೋಡ ಪುಷ್ಪ ಚೆಲ್ಲಿ ನಲಿಯುತಲಿವೆ
ಮಲ್ಲ ಮಲ್ಲಿಗೆ ನೋಡ ಹರಿಪಾದ ಪಲ್ಲವಕೆ ಎರಗುತಿವೆ.
......................
......................
ಜಾಜಿ ಕುಸುಮ ನೋಡ ತುಳಸಿ ವಿರಾಜಿಸುವನ ನೋಡ
ಸಹಜದವನವ ನೋಡ ರಂಗನ ಪೂಜೆಗೆ ಒದಗುವಂತೆ''[೫]

ಎಂದು ತನ್ನ ರಚನೆಯ ಪ್ರತಿ ಸಾಲಿನಲ್ಲೂ ಹರಿಪೂಜೆ, ಹರಿಧ್ಯಾನವೇ ಉಸಿರಾಗಿಸಿಕೊಂಡಿರುವರು. ಒಟ್ಟಾರೆಯಾಗಿ, ಗಲಗಲಿ ಅವ್ವ ಆಗಿನ ಕಾಲದಲ್ಲಿಯೇ ಸಂಸ್ಕೃತ ಪಾಂಡಿತ್ಯದ ಕೌಟುಂಬಿಕ ವಾತಾವರಣದಲ್ಲಿ ಕಟ್ಟುನಿಟ್ಟಿನ ಸಂಪ್ರದಾಯವಿದ್ದಾಗ್ಯೂ ಅತ್ಯಂತ ಸರಾಗವಾಗಿ ಕೀರ್ತನೆಗಳ ರಚನೆಗೆ ತೊಡಗಿದುದೇ ಒಂದು ಸಾಧನೆ ಎನ್ನಬಹುದು. ಮುಂದುವರೆದು ಆಕೆಯ ಕುರಿತು ಈ ಅಧ್ಯಾಯದ ಮುಂದಿನ ಅಧ್ಯಾಯಗಳಲ್ಲಿ ಪ್ರಸ್ತಾಪಿಸಲಾಗಿದೆ.

### ಭಾಗಮ್ಮ

ಭಾಗಮ್ಮ 'ಗಲಗಲಿ ಅವ್ವ'ನವರ ಕಾಲದಲ್ಲಿ ಅವರ ಅಣತಿಯಂತೆ ಕೃತಿ ರಚನೆಗೆ ತೊಡಗಿದರೆಂದು ತಿಳಿದುಬರುತ್ತದೆ. ಭಾಗಮ್ಮ ಅವ್ವನವರಿಗೆ ಶಿಷ್ಯೆಯಾಗಿದುದು ಎಲ್ಲಿಯೂ ಈ ಕುರಿತು ಹೆಚ್ಚಿನ ಮಾಹಿತಿಯಿಲ್ಲ. ಆದರೆ ಸರೋಜಿನಿ ಮಹಿಷಿಯವರು ತಮ್ಮ ಕೃತಿ ''ಕರ್ನಾಟಕದ ಕವಯತ್ರಿ''ಯಲ್ಲಿ ಅವ್ವನವರ ಜೊತೆ ಕಾಶಿಗೆ ಹೋಗುತ್ತಿರುವಾಗ ಭಾಗಮ್ಮ 'ಕಾಲರ ಬೇನೆಯಿಂದ ಪೀಡಿತಳಾದಳಂತೆ. ಆಗ ಅವ್ವನ ಆದೇಶದಂತೆ ಭಾಗವತದ ತೃತೀಯ ಸ್ಕಂದವನ್ನು ರಚಿಸಿ ರೋಗ ಮುಕ್ತಳಾದಳಂತೆ' ಎಂಬ

ಐತಿಹ್ಯವನ್ನು ತಿಳಿಸಿರುವರು. ಭಾಗಮ್ಮ ತನ್ನ ಕೃತಿಯಲ್ಲಿ ರಚಿಸಿರುವ ಕಥೆಯು ವಿಶೇಷವಾಗಿ ಹರಿಯ ಚರಿತ್ರೆಯನ್ನು ತಿಳಿಸುವುದಾಗಿದೆ.

ಇಲ್ಲಿನ ಕಥೆಯು ದುರ್ಯೋಧನನ ಕಟು ನುಡಿಗಳನ್ನು ಕೇಳಿದ ವಿದುರನು ಪಾಪ ಪರಿಹಾರಕ್ಕಾಗಿ ತೀರ್ಥಯಾತ್ರೆಗೆ ಹೊರಟನು. ದಾರಿಯಲ್ಲಿ ಅವನಿಗೆ ಉದ್ಧವನೆಂಬುವನು ಸಿಕ್ಕಿದನು. ಆಗ ವಿದುರನು ತನಗೆ ಹರಿಯ ಚರಿತ್ರೆಯನ್ನು ಹೇಳಬೇಕೆಂದು ಕೋರಿದಾಗ, ಈ ಕೋರಿಕೆಯನ್ನು ನೆರವೇರಿಸಲು ಶಕ್ತನಾದವನು ಮೈತ್ರೇಯ ಋಷಿ ಸಮರ್ಥನೆಂದು ಉದ್ಧವ ಉತ್ತರವಿತ್ತನು. ಹೀಗೆ ಮೈತ್ರೇಯರಿಂದ ಹರಿಯ ಚರಿತ್ರೆಯನ್ನು ತಿಳಿಯುವುದೇ ಇಲ್ಲಿನ ಕಥಾವಸ್ತು ಭಾಗಮ್ಮ ತನ್ನ ಕೃತಿಯುದ್ದಕ್ಕೂ ಭಾಗವತದ ನಾಮ ಸಂಕೀರ್ತನೆಯನ್ನೇ ಮುಖ್ಯ ಉದ್ದೇಶವಾಗಿಸಿಕೊಂಡಿರುವುದು ಈಕೆಯ ಕಾವ್ಯದಿಂದ ತಿಳಿಯ ಬಹುದಾಗಿದೆ.

ಭಾಗಮ್ಮ ಅಥವಾ ಪ್ರಯಾಗವ್ವ ಅವ್ವನವರ ಜೊತೆಯಲ್ಲಿಯೇ ಇದ್ದು ಅವರ ಹಾಡುಗಳಿಂದ ಪ್ರಭಾವಿತಳಾಗಿ ತಾನೂ ಹಾಡುತ್ತಾ, ಹಾಡುಗಳನ್ನು ರಚಿಸಿದ್ದಾಳೆ. ಅವ್ವನವರ ಶಿಷ್ಯೆಯಾಗಿ ತಾನು 'ಏಸು ಜನ್ಮದ ಪುಣ್ಯದ ಫಲವೋ' ಎಂಬುದಾಗಿ ತನ್ನ ಹಾಡೊಂದರಲ್ಲಿ ಹೇಳಿಕೊಂಡಿದ್ದಾಳೆ.

''ಕಾಶೀ ಪಟ್ಟಣದಲ್ಲಿ ವಾಸಾದ ಭಾಗಮ್ಮ ಕಟ್ಟಿದ ಪದ್ಯವನು
ಭೂಸುರರೆಲ್ಲರೂ ಉದಾಸೀನ ಮಾಡದೆ ಲೇಸಾಗಿ ಪದ್ಯವನು ತಿದ್ದುವುದು''[೬]

ಈಕೆ ತನ್ನ ಕಾವ್ಯವನ್ನು 'ಪಾಂಡುರಂಗ' ಅಂಕಿತದಲ್ಲಿ ರಚಿಸಿದ್ದು, ಕನ್ನಡದ ಆಡುಭಾಷೆಯಲ್ಲಿ ತತ್ವ ನಿರೂಪಣೆಗೆ ಹೆಚ್ಚು ಆಸಕ್ತಿ ತೋರಿಸಿದ್ದಾಳೆ. ಭಾಗಮ್ಮ ರಚಿಸಿದ ಕೆಲವು ಕೃತಿಗಳು ಮಾತ್ರ ದೊರೆತಿದ್ದು, ಅವುಗಳಲ್ಲಿ ಉರುಟಣೆ ಹಾಡು, ಭೂಮದ ಹಾಡು, ಹಸೆ ಕರದ ಹಾಡುಗಳನ್ನು ರಚಿಸಿದ್ದು, ಆಕೆಗೆ ಪ್ರಯಾಗವ್ವ ಎಂಬ ಹೆಸರಿನಿಂದ ದಾಸ ಸಾಹಿತ್ಯದಲ್ಲಿ ಗುರುತಿಸಿದ್ದಾರೆ. ಈಕೆ ತನ್ನ ಹಾಡೊಂದರಲ್ಲಿ, ಭಾಗಮ್ಮ ಎಂದು ತನ್ನನ್ನು ಕರೆಯುತ್ತಿದ್ದರೆಂದು ತಿಳಿಸಿದ್ದಾಳೆ. ಕನ್ನಡದಲ್ಲಿ ಅತ್ಯಂತ ಸರಳವಾಗಿ ತತ್ವಪದವನ್ನು ಹಾಡುವ ಮೂಲಕ ದಾಸ ಸಾಹಿತ್ಯದ ಮಹಿಳಾ ವಲಯದಲ್ಲಿ ದ್ವಿತೀಯ ಹರಿದಾಸ ಮಹಿಳೆ ಎನಿಸುತ್ತಾಳೆ.

ಈಕೆಯ ಕುರಿತು ಹೆಚ್ಚಿನ ಅಧ್ಯಯನಗಳು ನಡೆಯಬೇಕಾಗಿರುವುದು, ಆಡುಭಾಷೆಯಲ್ಲಿ ಅಂದು ತತ್ವಜ್ಞಾನದ ತಿರುಳು ಹೊಂದಿರುವ ಹಾಡುಗಳಿಂದ ಜನಸಾಮಾನ್ಯರ ಬದುಕಿನ ಬೇಗುದಿ ಪರಿಹರಿಸುವ ಮಾರ್ಗಗಳ ತಿಳಿಸುವ ನಿಟ್ಟಿನಲ್ಲಿ ಭಾಗವ್ವ ಪ್ರಮುಖಳಾಗುತ್ತಾಳೆ. ಈ ನಿಟ್ಟಿನಲ್ಲಿ ಪ್ರಯಾಗವ್ವ ಬಾಯಿ/ ಭಾಗಮ್ಮನ ಕೀರ್ತನೆಗಳು ಇನ್ನಷ್ಟು ಅಧ್ಯಯನಕ್ಕೆ ಒಳಗಾಗಿ ಆ ಕುರಿತು ಬೆಳಕು ಚೆಲ್ಲಬೇಕಾಗಿರುವುದು.

## ಹರಪನಹಳ್ಳಿ ಭೀಮವ್ವ

''ಹರಪನಳ್ಳಿ ಭೀಮವ್ವನವರ ಕಾಲ ಸ್ವಭಾನು ಸಂವತ್ಸರದ ಜೇಷ್ಠ ಬಹುಳ ೧೩ರಂದು, ಅಂದರೆ ಕ್ರಿ.ಶ.೧೮೨೩ರಂದು ಜುಲೈ ೬ರ ಭಾನುವಾರದಂದು ಹುಟ್ಟಿದರು.''[೭] ಅದರೊಂದಿಗೆ ಅವ್ವನವರು ಮನೆಯ ಪ್ರೀತಿಯ ಮಗಳಾಗಿ ಬೆಳೆಯಲಾರಂಭಿಸಿದಂತೆ, ಆಕೆಯ ಮನೆಯ ಪರಿಸರವು ಅದಕ್ಕೆ ಪೂರಕವಾಗಿತ್ತು. ಅದೇನೆಂದರೆ, ಅವ್ವನವರ ತಾಯಿಯ ತಂದೆ ವೆಂಕಟಪ್ಪಚಾರ್ಯರು ಜೋಯಿಸರಾಗಿದ್ದು ಸುತ್ತಲಿನ ಆ ಪ್ರದೇಶದಲ್ಲಿ ಜನಪ್ರಿಯ ಹರಿದಾಸರಾಗಿದ್ದರು. ಸದಾ ಹರಿನಾಮ ಸ್ಮರಣೆಯಲ್ಲಿ ನಿರತರಾಗಿದ್ದುದರಿಂದ ಚಿಕ್ಕಂದಿನಲ್ಲಿಯೇ ಹರಿಭಕ್ತಿ ತುಂಬಿದ ವಾತಾವರಣದಲ್ಲಿ ಬೆಳೆಯಲು ಕಾರಣವಾಯಿತು. ಹಾಗಲ್ಲದೇ, ಅವ್ವನವರ ತಂದೆ ತಾಯಿಯರು ಕೂಡ ಪ್ರಸಿದ್ಧ ಯಜುರ್ವೇದಿ ರಾಘವೇಂದ್ರ ಮಠದ ಅನುಯಾಯಿಗಳಾಗಿದ್ದರು.

ಈ ಎಲ್ಲ ಕಾರಣಗಳಿಂದ ಭೀಮವ್ವನಿಗೆ ಬಾಲ್ಯದಿಂದಲೇ ಹರಿನಾಮ ಸಂಕೀರ್ತನೆ ಗಾಳಿ ನೀರಿನಷ್ಟೇ ಸರಾಗವಾಗಿ ದೊರೆಯಲಾರಂಭಿಸಿದ್ದು, ಆಕೆಯ ಭಗವದ್ಭಕ್ತಿಗೆ ಪೂರಕವಾದ ಪರಿಸರವು ಸರಾಗವಾಗಿ ನಿರ್ಮಾಣಗೊಂಡಿತ್ತು. ಅವ್ವನವರು ಬಾಲ್ಯದಿಂದಲೇ ಅನೇಕ ಪವಾಡಗಳನ್ನು ನಡೆಸಿದ್ದವರೆಂದು ಅವರ ವಂಶಸ್ಥರಲ್ಲಿ ಹಾಗೂ ಜನಸಾಮಾನ್ಯರಲ್ಲಿ ನಂಬಿಕೆಯಿತ್ತು. ಅದಕ್ಕೆ ಅವ್ವನವರ ಬಾಲ್ಯದ ಬದುಕಿನ ಅನೇಕ ಪವಾಡಗಳನ್ನು ಹೆಸರಿಸಬಹುದಾಗಿದೆ.

ಅವುಗಳಲ್ಲಿ ''ಬಹು ಸ್ವಾರಸ್ಯಕರವಾದ ಘಟನೆಗಳೆಂದರೆ, ಅವ್ವನವರ ''ಎರಡನೇ ವರ್ಷದ ಹುಟ್ಟು ಹಬ್ಬದ ಸಂಭ್ರಮದಲ್ಲಿ ಮಗುವನ್ನು ಚಿನ್ನದ ಹೂವಿನಿಂದ ಅಲಂಕರಿಸಿ ಸಂತೋಷಿಸುತ್ತಿದ್ದಾಗ, ರಾತ್ರಿ ಮಲಗಿದ್ದ ಮಗು ಇದ್ದಕ್ಕಿದಂತೆಯೇ 'ಚೇಳು ಬಂದಿದೆ ಎಂದು' ಕೂಗಿ ಅಳಲಾರಂಭಿಸಿತು. ಮನೆಯವರೆಲ್ಲರೂ ಎದ್ದು ಹುಡುಕಲಾರಂಭಿಸಿದರೂ ಕಾಣದೆ, ಮಗುವನ್ನೇ ಕೇಳಲು, ಅಳುತ್ತಿದ್ದ ಮಗು ತನ್ನ ಮುಂದಲೆಯಲ್ಲಿ ಇರುವ ಚಿನ್ನದ ಹೂವಿನ ಕೆಳಗಿರುವುದು ಎಂದಾಗ ಮನೆಯ ಹಿರಿಯರು ಚಿನ್ನದ ಹೂವನ್ನು ತೆಗೆದು ನೋಡಿದರೆ ಹೂವಿನಡಿಯಲ್ಲಿ ಚೇಳು ಕುಳಿತಿತು ಎಂಬುದು. ಅವ್ವನವರು ಚಿಕ್ಕವಯಸ್ಸಿನಲ್ಲಿಯೇ ಮುಂದೆ ನಡೆಯುವ ಅನೇಕ ವಿಷಯಗಳನ್ನು ತಿಳಿದಿದ್ದರು ಎಂಬುದಕ್ಕೆ ಸಾಕ್ಷಿ.

ಭೀಮವ್ವ ಬಾಲ್ಯದಿಂದಲೇ ಹರಿಭಕ್ತಿಯಲ್ಲಿ ಬೆಳೆಯುತ್ತಾ ಬಂದಳು. ಆಕೆಯ ದೈವಭಕ್ತಿಯು ಸುತ್ತಲಿನ ಪ್ರದೇಶದವರೆಲ್ಲರಿಗೂ ತಿಳಿದಿತ್ತು. ನಾಲ್ಕು ವರ್ಷದ ಭೀಮವ್ವಳ ಮೈಮೇಲಿನ ಆಭರಣದ ಆಸೆಗಾಗಿ ಅಪಹರಿಸಿದ ಸಿಪಾಯಿಯೊಬ್ಬ, ಕಣ್ಣು ಕಾಣದೆ, ದಿಕ್ಕುಗೆಟ್ಟು, ಅಲ್ಲಿಯೇ ಅಕ್ಕಪಕ್ಕ ಓಡಾಡುತ್ತಿದ್ದ ಜನರನ್ನು ಕೇಳಿ ಈ ಮಗುವಿನ ಮನೆಯ ಹತ್ತಿರ ಕರೆದುಕೊಂಡು ಹೋದಾಗ,

ಮನೆಯವರ ಬಳಿ ಕ್ಷಮೆ ಬೇಡಿ, ತನ್ನಲ್ಲಿದ್ದ ಹಣವನ್ನು ಆ ಮಗುವಿಗಿತ್ತು ಹೊರಟಾಗ ಆತನಿಗೆ ದೃಷ್ಟಿ ಪುನಃ ಬಂದಿತು."[೮]

ಹೀಗೆ ಅವ್ವನವರು ದೈವಭಕ್ತಿಯನ್ನು ತಮ್ಮ ಉಸಿರಾಗಿಸಿಕೊಂಡು ಬೆಳೆದವರು. ಆಕೆಗೆ ಬೇರೆ ಮಕ್ಕಳಂತೆ ಆಟ ಪಾಠಗಳಲ್ಲಿ ಆಸಕ್ತಿಯಿರದೆ ಸದಾ ಹರಿಭಜನೆಯಲ್ಲಿ ಪಾಲ್ಗೊಳ್ಳುತ್ತಾ, ಭಗವನ್ನಾಮ ಸ್ಮರಣೆಯೇ ಬದುಕಿನ ಕೇಂದ್ರವೆನಿಸತೊಡಗಿತು.

ಹರಪನಹಳ್ಳಿ ಭೀಮವ್ವ ಓದು ಬರಹ ತಿಳಿಯದ ನಿರಕ್ಷರಕುಕ್ಷಿ ಎಂಬುದು ಆದರೆ ಅವರ ವಂಶಸ್ಥರು ಅವ್ವ ಬಾಯಿ ಮಾತಿನ ಮೂಲಕವೇ ಅಪಾರ ವಿದ್ಯೆಯನ್ನು ತಿಳಿದಿದ್ದಳು ಎನ್ನುತ್ತಾರೆ. ಮನೆಯಲ್ಲಿ ಭಕ್ತಿಪರಿಸರ, ಪುರಾಣ, ಹರಿಕಥೆಗಳನ್ನು ಶ್ರವಣ ಮಾತ್ರದಿಂದಲೇ ಗ್ರಹಿಸುವುದು ಶ್ರಾವಣ ಮಾಸದಲ್ಲಿ ನಡೆಯುವ ಗೌರಿಪೂಜೆ, ಹಾಡುಗಳಲ್ಲಿ ಭಾಗವಹಿಸುವುದು, ಹೀಗೆ ನಿರಂತರವಾಗಿ ಹರಿ ಭಜನೆಯು ಅವ್ವನವರ ದೈವಭಕ್ತಿಗೆ ಪ್ರೇರಣೆಯಾಯಿತು. ಹರಿಭಕ್ತಿಯು ಅವ್ವನವರಲ್ಲಿ ಸಹಜ ಆಸಕ್ತಿಯಾಗಿತ್ತು.

''ಭೀಮವ್ವನವರಿಗೆ ರಾಯದುರ್ಗ ತಾಲೂಕಿನ ಹಿರೇಸಮುದ್ರ ಗ್ರಾಮದ ಕುಲಕರ್ಣಿ ಮನೆತನದ ಗೋಪಾಲಪ್ಪನವರ ಮಗ ಮುನಿಯಪ್ಪನವರೊಡನೆ ವಿವಾಹವಾಯಿತು. ಮುನಿಯಪ್ಪನವರ ತಾತನವರಾದ ಮೋನಪ್ಪನವರು ಹರಪನಹಳ್ಳಿ ಸಂಸ್ಥಾನದ ದಿವಾನರಾಗಿದ್ದು, ಅಪಾರವಾದ ಸಿರಿವಂತರಾಗಿದ್ದರು. ಮುನಿಯಪ್ಪನವರ ಮನೆಯು ದಾನಧರ್ಮ, ಜನಕಲ್ಯಾಣದಲ್ಲಿ ಹೆಚ್ಚು ತೊಡಗಿಸಿಕೊಂಡಿದ್ದರು. ಶ್ರೀಮಂತ ಮನೆಯ ಜನಹಿತ ಕಾರ್ಯವನ್ನು ಅಂದಿನ ಭಾಗಣ್ಣದಾಸರು, ತಿಮ್ಮಣ್ಣದಾಸರು, ಆದವಾನಿ ಶ್ರೀಪತಿದಾಸರು ತಮ್ಮ ಕೃತಿರಚನೆಗಳಲ್ಲಿ ಹಾಡಿ ಹೊಗಳಿದ್ದಾರೆ."[೯]

ಹೀಗೆ, ಶ್ರೀಮಂತ ಕುಟುಂಬಕ್ಕೆ ಸೇರಿದ ಅವ್ವನವರು ಮೊದಲಿಗೆ ಹರುಷದಿಂದಲೇ ಜೀವನ ಆರಂಭಿಸಿದರು. ಮುನಿಯಪ್ಪನವರ ಮೂರನೇ ಹೆಂಡತಿಯಾದ ಭೀಮವ್ವಳನ್ನು ಗಂಡನ ಮನೆಯಲ್ಲಿ 'ಕೃಷ್ಣಬಾಯಿ' ಎಂದೂ ಕರೆಯುತ್ತಿದ್ದರು. ಈ ದಂಪತಿಗಳಿಗೆ ಸ್ವಾಮಿರಾಯ ಮತ್ತು ಸುಬ್ಬಬಾಯಿ ಎಂಬ ಮಕ್ಕಳು ಜನಿಸುತ್ತಾರೆ. ಕ್ರಮೇಣ ಭೀಮವ್ವನವರ ಬದುಕಿನಲ್ಲಿ ಹಲವಾರು ಬದಲಾವಣೆಗಳಾದವು. ಮನೆಯಲ್ಲಿ ಕಳ್ಳತನವಾಯಿತು, ಬಡತನ ಪ್ರಾರಂಭವಾಯ್ತು ಇದೆಲ್ಲಾ ನಡೆದ ಒಂದು ವರ್ಷದ ಅವಧಿಯಲ್ಲೇ ಮುನಿಯಪ್ಪನವರೂ ಸಹ ಕಾಲವಾಗುತ್ತಾರೆ.

ಹಾಗಾಗಿ ವಿವಾಹವಾದ ೧೫ನೇ ವರ್ಷಕ್ಕೆ ಭೀಮವ್ವ ವೈಧವ್ಯಕ್ಕೆ ಗುರಿಯಾದಳು. ಇಲ್ಲಿಂದ ಶುರುವಾಯಿತು ಆಕೆಗೆ ಬದುಕಿನ ಬವಣೆ. ತನ್ನ ೩೬ನೇ ವಯಸ್ಸಿನಲ್ಲಿ ವಿಧವೆಯಾದ ಅವ್ವನವರಿಗೆ

ಎರಡು ಜವಾಬ್ದಾರಿಗಳಾದವು, ಮೊದಲನೆಯದು ಮಕ್ಕಳ ಪಾಲನೆ, ಎರಡನೆಯದು ವೈಧವ್ಯದಿಂದ ಪಾರಾಗಿ ಬದುಕಿನಲ್ಲಿ ನೆಮ್ಮದಿ ಹುಡುಕುವುದು ಹರಿನಾಮ ಸ್ಮರಣೆಗೆ ತೊಡಗುವುದು. ಈ ಹಿನ್ನೆಲೆಯಲ್ಲಿಯೇ ಬಹುಪಾಲು ಆಕೆಗೆ ಬದುಕಿನ ಕಷ್ಟಗಳನ್ನು ಎದುರಿಸಲು ಹರಿಭಜನೆ, ಹರಿನಾಮ ಸ್ಮರಣೆಗಳೇ ಕಾರಣವಾದವು.

ಅವ್ವನವರು ತಮ್ಮ ಜೀವಿತದುದ್ದಕ್ಕೂ ವಿಶಿಷ್ಟವಾದ ಅನುಭವಗಳಿಂದ ತೊಳಲಾಡಿದವರು. ಏಕೆಂದರೆ ಮೊದಮೊದಲು ಆಕೆಯ ದೈವಭಕ್ತಿಯು ಹೊರಸೂಸುತ್ತಿದುದು ಹರಿಭಜನೆಗಳಿಂದ. ಆದರೆ ವಿಧವೆಯಾದ ನಂತರದ ದಿನಗಳಲ್ಲಿ ತಮ್ಮ ದೈವಭಕ್ತಿ ಅನುಭವಗಳನ್ನು, ಮನಸ್ಸಿನಲ್ಲಿ ಹಾಡುಗಳಂತೆ ಮೂಡಿ ಬರುತ್ತಿದ್ದುದು. ಅದನ್ನಾಕೆ, ಹಾಡದೆ ಹಿಂಜರಿದರೆ, ತಲೆಶೂಲೆ, ಹೊಟ್ಟೆನೋವಿನಿಂದ ನರಳುತ್ತಿದ್ದು, ಮನೆಯವರೊಡನೆ ಈ ಕುರಿತು ಹೇಳಿದಾಗ ಅವ್ವನವರ ಮನೆಯವರು ಪ್ರಾರಂಭದಲ್ಲಿ ಹಿಂಜರಿದರೂ ಅನಂತರ ಅವ್ವನವರು ತೊಳಲಾಡುತ್ತಿದ್ದುದ್ದನ್ನು ನೋಡಲಾರದೆ ದೇವರನ್ನು ಬೇಡಿಕೊಂಡು ಮಲಗಿಕೋ, ಸ್ವಪ್ನ ಫಲದಂತೆ ನಡೆದುಕೋ ಎಂದರು, 'ಹಾಡು ಮಾಡಿದರೆ ದೋಷಿಲ್ಲ' ಎಂಬ ಸ್ವಪ್ನ ಫಲದ ಮೇರೆಗೆ ಅವ್ವ ಹಾಡಲು ದಾರಿ ತೋರಿದಂತಾಯ್ತು."[೧೦]

ಅವ್ವನವರು ವಿಶಿಷ್ಟವಾದ ತಮ್ಮ ಅನುಭವಗಳ ಮೂಲಕ ತನ್ನೊಳಗೆ ನಡೆಯುವ ಭಕ್ತಿಯ ಪರವಾದ ಅನಿಸಿಕೆಗಳನ್ನು ಹಾಡುಗಳ ಮೂಲಕ ರಚಿಸಿಲು ಆರಂಭಿಸಿದರು. ಭೀಮವ್ವನವರಿಗೆ ಈ ರಚನೆಗಳು ಮೊದಲು ಸ್ವಪ್ನದಲ್ಲಿ ಕಾಣಿಸಿಕೊಂಡು, ಕ್ರಮೇಣ ಹಾಡಾಗಿ ಹೊರ ಹೊಮ್ಮಿವೆ.

ಭೀಮವ್ವನವರ ಸಾಹಿತ್ಯ ರಚನೆಯು ಅವರ ಸ್ವಪ್ನಫಲದಂತೆ ರಚನೆಯಾಗಲಾರಂಭಿಸಿತು. ಅವ್ವನವರು ತವರಿನ ಹೆಸರಾದ 'ಭೀಮವ್ವ' ಹಾಗೂ ಗಂಡನ ಮನೆಯ ಹೆಸರು 'ಕೃಷ್ಣಬಾಯಿ' ಎರಡು ಹೆಸರುಗಳಿಂದ 'ಭೀಮೇಶ ಕೃಷ್ಣ' ಎಂಬ ಅಂಕಿತದಿಂದ ಪ್ರಾರಂಭಿಸಿರುವರು. ಆದರೆ ಜೀವನ ಚರಿತ್ರೆ ಹಾಗೂ ಹಾಡುಗಳುಳ್ಳ ಕೈ ಬರಹ ಪ್ರತಿಯಲ್ಲಿ ಭೀಮವ್ವನಿಗೆ ಸ್ವಪ್ನಂಕಿತ ಪ್ರಾಪ್ತಿಯಾಯಿತು ಎನ್ನವುದಕ್ಕೆ ಘಟನೆಯೊಂದನ್ನು ವಿವರಿಸಲಾಗಿದೆ. "ಒಂದು ದಿನ ಮಧ್ಯಾಹ್ನ ಮನೆಯಲ್ಲಿ ಭೀಮಕ್ಕ ಒಬ್ಬಳೇ ಮಲಗಿರುವಾಗ ಸ್ವಪ್ನದಲ್ಲಿ, ತಾನೊಂದು ಅರಣ್ಯದಲ್ಲಿ ಮರದ ಕೆಳಗೆ ಮಲಗಿದಂತೆಯೂ, ಅಲ್ಲಿಗೆ ತಂಬೂರಿ ಧರಿಸಿದ ಬ್ರಾಹ್ಮಣನೊಬ್ಬ ಬಂದು ಅಲ್ಲಿದ್ದ ಕೃಷ್ಣ ಸರ್ಪಕ್ಕೆ ತನ್ನ ನಾಲಿಗೆಯ ಮೇಲೆ ಒಂದು ಅಕ್ಷರ ಬರೆಯುವಂತೆ ಹೇಳಿದನಂತೆ, ಆ ಸರ್ಪ ಹಾಗೇ ಬರೆಯಿತು." ಅಂದಿನಿಂದ ಆಗಾಗ್ಗೆ ಅವ್ವನವರಿಂದ ಅಪ್ರಯತ್ನವಾಗಿಯೇ ಹಾಡುಗಳು ಬರಲಾರಂಭಿಸಿದವು. ಮೊದಲು ಹಾಗೆ ಬಂದ ಹಾಡೇ "ರಕ್ಷಿಸಬೇಕೆನ್ನ ಲಕ್ಷ್ಮೀನರಸಿಂಹ ಭಕ್ತನೆ" ಎಂಬುದಾಗಿದೆ.[೧೧]

ಅದೇ ವೇಳೆ ನಾರದರಿಂದ ಸ್ವಪ್ನಾಂಕಿತವಾಯಿತು ಎಂದೂ ಹೇಳಲಾಗಿದೆ. ಅವ್ವನವರ ಮೊದಲ ಸ್ವಪ್ನಾಂಕಿತ ಹಾಡು.

''ಯಾತಕವನಿಯೋಳು ಜನಿಸಿದೆ ನಾನು, ಸಾರ್ಥಕವೇನು
ನೀತಿಯಿಲ್ಲದೆ ಮಾತಿನಲ್ಲೇ(ಕಾಲಕಳೆವೆ ನಾನು, ಕೋತಿ ಸಾರ್ಥಕವೇನು
ಬಿಟ್ಟು ಚಲಿಸದೇ ನೀನ್ನಲ್ಲೊ ಮನಸಿಟ್ಟನೆನೋ
ವಾಸಿಷ್ಠ ಭೀಮೇಶ ಕೃಷ್ಣನ ಭಜಿಸುತ್ತಿರುವೆನೇನು,
ಕೋತಿನಾಥ ಸಾರ್ಥಕೇನು?''

ಎಂದು ಹನುಮ, ಭೀಮ, ಮಧ್ವ ಅವತಾರಗಳ ವರ್ಣಿಸಿರುವ ಈ ಹಾಡು ಅವ್ವನವರಿಗೆ ಅಂಕಿತ ಪ್ರಧಾನವಾದ ನಂತರ ಬಂದಿರುವ ಮೊದಲ ರಚನೆ ಇದಾಗಿದೆ. ಹರಪನಳ್ಳಿ ಭೀಮವ್ವನವರ ಸಾಹಿತ್ಯ ಕೃಷಿಯು ಅನೇಕ ವಿಧಗಳಲ್ಲಿದೆ. ಅವುಗಳು ಏಕಮುಖಿಯಾಗಿ ಭಕ್ತಿ ಪ್ರಾಧನ್ಯತೆಯನ್ನು ತೋರಿದರೂ ಅವುಗಳಲ್ಲಿರುವ ಕಥೆ, ವಸ್ತು, ಮಹಾಭಾರತ, ರಾಮಾಯಣ, ಭಾಗವತ ಪುರಾಣಗಳಿಂದ ಪ್ರೇರಣೆ ಪಡೆದವುಗಳಾಗಿವೆ.

ಭೀಮವ್ವನವರು ತಮ್ಮ ರಚನೆಗಳೆಲ್ಲವನ್ನು ರಾತ್ರಿ ಕನಸಿನಲ್ಲಿ ಕಂಡುಬರುವ ಪ್ರಸಂಗಗಳನ್ನೇ ಹಾಡಾಗಿಸಿದುದು ಅವ್ವನವರ ವೈಶಿಷ್ಟ್ಯ ಎಂತಲೇ ಗುರುತಿಸಬಹುದಾಗಿದೆ. ಈ ಹಿನ್ನೆಲೆಯ ರಚನೆಗಳು ಅಪ್ರಯತ್ನವಾಗಿ, ಸಹಜವಾಗಿ ಕುಳಿತಲ್ಲೇ ರಚಿಸುವುದು ಭೀಮವ್ವಳಿಗೆ ಒಲಿದು ಬಂದ ವಿದ್ಯೆಯಾಗಿತ್ತು.

## ಹರಪನಹಳ್ಳಿ ಭೀಮವ್ವನವರ ಕೃತಿಗಳು

ಭೀಮವ್ವ ರಚಿಸಿರುವ ಬಹುಪಾಲು ಹಾಡುಗಳು ಸಂಪ್ರದಾಯ ಹಾಗೂ ಪುರಾಣ ಪ್ರಸಂಗಗಳನ್ನು ಚಮತ್ಕಾರವಾಗಿ ಕಟ್ಟಿದವುಗಳಾಗಿವೆ. ಅವುಗಳಲ್ಲಿ, ಕೀರ್ತನೆ, ಸುಳಾದಿ, ಉಗಾಭೋಗಗಳೆಂದು ಮೂರು ಪ್ರಕಾರಗಳಲ್ಲಿ ಕಾಣಬಹುದು ಒಂದು ಉಗಾಭೋಗ, ಎರಡು ಸುಳಾದಿಗಳು, ಹಾಗೂ ಉಳಿದವು ಬಹುಪಾಲು ಕೀರ್ತನೆಗಳನ್ನು ಹೋಲುವಂತಿರುವ ಹಾಡುಗಳು ಒಟ್ಟಾರೆ, ೧೪೦ ಸಣ್ಣ ಹಾಡುಗಳಿವೆ. ಅವುಗಳಲ್ಲಿ ೧೯೩ ಹಾಡುಗಳು ದೀರ್ಘ ಕಥನಗಳಾಗಿವೆ. ಮಹಿಳಾ ಹರಿದಾಸರಲ್ಲಿ ಕಾಣುವ ಸುದೀರ್ಘ ಕಥನ ಹಾಡುಗಳ ರಚನೆಯು ಭೀಮವ್ವರ ವೈಶಿಷ್ಟ್ಯವಾಗಿದೆ.

ಪುರಂದರದಾಸರಂತೆ ಭೀಮವ್ವ ಕೂಡ ತನ್ನ ಕೃತಿಗಳಲ್ಲಿ ವಿಶೇಷವಾಗಿ ಹರಿಭಕ್ತಿಯನ್ನು ಮೂಲ ಆಕರವಾಗಿಸಿದ್ದಾಳೆ. ಅವುಗಳ ವಸ್ತು, ವಿಷಯಗಳೆಲ್ಲವೂ ದಾಸ ಸಾಹಿತ್ಯದ ಸಂಪ್ರದಾಯಂತೆ ಹಾಡಿದವು ಗಳಾಗಿವೆ. ವಿಷ್ಣುಭಕ್ತಿಯನ್ನು ಹೇಳುವ ಶ್ರಾವಣಮಾಸದ ಹಾಡು, ಶನಿವಾರದಹಾಡು, ನಳಚರಿತ್ರೆ, ಮುಯ್ಯದ ಹಾಡು, ಜಲಕ್ರೀಡಹಾಡು, ವೆಂಕಟೇಶ ಮಹಾತ್ಮೆ ಸುಧಾಯನ ಹಾಡು ಮುಂತಾದವುಗಳನ್ನು

ಕಾಣಬಹುದಾಗಿದೆ. ಭೀಮವ್ವ ತನ್ನ ಹಾಡುಗಳಿಗೆ ಯಾವುದಾದರೂ ಪುರಾಣದ ಕತೆ, ವ್ರತಕತೆಯಲ್ಲಿನ ಪ್ರಸಂಗವನ್ನು ಆಯ್ದುಕೊಂಡು ವರ್ಣನೆ, ವೈಭವಗಳ ಮೂಲಕ ದೀರ್ಘಕಥೆ ಹೆಣೆಯುವುದು ವೈಶಿಷ್ಟ್ಯವಾಗಿತ್ತು.

ಭೀಮವ್ವನವರ ಕೃತಿಗಳ ವಸ್ತು, ಭಾಗವತ, ರಾಮಾಯಣ, ಮಹಾಭಾರತಗಳು ವಿಷ್ಣು ಭಕ್ತಿಯನ್ನು ತುಂಬಿಕೊಡುವ ಮೇರುಕೃತಿಗಳು ವಿಷ್ಣುವಿನ ದಶಾವತಾರ ಹಾಗೂ ಮಹಿಮೆಗಳನ್ನು ದಾಸರು ವಿವರಿಸುತ್ತಾ ಸಾಮಾಜಿಕರಲ್ಲಿ ಜೀವನ ಮೌಲ್ಯಗಳನ್ನು ಹೇಳುವಲ್ಲಿ ಯಶಸ್ವಿಯಾದವರು. ಹನುಮ, ಭೀಮ, ಮಧ್ವ ಈ ಮೂರು ಅವತಾರತ್ರಯರಲ್ಲಿ ನಂಬಿಕೆಯಿರುವ ಹರಿದಾಸರು ಈ ಅವತಾರಗಳ ಮಹತ್ವವನ್ನು ವಿಭಿನ್ನವಾಗಿ ಹೇಳುವುದರಲ್ಲಿ ತಮ್ಮ ವೈಶಿಷ್ಟ್ಯವನ್ನು ಮೆರೆದಿದ್ದಾರೆ.

ಹರಪನಹಳ್ಳಿ ಭೀಮವ್ವ ಮಹಾಕಾವ್ಯಗಳ ಪ್ರಸಂಗಗಳನ್ನು ಅತ್ಯಂತ ಸೊಗಸಾಗಿ ಹೇಳಿರುವಳು. ಮಹಾಭಾರತ, ರಾಮಾಯಣ ಹಾಗೂ ಭಾಗವತ ಪುರಾಣ ಮತ್ತು ಶಾಕುಂತಲ ನಾಟಕಗಳಿಂದ ಪ್ರಭಾವಿತಳಾಗಿದ್ದ ಭೀಮವ್ವ, ಪುರಂದರದಾಸರು ರಚಿಸಿರುವಂತೆಯೇ ಕೃಷ್ಣನ ಬಾಲಲೀಲೆಗಳನ್ನು ರಚಿಸುವಾಗ ಬಾಲಭಾಷೆಯನ್ನೇ ಬಳಸಿದ್ದಾಳೆ.

''ನೋಡೆ ಗೋಪ್ಯಮ್ಮ ಕೃಷ್ಣಂಚಾಳಿಯ ನೀ
ಮಾಡಿ ಬಿಟ್ಟಿಯೇ ಇಂಥ ಗೂಳಿಯ ಇಂಥ ಧಾಳಿಯ ||ಪ||
ಹಾಲು ಮೊಸರ ಕೆನೆ ಬೇಡುವ ಕಡ
ಗೋಲಿಂದ್ಹೊಡೆದು ನಮ್ಮ ನೋಡುವ ಬಂದು ಕಾಡುವ ||೧||
ತುಪ್ಪದ ಕೊಡದುಪ್ಪ ನೊಡೆದೆನೆ ಕಂ
ದರ್ಪನಪ್ಪನು ಈತೇನ್ಹುಡುಗನೆ ಇಂಥ ತುಡುಗನೆ ||೨||
ಕರೆದು ಕೈಯಲ್ಲಿ ಬೆಣ್ಣೆಯ ಮುದ್ದೆ ನೀ
ಕೊಟ್ಟೇಳೆ ಭೀಮೇಶ ಕೃಷ್ಣಗೆ ಬುದ್ಧಿ||೩||''[೨]

ಗೋಪಿಯರು ತಮ್ಮನ್ನು ಕಾಡಿಸಿ, ಪೀಡಿಸುವ ಕೃಷ್ಣನ ತುಂಟಾಟಗಳನ್ನು ತಾಯಿ ಯಶೋಧೆಯ ಬಳಿ ಹೇಳುವ ಪ್ರಸಂಗವು ದೃಶ್ಯ ಕಾವ್ಯವಾಗಿರುವುದು. ಭೀಮವ್ವಳು ಕಾವ್ಯದಲ್ಲಿ ಸಂಭಾಷಣ ಚತುರತೆ, ವಾತ್ಸಲ್ಯಮಯ ಸಂಭಾಷಣೆಗಳನ್ನು ಹೆಣೆಯುತ್ತಾ ಓದುಗರನ್ನು ಆಕರ್ಷಿಸುತ್ತಾಳೆ.

ಒಟ್ಟಾರೆಯಾಗಿ ಭೀಮವ್ವನ ಕಥನ ಕಲೆ ಹಾಗೂ ವರ್ಣನಾ ವೈವಿಧ್ಯತೆಯಿಂದ, ಕನ್ನಡ ಸಾಹಿತ್ಯದಲ್ಲಿ ಹರಿದಾಸ ಮಹಿಳೆಯರಲ್ಲಿ ಒಟ್ಟಾಗಿ ಇಷ್ಟೊಂದು ಹಾಡುಗಳು ದೊರೆತಿರುವುದು. ಹೆಗ್ಗಳಿಕೆಯೇ ಸರಿ. ಹೀಗೆ ತನ್ನೆಲ್ಲ ಬದುಕಿನ ಸ್ವಾರಸ್ಯವನ್ನು ಹರಿಭಕ್ತಿಯಾಗಿಸಿ ಒದಗಿಸಿದ ಮಹಿಳೆಯರಲ್ಲಿ ಹರಪನಹಳ್ಳಿ ಭೀಮವ್ವ ಪ್ರಮುಖಳಾಗುತ್ತಾಳೆ.

## ಹೆಳವನಕಟ್ಟೆ ಗಿರಿಯಮ್ಮ

ಮಹಿಳಾ ಹರಿದಾಸ ಸಾಹಿತ್ಯದಲ್ಲಿ 'ಹೆಳವನಕಟ್ಟೆ ಗಿರಿಯಮ್ಮ' ಜನಪ್ರಿಯಳು, ಪ್ರಮುಖ ಹರಿದಾಸ ಮಹಿಳೆ ಎಂತಲೂ ಗುರುತಿಸಲಾಗಿದೆ. ಹರಪನಹಳ್ಳಿ ಭೀಮವ್ವ ಹಾಗೂ ಹೆಳವನಕಟ್ಟೆ ಗಿರಿಯಮ್ಮ ಇಬ್ಬರನ್ನು ಮಹಿಳಾ ಹರಿದಾಸ ಸಾಹಿತ್ಯದ ಎರಡು ಕಣ್ಣುಗಳಿದ್ದಂತೆ ಎಂಬ ಅಭಿಪ್ರಾಯವು ದಾಸ ಸಾಹಿತ್ಯ ಅಧ್ಯಯನಕಾರರಲ್ಲಿದೆ.

ಹೆಳವನಕಟ್ಟೆ ಗಿರಿಯಮ್ಮಳ ಜೀವನ ವಿಚಾರಗಳ ಕುರಿತಂತೆ ಈಗಾಗಲೇ ಸಂಶೋಧನಾ ಅಧ್ಯಯನವೊಂದು ಉಲ್ಲೇಖಿಸಿರುವಂತೆ ಗಿರಿಯಮ್ಮ ೧೮ನೇ ಶತಮಾನದ ಪೂರ್ವಾರ್ಧದಲ್ಲಿ ಬದುಕಿರಬಹುದು ಎಂಬ ವಿಚಾರ ತಿಳಿಯುತ್ತದೆ. ಗಿರಿಯಮ್ಮ ಮನುಷ್ಯಳಾಗಿ ಸಮಾಜದಲ್ಲಿ ಬದುಕಿದರೂ ಆಕೆಯ, ಜೀವಿತಾವಧಿಯ ಕಾಲದಲ್ಲಿ ಸುತ್ತಲಿನ ಜನರು ಗಿರಿಯಮ್ಮಳನ್ನು ದೈವಾಂಶಸಂಭೂತಳೆಂದು ಆರಾಧಿಸುತ್ತಿದ್ದರು.

ಗಿರಿಯಮ್ಮ ತಮ್ಮ ಕಾಲವನ್ನು ಎಲ್ಲಿಯೂ ಖಚಿತವಾಗಿ ಹೇಳಿಲ್ಲವಾದ್ದರಿಂದ ಆಕೆಯನ್ನು ಗೋಪಾಲದಾಸರ ಸಮಕಾಲೀನಳೆಂತಲೂ ಪರಿಭಾವಿಸಲಾಗುತ್ತಿದೆ. ಗಿರಿಯಮ್ಮ 'ಹೆಳವನಕಟ್ಟೆ ರಂಗ' ಎಂಬ ಅಂಕಿತದಲ್ಲಿ ಕೀರ್ತನೆಗಳನ್ನು ರಚಿಸಿದ್ದಾಳೆ.

ಗಿರಿಯಮ್ಮಳ ಜನ್ಮಸ್ಥಳ ಧಾರವಾಡ ಜಿಲ್ಲೆಯ ರಾಣೇಬೆನ್ನೂರು ಈಕೆಯ ತಂದೆ ಭಿಷ್ಟಪ್ಪ ಜೋಯಿಸರು, ಆದರೆ ತಾಯಿಯ ಹೆಸರು ತಿಳಿದು ಬರುವುದಿಲ್ಲ. ಗಿರಿಯಮ್ಮಳ ಜೀವಿತಾವಧಿಯನ್ನು ಖಚಿತವಾಗಿ ಗುರುತಿಸಲಾಗದಿದ್ದರೂ, ಆಕೆಯೇ ತಮ್ಮ ''ಕೀರ್ತನೆಗಳಲ್ಲಿ ಹೇಳಿರುವಂತೆ ಶ್ರೀ ರಾಮರಘುನಂದನ' ಎಂದು ಆರಂಭವಾಗುವ ತನ್ನ ಹಾಡಿನಲ್ಲಿ ''ಸದಾನಂದ ಸುಮತೀಂದ್ರ ಹೃದಯ ಪಂಕಜಭೃಂಗ'' ಎಂದು ಮಂತ್ರಾಲಯದ ಶ್ರೀ ಸುಮತೀಂದ್ರ ಸ್ವಾಮಿಗಳನ್ನು ಸ್ಮರಿಸಿರುವುದು ಕಂಡುಬರುತ್ತದೆ. ಹಾಗೆಯೇ, ತನ್ನ ರಚನೆಯ ಲವ-ಕುಶ ಕಾಳಗ ಆರಂಭದಲ್ಲಿ ''ಹರಿಹರ ಬ್ರಹ್ಮ ತ್ರಿಮೂರ್ತಿಗಳ ಬಲಗೊಂಬೆ "ಗುರು ಸತ್ವ ಬೋಧರ ನೆನೆದು" ಎಂದು ನೆನೆದಿದ್ದಾಳೆ. ಈ ಸತ್ಯ ಬೋಧರು ಉತ್ತರಾಧಿಪೀಠದ ಮಠಾಧಿಪತಿಗಳಲ್ಲಿ ಸತ್ಯಪ್ರಿಯರು (೧೭೪೪-೧೭೯೩) ನಂತರ ಬಂದ ಸತ್ಯ ಬೋಧಕ ಇರಬೇಕು.''[೧೩]

ಇವುಗಳ ಜೊತೆಗೆ ಗಿರಿಯಮ್ಮ 'ಚಂದ್ರಹಾಸ ಕಥೆ'ಯಲ್ಲಿ ಉಲ್ಲೇಖಿಸಿರುವಂತೆ ಲಕ್ಷ್ಮೀಶ ಕವಿ ಜೈಮಿನಿ ಭಾರತದಲ್ಲಿ ಹೇಳಿರುವ ಚಂದ್ರಹಾಸ ಕಥೆಯನ್ನೇ ಚರಿತೆಯ ಮಾಡಿ ವರ್ಣಿಸುವೆ ಎಂದು ಬರೆದಿರುವುದರಿಂದ ಈಕೆ ಲಕ್ಷ್ಮೀಶ ಕವಿಯ ಜೈಮಿನಿ ಭಾರತದ ರಚನೆಯ ನಂತರದಲ್ಲಿ ತನ್ನ ಕೃತಿಯ ರಚನೆಗೆ ತೊಡಗಿರಬಹುದೆಂದು ಹೇಳಬಹುದು. ಈ ಎಲ್ಲ ವಿಚಾರಗಳಿಂದ ಅವರ ಕಾಲವನ್ನು ಕ್ರಿ.ಶ.೧೭೩೫-೫೦ ರಿಂದ ೧೭೦೦ ರವರೆಗೆ ಎಂದು ಆಕೆಯ ಜೀವಿತಾವಧಿಯನ್ನು ಗುರುತಿಸಬಹುದಾಗಿದೆ.

## ಗಿರಿಯಮ್ಮಳ ಜೀವನ ವಿಚಾರ

ಗಿರಿಯಮ್ಮ ಭಾಗವತ ಸಂಪ್ರದಾಯದ ಸ್ಮಾರ್ತ ಮನೆತನಕ್ಕೆ ಸೇರಿದವಳು. ಅವರ ಬಾಲ್ಯ, ವೈವಾಹಿಕ ಬದುಕು, ಭಕ್ತಿಯ ಜೀವನ, ವೈರಾಗ್ಯದ ವ್ಯಕ್ತಿತ್ವಗಳ ಪೂರ್ಣ ಪರಿಚಯವನ್ನು ಕುರಿತು ಅನೇಕ ವರ್ಣರಂಜಿತ ಕಥೆಗಳು ಜನಸಾಮಾನ್ಯರಲ್ಲಿ ಹಾಸು ಹೊಕ್ಕಾಗಿವೆ.

ಅವರ ಕೀರ್ತನೆಯೊಂದರಲ್ಲಿ

''ತಂದೆ ತಾಯೆಂಬುದನು ನಾನೊಂದು ಗುರುತನರಿಯೆ ನಿಮ್ಮ

ಕಂದಳೆನಿಸಿ ಕಡೆ ಹಾಯಿಸೊ ಹೆಳವನಕಟ್ಟೆ ರಂಗ''[೧೪]

ಎನ್ನುವ ಈ ಸಾಲುಗಳು ಆಕೆ ಚಿಕ್ಕವಳಿರುವಾಗಲೇ ತನ್ನ ಹೆತ್ತವರನ್ನು ಕಳೆದುಕೊಂಡಿರಬೇಕೆಂದು ತಿಳಿಯಬಹುದಾಗಿದೆ. ಮುಂದೆ ಆಕೆ ತನ್ನ ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆಯುತ್ತಾಳೆ. ಆಕೆಯ ಅಲ್ಲಿನ ಬದುಕು ಹೇಗಿತ್ತೋ, ಆ ಬಗ್ಗೆ ನಮಗೆ ಯಾವ ಮಾಹಿತಿಯು ಇರುವುದಿಲ್ಲ. ಆದರೆ ಆಕೆ ತನ್ನ ಸಣ್ಣ ವಯಸ್ಸಿನಲ್ಲಿ ಹೆತ್ತವರ ಕಳೆದುಕೊಂಡ ಅನಾಥಭಾವವು ಹಲವಾರು ಹಾಡುಗಳಲ್ಲಿ ವ್ಯಕ್ತವಾಗಿವೆ. ಇದರ ಜೊತೆಗೆ ಧಾರ್ಮಿಕ ವಾತಾವರಣವು ಗಿರಿಯಮ್ಮ ದೈವ ಭಕ್ತಿಗೆ ಪೂರಕವಾಗಿರಬೇಕು.

ಆಗಿನ ಸಾಮಾಜಿಕ ರೂಢಿಯಂತೆ ಗಿರಿಯಮ್ಮಳಿಗೆ ೧೦-೧೨ರ ವಯಸ್ಸಿಗೆ ಹರಿಹರ ತಾಲ್ಲೂಕಿನ ಮಲ್ಲೆಬೆನ್ನೂರಿನ ಶಾನುಭೋಗ ಕೃಷ್ಣಪ್ಪನವರ ಮಗ ತಿಪ್ಪರಸನೊಂದಿಗೆ ವಿವಾಹವಾಗಿತ್ತು. ತನಗಿಷ್ಟವಿಲ್ಲದಿದ್ದರೂ ತನ್ನ ಹಿರಿಯರ ಒತ್ತಾಯಕ್ಕೆ ವಿವಾಹವಾಗಿ ಕ್ರಮೇಣ ವೈರಾಗ್ಯಮೂಡಿ ವಿರಕ್ತಳಾಗಿರುವುದನ್ನು ಕಾಣಬಹುದು. ಗಂಡನ ಮನೆಯಲ್ಲಿದ್ದಾಗ ಭಕ್ತಿ ಸಾಧನೆಗೆ ತೊಡಗಿಕೊಂಡರೂ, ಆಕೆಗೆ ಗಂಡ ಹಾಗೂ ಮಾವನವರ ಸಹಕಾರವಿದ್ದರೂ ಕುಟುಂಬದ ಇತರ ಸದಸ್ಯರ ಅಸೂಯೆಯಿತ್ತು. ಅವೆಲ್ಲವುಗಳನ್ನು ಮೀರಿ ತನ್ನ ಭಕ್ತಿ ಸಾಧನೆಯನ್ನು ಮುಂದುವರೆಸಿರುವುದು ಗಿರಿಯಮ್ಮನವರ ಸಾಧನೆ ಎಂತಲೇ ಹೇಳಬಹುದು.

ಗಿರಿಯಮ್ಮ ಭಕ್ತಿಯಿಂದ ಪ್ರೇರಿತಳಾಗಿ ಅನೇಕ ಸಣ್ಣ ಹಾಡುಗಳನ್ನೂ ಭಕ್ತರ ಕಥೆಗಳನ್ನು ಬರೆದಿದ್ದಾಳೆ. ಆದರೆ ಇದಕ್ಕೆ ಮೊದಲು ಆಕೆಗೆ ವಿದ್ಯಾಭ್ಯಾಸ ದೊರಕಿತ್ತೆ ಅಥವಾ ಇಲ್ಲವೇ ಎಂಬುದರ ಬಗ್ಗೆ ಖಚಿತವಾದ ಮಾಹಿತಿಗಳಿಲ್ಲ. ಆಕೆಯ ರಚನಾ ಕೌಶಲ್ಯಗಳನ್ನು ಸಾಮರ್ಥ್ಯವನ್ನು ಗಮನಿಸಿ ಹಲವು ವಿದ್ವಾಂಸರು ಈ ರೀತಿ ಹೇಳಿದ್ದಾರೆ.

೧. ಈಕೆಗೆ ಪ್ರಾಯಶಃ ಗುರುಮುಖದಿಂದ ಕ್ರಮವಾಗಿ ವಿದ್ಯಾಭ್ಯಾಸವಾಗಿರಲಾರದು. ಆದರೆ ಪೂರ್ವ ಕಾವ್ಯಗಳ ಪುರಾಣೇತಿಹಾಸಗಳ ಒಳ್ಳೆಯ ಪರಿಚಯವಿದ್ದಂತೆ ತೋರುತ್ತದೆ. ಇವರ ಕಾವ್ಯಶಕ್ತಿ

ನೈಸರ್ಗಿಕವೂ, ಪ್ರಸಾದಿಕವೂ ಆಗಿದ್ದು ಭಾಗವತ ಕವಿಗಳಲ್ಲಿ ಕೆಲಮಟ್ಟಿಗೆ ಕುಮಾರವ್ಯಾಸನನ್ನು ನೆನಪಿಗೆ ತರುತ್ತಾಳೆ ಎಂದು ಟಿ.ವಿ.ವೆಂಕಟಾಚಲಾಶಾಸ್ತ್ರಿಯವರು ಅಭಿಪ್ರಾಯಪಡುತ್ತಾರೆ.

೨. ಹೆಣ್ಣು ಮಕ್ಕಳಿಗೆ ಹೆಚ್ಚಿನ ಶಿಕ್ಷಣ ಕೊಡಿಸುವ ಪದ್ಧತಿ ಆಗಿನ ಕಾಲದಲ್ಲಿ ಬೆಳೆದಿರಲಿಲ್ಲವಾದ್ದರಿಂದ ತಂದೆಯವರಾದ ಭಿಷ್ಮಪ್ಪ ಜೋಯಿಸರಿಂದಲೇ ಗಿರಿಯಮ್ಮನಿಗೆ ಅಕ್ಷರಭ್ಯಾಸವಾಯಿತು. ತಕ್ಕಮಟ್ಟಿಗೆ ಓದು-ಬರಹವನ್ನು ಅವಳು ಕಲಿತುಕೊಂಡಳು. ಎಂದು ಜಯಸಿಂಹರವರು ಅಭಿಪ್ರಾಯಪಡುತ್ತಾರೆ.

ಈ ಹೇಳಿಕೆಗಳ ಜೊತೆಗೆ ಗಿರಿಯಮ್ಮನು ಸ್ವತಃ 'ಲವ-ಕುಶರ ಕಾಳಗ'ದ ಕೊನೆಯಲ್ಲಿ ಹೇಳಿಕೊಂಡಿರುವ ಮಾತುಗಳನ್ನು ಗಮನಿಸಬಹುದು.

''ಅರಿಯದೆ ಮಾಡಿದೆ ಅಜ್ಞಾನತನದಿಂದ ಬರೆದಿದೋದಿದವಳಲ್ಲ ಮರುಳೆ ಕರುಣಾಕರದೇವ ಹೆಳವನಕಟ್ಟೆ ರಂಗಯ್ಯ ಅರುಹಿದಂದಷ್ಟು ಪೇಳಿದೆನು''[೧೫] ಆದರೂ ಗಿರಿಯಮ್ಮ ಕ್ರಮಬದ್ಧ ವಿದ್ಯಾಭ್ಯಾಸ ದೊರೆಯದಿದ್ದರೂ ಅಲ್ಪಸ್ವಲ್ಪ ಓದು-ಬರೆಹ ತಿಳಿದಿದ್ದಿರಬೇಕು ಎಂಬುದು ವಿದ್ವಾಂಸರ ಅಭಿಮತ.

### ಗಿರಿಯಮ್ಮನ ಹಾಡುಗಳು

ಗಿರಿಯಮ್ಮ ತನ್ನ ಹಾಡುಗಳನ್ನು 'ಹೆಳವನಕಟ್ಟೆ ರಂಗನಾಥ' ಎಂಬ ಅಂಕಿತದಿಂದ ರಚಿಸಿದ್ದು, ದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದಳು. ಆಕೆಯ ರಚನೆಗಳಲ್ಲಿನ ಭಕ್ತಿಯ ಹರಿ ಪಾರಮ್ಯವಾದರೂ, ಹರಿ-ಹರರಿಬ್ಬರಲ್ಲಿಯೂ ಭೇದವೆಣಿಸದ ಆಕೆಯ ಅನನ್ಯ ಭಕ್ತಿಯು ನಂಬಿದ ದೈವದ ಮೊರೆ ಹೋಗುವುದು ಮಾತ್ರ ಅವರ ಗುರಿಯಾಗಿತ್ತು ಎನಿಸುತ್ತದೆ.

''ಈತ ಲಿಂಗದೇವ ಶಿವನು ಆತನ ರಂಗಧಾಮ ವಿಷ್ಣು
ಮಾತ ಕೇಳಿ ಮನುಜ ನೀತಿ ಬಿಡದೆ ನಡೆಯಿರಿ
ವೇದಕೆ ನಿಲುಕನೀತ ವೇದ ನಾಲ್ಕು ತಂದನಾತ
ಬೂದಿಮೆಯ್ಯೊಳ ಪುಸೀದನೀತ, ಭುವನಗಿರಿಯ ನಿಗವಿದನಾತ
ಗಂಗೆಯ ಪೊತ್ತನೀತ, ಗರುಡವಾಹನನಾತ
ತುಂಗ ಹೆಳವನಕಟ್ಟೆ ರಂಗನೀತ ಲಿಂಗನಾತ''[೧೬]

ಈಕೆ ರಂಗನಾಥನ ಭಕ್ತೆಯಾದರೂ ತನ್ನ ತವರಿನ ದೈವವಾದ ಮೈಲಾರಲಿಂಗನನ್ನು ಕಡೆಗಣಿಸುವುದಿಲ್ಲ. ಹರಿಹರರಿಬ್ಬರನ್ನೂ ಸಮಭಾವದಿಂದಲೇ ಕಂಡು 'ಈತ ರಂಗನಾದ ಹರಿಯು, ಆತ ಲಿಂಗನಾದ ಹರನು' ಮತ್ತು ಈತ ಲಿಂಗದೇವ ಶಿವನು ಆತ ರಂಗಧಾಮ ವಿಷ್ಣು ಎಂಬ ಹಾಡುಗಳು ಗಿರಿಯಮ್ಮನ ವಿಶಿಷ್ಟ ಮನೋಭಾವಕ್ಕೆ ಸಾಕ್ಷಿಯಾಗಿವೆ ಹಾಗೂ ಗಿರಿಯಮ್ಮ ತಾನು ಸಂದರ್ಶಿಸಿದ ತೀರ್ಥಕ್ಷೇತ್ರಗಳನ್ನೂ ಅಲ್ಲಿಯ ದೈವಗಳನ್ನೂ ಕೆಲವು ಹಾಡುಗಳಲ್ಲಿ ಸ್ತುತಿಸಿದ್ದಾಳೆ.

ಅವುಗಳಲ್ಲಿ ಮುಖ್ಯವಾಗಿ ಹೆಸರಿಸಬಹುದಾದರೆ, ಕೊಕ್ಕನೂರು ಹನುಮಂತನನ್ನು ಕುರಿತ ಹಾಡು (ಹಾ.೨) ಪಿಳ್ಳಂಗಿರಿ ವೆಂಕಟೇಶನನ್ನು ಕುರಿತ ಹಾಡು(ಹಾ.೧೬), ಮೈಲಾರಲಿಂಗನನ್ನು ಕುರಿತ ಹಾಡು (ಡಾ.೧೯) ಕೃಷ್ಣನದಿಯನ್ನು ಕುರಿತ ಹಾಡು(ಡಾ.೧೭) ಇತ್ಯಾದಿಗಳನ್ನು ನೋಡಬಹುದು.

ಹರಿದಾಸರಲ್ಲಿ ಅವತಾರತ್ರಯರೆಂದು ಹನುಮ, ಭೀಮ, ಮಧ್ವರನ್ನು ಸ್ತುತಿಸುವ ರೂಢಿಯಿದೆ. ಆದರೆ ಗಿರಿಯಮ್ಮ ಹನುಮಸ್ತುತಿಯನ್ನು ಮಾತ್ರ ಮುಖ್ಯವಾಗಿಸಿಕೊಂಡಿದ್ದಾಳೆ. ''ಲೆಕ್ಕವಿಲ್ಲದೆ ಖಳರ ಗೆಲಿದು ಬಂದು ಕೊಕ್ಕನೂರೊಳು ನಿಂತನು.ರಕ್ಕಸಂತಕನು ಹೆಳವನಕಟ್ಟೆ ರಂಗಯ್ಯನ ಅಕ್ಕರೊಳ್ಳಲೆದಾಸನು ಭೀಮರಾಯನು''[೧೭] ಇಲ್ಲಿ ಮೇಲ್ನೋಟಕ್ಕೆ ಭೀಮರಾಮನನ್ನು ಸ್ತುತಿಸುವಂತಿದ್ದರೂ ಕಡೆಯಲ್ಲಿ ಇಡೀ ಹಾಡು ಕೊಕ್ಕನೂರಿನ ಹನುಮಂತನ ಸ್ತುತಿಗೀತೆಯಾಗಿದೆ.

ಭಗವಂತನಲ್ಲಿ ಗಿರಿಯಮ್ಮ ತನ್ನ ಆತ್ಮ ನಿವೇದನೆಯನ್ನು ಈ ರೀತಿ ಹಿಡಿದಿಟ್ಟಿದ್ದಾಳೆ.

''ಏನಿದು ಬಯಲಪಾಶ ನೋಡಿದರಿಲ್ಲಿ
ಏನು ಹುರುಡುಗಾಣೆನೊ
ನಾನ ಜನ್ಮದಿ ಬಂದು ಹೊಂದಲಾರೆನು ನಿನ್ನ
ಧ್ಯಾನವ ಕೊಡೊ ಅಭಿಮಾನದೊಡೆಯ ರಂಗ ||ಪ||
ನೀರ ಬೊಬ್ಬುಳಿಯೆಂದರ ದೇಹವ ನೆಚ್ಚಿ
ದೂರು ಹೊತ್ತೆನು ಹರಿಯೆ
ಯಾರು ಎನಗೆ ಸರಿಯಿಲ್ಲೆಂಬಹಂ
ಕಾರ ಪ್ರಪಂಚದ ಬಂಧನದೊಳು ಸಿಲುಕಿ ನೊಂದೆನೂ ||೧||
ಆಸೆಯೆಂಬುದು ಬಿಡದು ಈ ಭುವನದೊಳ
ಲೇಸುಗಾಣೆನು ಹರಿಯೆ
ಭಾಷೆಯ ಕೊಡು ಮುಂದೆ ಜನುಮ ಬಾರದ ಹಾಗೆ
ಈಶಸನ್ನುತ ಹೆಳವನಕಟ್ಟೆ ರಂಗಯ್ಯ''[೧೮]

ನಶ್ವರವಾದ ಈ ಬದುಕಿನ ಬಗ್ಗೆ ಮೋಹಗೊಳ್ಳುವ ಮನಸ್ಸನ್ನು ಕುರಿತು. ''ಯಾತಕೆ ಮರುಳಾದಿ ಹೀಂಗೆ ಎಲೆ ಮನವೆ ಕಾಕು ಬುದ್ಧಿಯ ಬಿಡುಬಿಡು ಸುಮ್ಮನೆ ಎಲೆ ಮನವೆ'' ಎಂದು ಎಚ್ಚರಿಸುತ್ತಾರೆ. ಈ ಸ್ತುತಿಗೀತೆಗಳನ್ನು, ಅಂತರಂಗ ನಿವೇದನೆ ಪ್ರಾರ್ಥನೆಗಳನ್ನು ಬಿಟ್ಟರೆ ಉಳಿಯುವ ಹಾಡುಗಳಲ್ಲಿ ಕೆಲಮಟ್ಟಿಗೆ ವಿಶಿಷ್ಟವಾಗಿ ನಿಲ್ಲುವ ಹಾಡುಗಳು ಪಾರಿಜಾತ ಮತ್ತು ಅಜಾಮಿಳನ ಮೋಕ್ಷ, ಈ ಹಾಡುಗಳು ಗಿರಿಯಮ್ಮನ ಉಳಿದೆಲ್ಲಾ ಹಾಡುಗಳಿಗಿಂತ ಸ್ವಲ್ಪ ದೊಡ್ಡವಾಗಿವೆಯಷ್ಟೇ ಆ ಹಾಡುಗಳೆಲ್ಲಾ ಭಾಗವತದ ವಸ್ತುವನ್ನು ಒಳಗೊಂಡಿವೆ.

ಭಗವಂತನ ಮಮತಾಮಯಿ ಭಕ್ತವತ್ಸಲತೆಯನ್ನು ಹಾಗೂ ಹರಿನಾಮ ಮಹಿಮೆಯನ್ನು ಹರಿದಾಸರೆಲ್ಲರೂ ತಮ್ಮ ಕೀರ್ತನೆಗಳಲ್ಲಿ ಬಳಸಿಕೊಳ್ಳುವಂತೆಯೇ, ಗಿರಿಯಮ್ಮನು ಬಳಸಿಕೊಂಡು ಅಜಾಮಿಳನ ಪ್ರಸಂಗದಲ್ಲಿ ಹರಿನಾಮಸ್ಮರಣೆಯನ್ನು ಸಾರಿದ್ದಾಳೆ.

ಒಟ್ಟಿನಲ್ಲಿ ಈಕೆಯ ಹಾಡುಗಳಲ್ಲಿ ಸಣ್ಣ ಹಾಡುಗಳು, ದೊಡ್ಡ ಹಾಡುಗಳು, ಉದ್ದಾಳಿಕನ ಕಥೆ, ಬ್ರಹ್ಮಕೊರವಂಜಿ, ಶಂಕರಗಂಡನ ಹಾಡು ಸೀತಾಕಲ್ಯಾಣ, ಚಂದ್ರಹಾಸನ ಕಥೆ, ಕೆಲವು ಅಪೂರ್ಣ ಹಾಡುಗಳು(ಲವ-ಕುಶರ ಕಾಳಗ, ಕೃಷ್ಣ-ಕೊರವಂಜಿ) ಎಂದು ಗುರುತಿಸಲಾಗಿದೆ.

ಗಿರಿಯಮ್ಮ ತನ್ನ ಹಾಡುಗಳಲ್ಲಿ ಶ್ರೀಹರಿಯ ಶ್ರೇಷ್ಠತೆಯನ್ನೇ ಹೇಳಿದ್ದರೂ ಸಣ್ಣ ಹಾಡುಗಳಲ್ಲಿ ಹರಿ-ಹರರಲ್ಲಿ ಭೇದವೆಣಿಸದ ಭಾವ, ಭಕ್ತಿಪ್ರಧಾನವಾಗಿದ್ದು, ಅವುಗಳಲ್ಲಿ ಹರಿ-ಹರರನ್ನು ಕುರಿತು ತಾರತಮ್ಯ ಭಾವವಾಗಲಿ, ತಾತ್ವಿಕ ಜಿಜ್ಞಾಸೆಯಾಗಲಿ ಬರುವುದಿಲ್ಲ. ಆದರೆ ಅವುಗಳಲ್ಲಿ ಬರುವ ಆಕೆಯ ಭಕ್ತಿಯ ಆರ್ದ್ರಭಾವ, ಆಕೆಯ ಕೋಮಲ ಮನಸ್ಸಿನ ಅಂತಃಕರಣಗಳು ಕವಿ ಮನಸ್ಸನ್ನು ತಿಳಿಸುತ್ತವೆ.

**ಮೊದಲಿಗೆ ಉದ್ದಾಳಿಕನ ಕಥೆ :** ಉದ್ದಾಳಿಕನ ಕಥೆಯು ಸಾಂಗತ್ಯದ ಮಟ್ಟಿನಲ್ಲಿ ರಚನೆಯಾಗಿದೆ.

''ಒಣ್ಣೊಳು ಚೆಲ್ಲಿದ ಅಣಿ ಮುತ್ತಾರಿಸಿ ನೂಲಿಗೆ ಪೋಣಿಸಿದಂತೆ
ಯೋಗಿಗಳರಸು ಉದ್ದಾಳಿಕನ ಕಥೆಯನು ಹೇಳುವೆ ಚರಿತೆಯ ಮಾಡಿ''[೧೯]

ಎಂದು ಹೇಳಿ ನೇರವಾಗಿ ಕಥೆಯನ್ನು ಪ್ರಾರಂಭಿಸುವ ಗಿರಿಯಮ್ಮ ವೇದ ವೇದಾಂತ ಪಾರಂಗತರಾದ ಮುನಿ ಹಾಗೂ ಸಾಧುಸಜ್ಜನ ಸತಿಯರ ಕುಲರತ್ನವೆನಿಸಿದ, ಆತನ ಪತ್ನಿ-ಇವರಿಗೆ ಮಗನಾಗಿ ಉದ್ದಾಳಿಕ ಜನಿಸುತ್ತಾನೆ. ಮುಂದೆ ಈ ಉದ್ದಾಳಿಕ ವೇದಧ್ಯಯನಗಳ ಕಲಿತು ಅಜ-ಹರಿ-ಹರನ್ನು ಮೆಚ್ಚಿಸುತ್ತೇನೆಂದು ಹೊರಟು, ಅನೇಕ ವರ್ಷಗಳ ತನಕ ತಪಸ್ಸಿನಲ್ಲಿ ನಿರತನಾಗಿರುತ್ತಾನೆ. ಇಡೀ ಉದ್ದಾಳಿಕನ ಕಥೆಯು 'ಪುತ್ರನಿಲ್ಲದೆ ಸದ್ಗತಿಯಿಲ್ಲ' ಎಂಬ ಶ್ರುತಿ ವಾಕ್ಯವನ್ನು ಇಟ್ಟುಕೊಂಡೇ ರಚಿಸಲಾಗಿದೆ.

ಗಿರಿಯಮ್ಮ ಈ ಹಾಡಿನಲ್ಲಿ, ಉದ್ದಾಳಿಕನು ದೀರ್ಘವಾದ ತಪಸ್ಸಿನಿಂದ ತಂದೆ ತಾಯಿಯರನ್ನು ಮರೆತಿರುವ ಸಂದರ್ಭದಲ್ಲಿ ಉದ್ದಾಳಿಕನ ತಾಯಿ ತಂದೆಯರು ಸುತನಿಗಾಗಿ ಮಿಡುಕುತ್ತಿರುವಾಗ ಸಂಚಾರ ನಿಮಿತ್ತನಾಗಿ ಬಂದ ಕೌಶಿಕ ಮಹರ್ಷಿಯು ಆ ಹೆತ್ತವರ ಪ್ರಲಾಪ ತಿಳಿದು ಬ್ರಹ್ಮನಿಂದ ಉದ್ದಾಳಿಕನ ಚರಿತೆಯನ್ನು ತಿಳಿದು, ಉದ್ದಾಳಿಕನಿಗೆ ಪೂರ್ವವಿಚಾರವನ್ನು ಉದ್ದಾಳಿಕನು ಪುನಃ ಬ್ರಹ್ಮನಲ್ಲಿ ಬಂದು ವಿಚಾರಿಸಿಲಾಗಿ, ಬ್ರಹ್ಮ, ಉದ್ದಾಳಿಕನ ವಿವಾಹ ನಡೆಯುವುದು, ಆತನಿಗೊಬ್ಬ ಮಗ ಹುಟ್ಟುವುದು ಖಚಿತ ಎಂದು ತಿಳಿಸುತ್ತಾನೆ. ಈ ಕಾರಣದಿಂದ ಉದ್ದಾಳಿಕ ಮುನಿ ತೇಲಿ ಬಿಟ್ಟ ಕಮಲದ ಹೂವನ್ನು ಮೂಸಿ ನೋಡಿದ ಕಾರಣಕ್ಕೆ ಗರ್ಭಧರಿಸಿದ ಕೌಶಲ್ಯ ದೇಶದ ರಾಜಕುಮಾರಿ ವಿವಾಹವಿಲ್ಲದೇ, ಪಡೆದ ಮಗುವ ಸಾಕಲಾರದೆ ನದಿ ನೀರಿನಲ್ಲಿ ತೇಲಿಬಿಡುತ್ತಾಳೆ. ಕೊನೆಗೊಮ್ಮೆ ಮಗುವು ಉದ್ದಾಳಿಕನಲ್ಲಿಯೇ ತಲುಪುತ್ತದೆ.

ಈ ಎಲ್ಲವೂ ಸಂಗತಿಗಳ ಮೂಲಕ ಗಿರಿಯಮ್ಮ 'ಸುತರಿಲ್ಲದೆ ಸದ್ಗತಿಯಿಲ್ಲ' ಎಂಬ ಶ್ರುತಿವಾಕ್ಯವನ್ನು ತನ್ನ ಹಾಡಿನಲ್ಲಿ ದೃಢಪಡಿಸಿದ್ದಾಳೆ.

''ಉತ್ತಮರಘುಕುಲ ರಘುರಾಯನಾತ್ಮಜೆ ಇಪ್ಪಳು ಕರ್ಣಿಕೆಯಾಗಿ
ಪುತ್ರಹುಟ್ಟಿದ ಏಳು ವರುಷಕ್ಕೆ ಪತ್ನಿಯು ದೃಷ್ಟಿಗೋಚರಕೆ ಬೀಳುವಳು''[೨೦]

ಈ ಹಾಡಿನಲ್ಲಿ ಗಿರಿಯಮ್ಮನ ಲೋಕಾನುಭವವು ಚಿತ್ರಗಳಾಗಿ ವರ್ಣನೆಗಳು ನಮಗೆ ಕಾಣ ಬರುತ್ತವೆ.

**ಶಂಕರಗಂಡನ ಹಾಡು**

ಈ ಹಾಡು ಸಾಂಗತ್ಯದಲ್ಲಿಯೇ ರಚನೆಯಾಗಿದೆ. ಇಲ್ಲಿನ ವಸ್ತು 'ತಾನಾಗಿ ಶಿವ, ಶಂಕರ ಗಂಡ ತಂಗಿಗೆ ವಿವಾಹ ಮಾಡೋ ಸಂಭ್ರಮದ ಮತ್ತು ತಂಗಿಯ ಮದುವೆಯಾದ ನಂತರದ ಭಾವ ಮೈದುನರ ಕಥೆಯನ್ನು ಕುರಿತದ್ದಾಗಿದೆ.

''ಬಲ್ಲಿದವರು ನೀವು ಬಹುಪರಾಕ್ರಮಿಗಳು ಮಲ್ಲಿಗಿಸರ ಕಬ್ಬು ಬಿಲ್ಲು
ಸಲ್ಲದು ನಿಮ್ಮೊಳು ಸಲಿಗಿ ನಮಗೆಂದು ಬಲ್ಲ ಹಿರಿಯರು ಹೇಳುವರು.''

ಕೊನೆಗೆ ಶಿವ ತನ್ನ ತಂಗಿಯನ್ನು ಮನ್ಮಥನಿಗೆ ವಿವಾಹ ಮಾಡಿಕೊಟ್ಟು ಅನಂತರದಲ್ಲಿ ಅಹಂಕಾರದಿಂದ ವರ್ತಿಸಿದ ಮನ್ಮಥನ ಗರ್ವಭಂಗ ಮಾಡುವುದೇ ಈ ಹಾಡಿನ ಕಥಾವಸ್ತು. ಈ ಹಾಡಿನ ಕಥೆಯ ಮೂಲ ತಿಳಿದುಬಂದಿಲ್ಲ.

**ಸೀತಾ ಕಲ್ಯಾಣ**

ಈ ಹಾಡಿನಲ್ಲಿ ಕವಯಿತ್ರಿಯು 'ರಾಮ ಜಾನಕಿಯರ ಮಂಗಳುತ್ಸುವದುರುಟಣೆಯನ್ನು ಬಣ್ಣಿಸಿದ್ದಾಳೆ. ಈ ಹಾಡು ಮದುವೆಯಾದ ನಾಲ್ಕನೇ ದಿನದಲ್ಲಿ ನಡೆಸುವ ಕಾರ್ಯಕ್ರಮವೆಂದು ಗಿರಿಯಮ್ಮ ಹೇಳಿಕೊಂಡಿದ್ದಾಳೆ. ಮದುವೆಗೆ ಸೀತಾದೇವಿಯನ್ನು ಕರೆತರುವಾಗಿನಿಂದ ಹಿಡಿದು ರಾಮಸೀತೆಯರನ್ನು ಜೊತೆಯಾಗಿ ಹಸೆಗೆ ಕರೆತರುವುದನ್ನು, ಅತ್ಯಂತ ಸಂಭ್ರಮದಿಂದ ಗಿರಿಯಮ್ಮ ಹಾಡಿ ವರ್ಣಿಸಿದ್ದಾಳೆ.

''ಯಜ್ಞರಕ್ಷಕ ರಾಘವ ಬಂದ
ಯಜ್ಞಾಶಿಕ್ಷಾ ಮಿತ್ರ ರಾಮ ಬಂದ
ಸುಗೀವರಕ್ಷಕಾರಣ ಬಂದ ಲಕ್ಷ್ಮ
ಣಾಗ್ರಜ ಬರುವನೆಂದವೆ ಕಹಳೆ''[೨೧]

ಈ ರೀತಿಯಾಗಿ ಕಹಳೆಗಳು ಅತ್ಯಂತ ಸಂಭ್ರಮದಿಂದ ಮೊಳಗಿ, ಮಹಿಮಾವಂತ ರಾಮನನ್ನು ವರ್ಣಿಸುವ ವಿಧಿಯು ಸುಂದರವಾಗಿ ಮೂಡಿಬಂದಿರುವುದು. ಅರಿಸಿನ ಹಚ್ಚುವ ಕಾರ್ಯವನ್ನು ಅತ್ಯಂತ

ದೀರ್ಘವಾಗಿ ವರ್ಣಿಸುತ್ತಾ ಕೊನೆಗೆ ಮುನಿಸತಿಯರು ರಾಮಸೀತೆಗೆ ಅಕ್ಷತೆಯಿಟ್ಟು, ತಾಂಬೂಲ ಕೊಟ್ಟು, ಬಗೆಬಗೆಯ ರತ್ನದಾರತಿಯ ಬೆಳಗುತ್ತಾರೆ. ನಾರದಮುನಿಯು ಸಂತೋಷದಿಂದ ದೇವಲೋಕವಾದ ಅಮರನಗರಿಗೆ ನಡೆಯುತ್ತಾನೆ.

''ತುಂಗವಿಕ್ರಮ ರಾಮಜಾನಕಿಯರ
ಮಂಗಳುತ್ಸವದರುಟಣೆಯ ಪದವ
ಸಂಗೀತದಿ ಹೇಳಿ ಕೇಳಿದ ಜನರಿಗೆ ಹೆಳವನ ಕಟ್ಟೆ
ರಂಗಯ್ಯನೊಲಿದಿಹನು ಜಯ ಜಯ''[೨೨]

ಎಂಬ ಸ್ತುತಿಯೊಂದಿಗೆ ಗಿರಿಯಮ್ಮನ ಹಾಡು ಮುಕ್ತಾಯಗೊಳ್ಳುತ್ತದೆ.

**ಚಂದ್ರಹಾಸನ ಕಥೆ**

ಈ ಹಾಡಿನಲ್ಲಿ ಹೆಸರೇ ಹೇಳುವಂತೆ ರಾಜ ಚಂದ್ರಹಾಸನ ಕಥೆಯ ಎಳೆ ಎಳೆಯಾಗಿ ವರ್ಣಿಸಲಾಗಿರುವುದು, ಈ ಹಾಡು ನಾಲ್ಕು ಸಂಧಿಗಳ ಸಾಂಗತ್ಯ ಪ್ರಕಾರದಲ್ಲಿದ್ದು, ಹರಿಭಕ್ತಿಯನ್ನು ಸಾರುವ ಹಾಡುಗಳನ್ನು ರಚಿಸಿರುವ ಗಿರಿಯಮ್ಮ ''ಈ ಹಾಡನ್ನು ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಬರುವ ಚಂದ್ರಹಾಸೋಪಾಖ್ಯಾನವೇ ಚಂದ್ರಹಾಸಕಥೆಗೆ ಮೂಲ ಎಂದು ತಿಳಿಸುತ್ತಾಳೆ.''[೨೩]

ಈ ಕಥೆಯು ಚಂದ್ರಹಾಸನ ಜನ್ಮವೃತ್ತಾಂತವನ್ನು ತಿಳಿಸುವಲ್ಲಿ, ಚಂದ್ರಹಾಸ ತನ್ನ ಬಾಲ್ಯದಲ್ಲಿ ತಂದೆ ತಾಯಿಯನ್ನು ಕಳೆದುಕೊಂಡು, ಊರಿನ ಹೆಂಗಸರ ಮಮತೆಯ ಮಗುವಾಗಿ ಬೆಳೆದು, ಆಕಸ್ಮಿಕವಾಗಿ ದೊರೆತ ಸಾಲಿಗ್ರಾಮ ಶಿಲೆಯನ್ನು ತನ್ನ ಬಳಿಯಿಟ್ಟುಕೊಂಡು ಪೂಜಿಸುತ್ತಾ, ಆ ಸಾಲಿಗ್ರಾಮದ ಪೂಜೆಯ ಫಲವಾಗಿ ಚಂದ್ರಹಾಸನಿಗೆ ಜನ್ಮಸಿದ್ಧಿಯಿಂದಲೇ ಹರಿಭಕ್ತನಾಗುವುದನ್ನು ತಿಳಿಸುತ್ತಾ ಕೊನೆಗೆ ತನಗೆ ಕೇಡು ಬಯಸಿದ ಮಂತ್ರಿ ದುಷ್ಟುಬುದ್ಧಿಯನ್ನು ಶಿಕ್ಷಿಸಿ ತಾನು ಆರಾಧಿಸುವ ಕಾಳಿಯಿಂದ ಅವನ ಮಂತ್ರಿಯನ್ನು, ಅವನ ಮಗನನ್ನು ಬದುಕಿಸಿ, ಮಂತ್ರಿಯ ಮಗಳು ವಿಷಯೆಯನ್ನು ಮದುವೆಯಾಗಿ ಮುನ್ನೂರು ವರ್ಷಗಳ ಕಾಲ ಜೀವಿಸಿದ್ದನು ಎಂದು ಕಥೆಯನ್ನು ಸುಖಾಂತವಾಗಿಸಿರುವುದು.

''ಇಂದುಹಾಸನ ಕಥೆಯನು ಬರೆದು ಕೇಳ್ವರ್ಗೆ
ಬಂದ ಕಂಟಕ ಪರಿಹಾರವು
ಎಂದೆಂದಿಗೆ ಹರಿಭಕ್ತಿ ದೊರಕುವುದು
ಮುಂದಕ್ಕೆ ಮುಕ್ತಿ ಸಾಧನವು''[೨೪]

ಎಂದು ಹೇಳಿರುವಲ್ಲಿ ಗಿರಿಯಮ್ಮನ ಹರಿನಿಷ್ಠೆ ಈ ಹಾಡಿನಲ್ಲಿ ಸ್ಪಷ್ಟವಾಗಿದೆ.

## ಬ್ರಹ್ಮಕೊರವಂಜಿ

ಗಿರಿಯಮ್ಮ ಇಲ್ಲಿನ ಹಾಡನ್ನು ಕೃಷ್ಣ ಕಥೆಯನ್ನಾಗಿ ತನ್ಮಯದಿಂದ ಹಾಡಿ ವರ್ಣಿಸಿದ್ದಾಳೆ. ಕೊರವಂಜಿಯ ಪಾತ್ರ ಭಾಗವತರ ಕಲ್ಪನೆಯಲ್ಲಿಲ್ಲ. ಆದರೂ ಕಥಾಸಂದರ್ಭದಲ್ಲಿ ಗಿರಿಯಮ್ಮ ಅತ್ಯಂತ ಚಾಣಕ್ಷವಾದ ನಿರೂಪಣಾ ತಂತ್ರದಲ್ಲಿ ಹೇಳಿರುವಳು.

ಈ ಕಥೆಯು ಜಾನಪದ ಮೂಲದಿಂದಲೇ ಬಂದಿರಬಹುದೆಂದು ವಿದ್ವಾಂಸರ ಅಭಿಮತ. ವಸುದೇವ ದೇವಕಿಯರ ಮಗುವಾಗಿ ಜನಿಸುವ ಕೃಷ್ಣನು, ಕಂಸನನ್ನು ಕೊಲ್ಲುವನು ಎಂದು ಅಶರೀರವಾಣಿಯ ನುಡಿಯನ್ನು ನಿಜವಾಗಿಸದೆ, ವಸುದೇವ-ದೇವಕಿಗೆ ಹುಟ್ಟುವ ಮಕ್ಕಳೆಲ್ಲರನ್ನೂ ಕಂಸನು ಕೊಲ್ಲುವುದನ್ನು ನೋಡಿ ನೊಂದು ಬಳಲುತ್ತಿದ್ದ ದೇವಕಿಗೆ ಕೃಷ್ಣ ಜನನದ ವಾರ್ತೆಯ ತಿಳಿಸಲು ಬ್ರಹ್ಮನು ಕೊರವಂಜಿಯ ವೇಷಧರಿಸಿ ಬಂದು ದೇವಕಿಗೆ ಮನವರಿಕೆ ಮಾಡುವ ಕಥನವು. ಕೃಷ್ಣಹುಟ್ಟುವುದು, ಅವನು ಗೋಕುಲದಲ್ಲಿ ಬೆಳೆದು, ಬಿಲ್ಲು ಹಬ್ಬಕ್ಕೆ ಮಧುರೆಗೆ ಬಂದು ಕಂಸನನ್ನು ಕೊಲ್ಲುವರೆಗಿನ ಭಾಗವತದ ದಶಮಸ್ಕಂಧ ಪೂರ್ವಾರ್ಧದಲ್ಲಿನ ಘಟನೆಗಳನ್ನೆಲ್ಲ ಹೇಳುತ್ತಾಳೆ. ಕೊನೆಯಲ್ಲಿ ''ಆಗದಾಗದು ಎಂದು ಅನುಮಾನ ಗೊಳ್ಳದಿರೇ ಆದೀತು ಅಮ್ಮಯ್ಯ ಅಭಯವನು ಕೊಳ್ಳಿ ಎಂದು ಭರವಸೆ ಕೊಡುತ್ತಾಳೆ''[೨೫]

ಕೃಷ್ಣಕೊರವಂಜಿ ಹಾಡು ಮತ್ತು ಲವ-ಕುಶರ ಕಾಳಗ ಹಾಡುಗಳ ಕುರಿತು ಸರೋಜಿನಿ ಮಹಿಷಿಯವರು ತಮ್ಮ 'ಕರ್ಣಾಟಕದ ಕವಯಿತ್ರಿಯರು' ಮಹಾಪ್ರಬಂಧದಲ್ಲಿ ಈ ವಿವರಣೆಗಳನ್ನು ಕೊಟ್ಟಿರುತ್ತಾರೆ.

೧. **ಕೃಷ್ಣಕೊರವಂಜಿ** : ಈ ಹಾಡಿನಲ್ಲಿ ರುಕ್ಮಿಣಿಯ ಅಣ್ಣನಾದ ರುಕ್ಮಿಯು ತನ್ನ ತಂಗಿಯನ್ನು ದಮಘೋಷನ ಮಗ ಶಿಶುಪಾಲನಿಗೆ ಮದುವೆ ಮಾಡಿಕೊಡಲು ನಿಶ್ಚಯಿಸುತ್ತಾನೆ. ಕೃಷ್ಣ-ರುಕ್ಮಿಣಿಯರು ಪರಸ್ಪರ ಮೆಚ್ಚಿಕೊಂಡಿರುತ್ತಾರೆ. ರುಕ್ಮಿಣಿ ವಿವಾಹದ ದಿನ ಹತ್ತಿರ ಬರುತ್ತಿದ್ದಂತೆಯೇ ಕಾತರದಿಂದ ತಲ್ಲಣಿಸುತ್ತಿದ್ದ ರುಕ್ಮಿಣಿಗೆ ಕೊರವಂಜಿಯ ವೇಷ ಧರಿಸಿದ ಕೃಷ್ಣನೇ ಬಂದು ಸಮಾಧಾನ ಹೇಳಿ ಧೈರ್ಯ ತುಂಬುವುದಾಗಿದೆ.

''ಹೆಬ್ಬಾಗಿಲದೊಳ್ ಹುಬ್ಬುಗಳ ಕುಣಿಸುತ
ಅಬ್ಬರದಿಂದ ಸ್ವರಗೈದಾಳು
ಏಯವ್ವ, ಏಯಕ್ಕಾ, ಏಯಮ್ಮಾ ಬಾರೆಂದು
ಸಾರುತ ನಡೆದಾಳ ಕೊರವಂಜಿ''[೨೬]

ಈ ಹಾಡಿನಲ್ಲಿ ಕೊರವಂಜಿ ವೇಷ ಧರಿಸಿದ ಕೃಷ್ಣನ ತಂತ್ರ ಫಲಿಸುವ ಸುಖಾಂತ ಕಥೆಯಾಗಿದೆ.

೨. **ಲವ-ಕುಶರ ಕಾಳಗ:** ಈ ಹಾಡು ಡಾ. ಸರೋಜಿನಿ ಮಹಿಷಿಯವರು ತಮ್ಮ ಮಹಾಪ್ರಬಂಧದಲ್ಲಿ

ಇದರ ಪೂರ್ಣ ವಿವರಣೆ ನೀಡಿರುವುದನ್ನು ತಿಳಿಯಬಹುದು. ರಾಮ, ಲಕ್ಷ್ಮಣ, ಸೀತೆ ಹಾಗೂ ಕೊರವಂಜಿಯ ವೇಷಧರಿಸಿ ಬರುವ ಶೂರ್ಪನಖಿ ಪಾತ್ರಗಳು ಈ ಹಾಡಿನಲ್ಲಿ ಪ್ರಮುಖವಾಗಿ ಕಂಡುಬರುತ್ತವೆ. ಮಕ್ಕಳಿಗಾಗಿ ಹಂಬಲಿಸಿ ಗರ್ಭಿಣಿಯಾದ ಸೀತೆಯನ್ನು ನೋಡಿದ ವಸಿಷ್ಠರು ತಮ್ಮ ಜ್ಞಾನದೃಷ್ಟಿಯಿಂದ ನೋಡಿ, ಅರಣ್ಯದೊಳೀಕೆ ಹೆರವೋಳೆಂದೆನುತಲಿ' ಮರುಗಿ ಚಿಂತಿಸಿದರಂತೆ. ಸೀತೆಯ ಈ ಸ್ಥಿತಿಗೆ ಕಾರಣವಾದ ಪ್ರಸಂಗವನ್ನು ಹಿನ್ನೆಲೆಯಾಗಿ ನೋಡಿದರೆ,

ರಾಮಲಕ್ಷ್ಮಣರು ಬೇಟೆಗಾಗಿ ತೆರಳಿದ ಸಂದರ್ಭದಲ್ಲಿ ಶೂರ್ಪನಖಿ ಕೊರವಿಯ ವೇಷಧರಿಸಿ ಬಂದು ಸೀತೆಯಲ್ಲಿ ರಾವಣನ ಚಿತ್ರಪಟವನ್ನು ರಚಿಸಿಕೊಡೆಂದು ಒತ್ತಾಯಿಸುತ್ತಾಳೆ. ಒಪ್ಪದಿದ್ದ ಸೀತೆಗೆ ಮರುಳಿನ ಮೇಲೆ ಬೂದಿಯ ಸಿಂಪಡಿಸಿ ಅದರ ಮೇಲೆ ರಾವಣನ ಚಿತ್ರ ಬಿಡಿಸುವಂತೆ ಒತ್ತಾಯಿಸಿದ ಕೊರವಂಜಿಗೆ, ಸೀತೆಯು ತನಗೆ ರಾವಣನ ಅಂಗುಷ್ಠ ಮಾತ್ರ ಗೊತ್ತು, ಎಂದಷ್ಟೇ ಹೇಳಿದರೂ, ಕೇಳದೆ ಆಕೆ ಬರೆದ ಚಿತ್ರ ಎಂದೆಂದಿಗೂ ಅಳಿಸಿ ಹೋಗದಂತೆ ಸೀತೆಯಿಂದ ವರ ಪಡೆದು ತೆರಳುತ್ತಾಳೆ. ಈ ಚಿತ್ರಪಟವನ್ನು ನೋಡಿ ರಾಮನು ಸಿಟ್ಟಿನಿಂದ

''ಏಸು ದಿವಸ ಘಾಸಿಯಾಗಿ ಬರೆದಿ ಇವನ ಏಸು ದಿವಸ ಭೋಗಿಸಿದಿ
ಮೋಸ ಮಾಡಿದಿ ದೇವಿ ಎನಕೊಡ ಹೇಳದೆ ಘಾಸಿ ಮಾಡಿದಿ ಎನ್ನ''[೨೭]

ಎಂದು ಕೋಪದಿಂದ ಸೀತೆಯನ್ನು ಕಾಡಿನಲ್ಲಿಕೊಂದುಬರಲು ಲಕ್ಷ್ಮಣನಿಗೆ ಅಪ್ಪಣೆ ಮಾಡುತ್ತಾನೆ. ಕಾಡಿನಲ್ಲಿ ದೇವತೆಗಳು ಅಡ್ಡ ಬಂದಿದ್ದರಿಂದ ಸೀತೆಯನ್ನು ಕೊಲ್ಲದೇ ಗುರುತನ್ನು ಮಾತ್ರ ಒಯ್ಯುತ್ತಾನೆ. ಇತ್ತ ಕಾಡಿನಲ್ಲಿದ್ದ ಸೀತೆಗೆ ವಶಿಷ್ಠರು ತಮ್ಮ ಆಶ್ರಮದಲ್ಲಿ ಆಶ್ರಯ ಕೊಟ್ಟು ಲವ-ಕುಶರ ಜನನಕ್ಕೆ ಸಹಕರಿಸುತ್ತಾರೆ.

ಲವಕುಶರು ಹುಟ್ಟಿ ಬೆಳೆದು ಬಾಲ್ಯಕಳೆದು ಯುವಕರಾಗುವಷ್ಟರಲ್ಲಿಯೇ ರಾಮನ ಅಶ್ವಮೇಧ ಯಾಗದ ಕುದುರೆಯನ್ನು ವಸಿಷ್ಠರ ಆಶ್ರಮದಲ್ಲಿದ್ದ ಲವಕುಶರು ಬಂಧಿಸುತ್ತಾರೆ. ಯುದ್ಧದಲ್ಲಿ ಒಬ್ಬೊಬ್ಬರಾಗಿ ರಾಮನ ತಮ್ಮಂದಿರು ಮಕ್ಕಳಿಂದ ಸೋತು ಬಂದಾಗ, ಕೊನೆಗೆ ರಾಮನೇ ರಣರಂಗಕ್ಕೆ ಬರುತ್ತಾನೆ. ಈ ಯುದ್ಧದಲ್ಲಿ ರಾಮನಿಗೆ ತನ್ನ ಮಕ್ಕಳಿಂದಲೇ ರಾಮನ ಕಥೆಯನ್ನು ತಿಳಿದು, ಕೊನೆಗೆ ರಾಮ, ಸೀತೆಯರು ಒಂದಾಗಿ ಹಾಡು ಸುಖಾಂತವಾಗುತ್ತದೆ.

ಗಿರಿಯಮ್ಮ ಭಕ್ತಿಯಿಂದ ಬರೆದ ಈ ಹಾಡುಗಳಾಗಲೀ, ಕಥೆಗಳಾಗಲೀ ಪಂಡಿತರನ್ನು ಮೆಚ್ಚಿಸಲಿಕ್ಕೋ ರಾಜರಿಂದ ಮನ್ನಣೆ ಪಡೆಯಲಿಕ್ಕಾಗಿಯೋ ರಚಿತವಾದವುಗಳಲ್ಲ ಆಕೆಯಲ್ಲಿ ಸಹಜವಾಗಿ ಭಕ್ತಿಯಿಂದ ಪ್ರೇರೇಪಿತವಾದ ಹಾಡುಗಳು. ಗಿರಿಯಮ್ಮಳ ಕಾವ್ಯಸೃಷಿಸ್ಟಿಯು ತನ್ನ ಭಕ್ತಿ ಪರವಾದ ಹರಿಕಥೆಗಳನ್ನು ರಚಿಸಿ, ಹಾಡುತ್ತಾ, ಕಳೆದ ಬದುಕಿನ ದಿನಗಳೆಲ್ಲಾ ಸಾರ್ಥಕವಾಗಿದ್ದವು ಎಂಬುದನ್ನು ಚಂದ್ರಹಾಸನ ಕಥೆಯಲ್ಲಿ ಕೊನೆಯಭಾಗದಲ್ಲಿ ಸ್ಪಷ್ಟಪಡಿಸಿದ್ದಾಳೆ.

ಗಿರಿಯಮ್ಮಳ ಕಾವ್ಯಸೃಷ್ಟಿಯು ಸರಳ ಭಾಷೆಯಲ್ಲಿ, ಹಿತಮಿತವಾಗಿರುವ ವರ್ಣನೆಗಳಿಂದ ಭಕ್ತಿವಲಯಗಳಲ್ಲಿ ನಿರರ್ಗಳವಾಗಿ ಹಾಡಿಸಿಕೊಳ್ಳುತ್ತದೆ. ಈ ಹಾಡುಗಳು ಕನ್ನಡ ಭಕ್ತಿ ಸಾಹಿತ್ಯದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನ ಪಡೆದಿರುವುದನ್ನು ನಾವು ತಿಳಿಯುತ್ತೇವೆ.

ಈ ಕವಯಿತ್ರಿಯು ತನ್ನ ಹಾಡಿನ ಮೂಲಕ ಭಕ್ತವೃಂದದಲ್ಲಿ ಆರಾಧ್ಯಳೆನಿಸಿದಂತೆಯೇ, ಮುಂದಿನ ದಾಸ ಕೀರ್ತನಾ ಮಹಿಳೆಯರಲ್ಲಿ ಹೆಚ್ಚು ಹೆಚ್ಚು ಪ್ರೇರಣಾ ಶಕ್ತಿಯಾಗಿ ಇತರ ಮಹಿಳಾ ಹರಿದಾಸರಲ್ಲಿ ಪ್ರಮುಖಳಾಗಿರುವಳು. 'ಹೆಳವನಕಟ್ಟೆ ಗಿರಿಯಮ್ಮನ' ಬದುಕು, ಬರಹಗಳಂತೆಯೇ, ಆಕೆಯಲ್ಲಿನ ಭಕ್ತಿಯು ಅತ್ಯಂತ ಸ್ತುತ್ಯಾರ್ಹವಾದುದು ಎನ್ನಬಹುದಾಗಿದೆ.

**ಓರುಬಾಯಿ ಲಕ್ಷ್ಮೀದೇವಮ್ಮನವರ ಜೀವನ ವಿಚಾರ ಮತ್ತು ಕೃತಿಗಳು:** ಓರುಬಾಯಿ ಲಕ್ಷ್ಮೀದೇವಮ್ಮನವರು ಮೊದಲಿನ ಮಹಿಳಾ ಹರಿದಾಸರಂತೆ ವಿವಾಹದ ನಂತರ ಬಹುಬೇಗ ವೈಧವ್ಯಕ್ಕೆ ಗುರಿಯಾಗಿ ವೈರಾಗ್ಯದಿಂದ ಭಕ್ತಿಯೆಡೆಗೆ ಸಾಗಿಬಂದವರಲ್ಲ. ಲಕ್ಷ್ಮೀದೇವಮ್ಮನವರು ಶಿಷ್ಟ ಸಂಪ್ರದಾಯದ ಮನೆಯ ಮಗಳಾಗಿ ವಕೀಲ ಮಧ್ವರಾಯರ ಪತ್ನಿಯಾಗಿ, ತಾವು ಮೆಟ್ಟಿದ ಮನೆಯ ಲಕ್ಷ್ಮೀದೇವಿಯಂತೆ ಕಂಗೊಳಿಸಿದವರು ಎಂದು ತಿಳಿದುಬರುತ್ತದೆ. ಹಾಗೆಯೇ, ಅವರ ಕೀರ್ತನೆಗಳಲ್ಲೂ ಹರಿಭಕ್ತಿಯಿಂದ ಸಮಾಜಕ್ಕೆ ಒಳಿತಾಗಲಿ ಎಂಬ ಆಶಯಗಳನ್ನೇ ಕಾಣಬಹುದು. ಅವರಿಗೆ ಕಾವ್ಯ ರಚನೆ ಸಾಧ್ಯವಾದುದು, ಅವರ ಜನಪದರ ಸೇವೆಯ ಕಾರಣದಿಂದ ಎಂದು ಹೇಳಬಹುದು.

ಓರುಬಾಯಿ ಲಕ್ಷ್ಮೀದೇವಮ್ಮನವರು ಸೊಂಡೂರಿನ ದಿವಾನರಾಗಿದ್ದ ಲಕ್ಷ್ಮಣರಾಯರು ಮತ್ತು ಗೋದಾವರಿಬಾಯಿಯವರ ಏಕಮಾತ್ರ ಪುತ್ರಿಯಾಗಿದ್ದು, ಕ್ರಿ.ಶ.೧೮೬೫ನೇ ವರ್ಷದಲ್ಲಿ ಜನಿಸಿದರು. ಮುದ್ದಾದ ಹೆಣ್ಣು ಶಿಶು ತನ್ನ ವಯೋಸಹಜವಾದ ಆಟಪಾಠಗಳಿಂದ ತಂದೆ, ತಾಯಿ, ಬಂಧು-ಬಳಗವನ್ನೆಲ್ಲ ಸಂತೋಷಗೊಳಿಸುತ್ತಿತ್ತು. ಅತ್ಯಂತ ಮುದ್ದಿನಿಂದ ಸಾಕಿದ ಮಗಳಿಗೆ ಏಳನೇ ವರ್ಷದಲ್ಲಿಯೇ ತಂದೆ ತಾಯಿಯರು ಹನ್ನೊಂದು ವರ್ಷದ ಸೋದರಳಿಯ ಮಧ್ವರಾಯರೊಡನೆ ವಿವಾಹ ನಡೆಸಿದರು. ವಿವಾಹವಾದ ಕನ್ಯೆಗೆ ತಾಯಿ ಗೋದಾವರಿಬಾಯಿಯವರು ತಮ್ಮ ಕೌಟುಂಬಿಕ ಪರಿಸರದಲ್ಲಿನ ರೀತಿ ನೀತಿಗಳನ್ನು, ಪೂಜೆ, ಪುನಸ್ಕಾರಗಳನ್ನೆಲ್ಲ ಕ್ರಮಬದ್ಧವಾಗಿ ಕಲಿಸಲಾರಂಭಿಸಿದರು.

ಅವ್ವನವರು, ೧೯ನೇ ಶತಮಾನದ ಆರಂಭ ಕಾಲದಲ್ಲಿ ಜೀವಿಸಿದ್ದರಿಂದ, ಆ ಕಾಲದಲ್ಲಿ ಹೆಣ್ಣು ಮಕ್ಕಳಿಗೆ ಶಾಲಾ ಶಿಕ್ಷಣವು ಲಭ್ಯವಿರಲಿಲ್ಲ. ಆದ್ದರಿಂದ ಅವರಿಗೆ ತಂದೆ ಲಕ್ಷ್ಮಣರಾಯರೇ ಕನ್ನಡ ಮತ್ತು ಸಂಸ್ಕೃತ ಭಾಷೆಗಳನ್ನು ಕಲಿಸುತ್ತಿದ್ದರು. ಅವ್ವ, ತನ್ನ ತಾಯಿಯವರಿಂದ ಕೌಟುಂಬಿಕವಾಗಿ ಅಗತ್ಯವಾದ ಸಾಂಪ್ರದಾಯಿಕ ಹಾಡು-ಹಸೆಗಳನ್ನು, ಆಚಾರ-ವಿಚಾರಗಳನ್ನು ನೇಮ-ನಿಷ್ಠೆಗಳನ್ನು ಕಲಿಯುತ್ತಿದ್ದರು. ಈಕೆ ಬಾಲಕಿಯಾಗಿದ್ದಾಗ, ಹರಪನಹಳ್ಳಿಯಲ್ಲಿ ಭೀಮವ್ವನವರು ಇದ್ದುದು, ಅಂತಹ ಅನುಭಾವೀ

ಕವಯಿತ್ರಿಯ ಭಕ್ತಿಯ ಕಥನ ಕಾವ್ಯಗಳು ಲಕ್ಷ್ಮೀದೇವಮ್ಮನವರಿಗೆ ಅಪಾರ ಆಸಕ್ತಿಯಿಂದ ಭಕ್ತಿಯ ಹಾಡುಗಳನ್ನು ಕಲಿಯಲು ಪ್ರೇರಣೆಯಾದವು.

ಲಕ್ಷ್ಮೀದೇವಮ್ಮನವರ ಪತಿ ಮಧ್ವರಾಯರು ಗುತ್ತಿಯಲ್ಲಿ ವಕೀಲಿ ವೃತ್ತಿಯನ್ನು ಆರಂಭಿಸಿದರು. ಅವ್ವನವರಿಗೆ ತೌರುಮನೆಯಲ್ಲಿ ಇದ್ದಂತಹ ಶೈಕ್ಷಣಿಕ ಪ್ರೋತ್ಸಾಹ, ಸಹಕಾರಗಳೂ ಅದರೊಂದಿಗೆ ಪತಿಯ ಸಹಕಾರಗಳೂ ದೊರೆತುದು ಅವರ ಸಾಹಿತ್ಯಿಕ ಸಾಧನೆಗೆ ಕಾರಣವಾದವು.

ಲಕ್ಷ್ಮೀದೇವಮ್ಮ ಮತ್ತು ಮಧ್ವರಾಯ ದಂಪತಿಗಳಿಗೆ ಗಂಡುಮಗುವೊಂದು ಜನಿಸಿ ಸ್ವಲ್ಪ ಕಾಲದಲ್ಲಿಯೇ ಆ ಮಗು ತೀರಿಹೋಯಿತು. ಮಗುವಿನ ಮರಣದಿಂದ ವ್ಯಥಿತರಾದ ದಂಪತಿಗಳು ಮತ್ತೊಂದು ಮಗುವಿನ ಕುರಿತು ಯೋಚಿಸದೆ, ಮಧ್ವರಾಯರ ತಂಗಿಯಾದ ಭಾಗಮ್ಮ ಮತ್ತು ಆಕೆಯ ಪತಿ ರಾಘವೇಂದ್ರರಾಯರಿಗೆ ಇದ್ದ ಎರಡು ಹೆಣ್ಣು, ಎರಡು ಗಂಡು ಸಂತಾನಗಳಲ್ಲಿ ಕಿರಿಯ ಗಂಡು ಮಗುವನ್ನು ದತ್ತಕ ಪುತ್ರನಾಗಿ ಪಡೆದುಕೊಂಡರು.

ಅವ್ವನವರು, ಗುತ್ತಿಯಲ್ಲಿ ನೆಲೆಸಿದ್ದರಿಂದ, ಗುತ್ತೆವ್ವನೆಂತಲೂ ಕರೆಯುತ್ತಿದ್ದರು. ಕೆಲವು ಕಾಲದ ನಂತರ ಮಧ್ವರಾಯರು ತಮ್ಮ ವಾಸ್ತವ್ಯವನ್ನು ಗುತ್ತಿಯಿಂದ ಆದವಾನಿಗೆ ಬದಲಾಯಿಸಿದರು. ಸಾಂಸ್ಕೃತಿಕವಾಗಿ ಆದವಾನಿಗೆ ಯಾದಗಿರಿ ಎಂಬ ಹೆಸರಿದೆ. ಇಲ್ಲಿನ ದೇವತೆ ವ್ಯಾಸರಾಯರಿಂದ ಪ್ರತಿಷ್ಠಾಪನೆಯಾದ ಆಂಜನೇಯಸ್ವಾಮಿ ಇವನಿಗೆ ಮಂಗರಾಯನೆಂಬ ಹೆಸರಿನಿಂದಲೂ ಕರೆಯುತ್ತಾರೆ. ಹಾಗೇ ಈ ಊರಿನಲ್ಲಿ ಮಂಗರಾಯನ ಜಾತ್ರೆ ಬಹಳ ವಿಶಿಷ್ಟವಾಗಿ ನಡೆಯುತ್ತದೆ. ಇದಲ್ಲದೆ ಊರ ಮಧ್ಯದಲ್ಲಿ ಮಂಗಳಾಪುರದಲ್ಲಿ ಹನುಮಂತದೇವರ ಗುಡಿಯಿದೆ ಹೀಗೆ ಪ್ರಸಿದ್ಧಿ ಪಡೆದ ಆದವಾನಿಯಲ್ಲಿ ಮಧ್ವರಾಯರು ನೆಲೆಸಿ, ಅಲ್ಲಿ ಅವರು ತಮ್ಮ ಅಭಿರುಚಿಗೆ ತಕ್ಕಂತೆ ರಸಿಕರೂ, ಸಂಘಜೀವಿಗಳೂ ಆದುದರಿಂದ ಹೋಳಿ ಹುಣ್ಣಿಮೆಯಂತಹ ಆಚರಣೆಗಳಲ್ಲಿ ಸಂಗೀತ, ಹರಿಕಥೆ, ತಾಫೇಗಳಂತಹ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದರು. ಸಂಘಜೀವಿಯಾದ ಮಧ್ವರಾಯರು ಆದವಾನಿಗೆ ಬರುವ ನಾಟಕಗಳನ್ನು ಪ್ರೋತ್ಸಾಹಿಸಿ ನೆರವಾಗುತ್ತಿದ್ದರು. ಅಂದಿನ ಪ್ರಸಿದ್ಧ ಪುರಾಣಿಕರಾಗಿದ್ದ, ಸಂಗೀತಗಾರರು ಆದ ತುಳಸಿರಾಮಾಚಾರ್ಯರು ಅಂದಿನ ನಾಟಕಗಳಲ್ಲಿ ಸ್ತ್ರೀಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಸಹಜವಾಗಿ ಅವ್ವನವರು ತಮ್ಮ ಪತಿಯ ಆಸಕ್ತಿಗಳಿಗೆ ಬೆಂಬಲವಾಗಿ ನಿಲ್ಲುತ್ತಿದ್ದರು."

"ಲಕ್ಷ್ಮೀದೇವಮ್ಮನವರು ತುಂಬ ಸುಂದರಿಯಾಗಿದ್ದು, ಕೇದಗೆಯ ಮೈಬಣ್ಣ, ವಿಶಾಲವಾದ ದಯಾಪೂರಿತ ನೇತ್ರಗಳೂ, ಭಕ್ತಿಯನ್ನೇ ಮೈಗೂಡಿಸಿಕೊಂಡ ಮಟ್ಟಸವಾದ ದೇಹ ಹೊಂದಿದ್ದವರು. ಮಾಧ್ವ ಸಂಪ್ರದಾಯದಂತೆ ಕಚ್ಚೆ ಸೀರೆಯುಟ್ಟು, ಹಣೆಗೆ ಉದ್ದವಾದ ಕುಂಕುಮದ ತಿಲಕವಿಟ್ಟು, ನಿಲುವಾಭರಣಗಳಿಂದ ಅಲಂಕೃತಗೊಳ್ಳುತ್ತಿದ್ದ ಲಕ್ಷ್ಮೀದೇವಮ್ಮನವರು ಸಾಕ್ಷಾತ್ 'ಲಕ್ಷ್ಮೀದೇವಿ'ಯಂತೆ ಕಂಗೊಳಿಸುತ್ತಿದ್ದರು."[೨೫] ಅವರ ಕರುಣೆಯ ಆಶ್ರಯದಲ್ಲಿ ಅನೇಕ ಕುಟುಂಬಗಳು ಬಾಳುತ್ತಿದ್ದವು.

ಅಪ್ಪನವರು ಬಾಲ್ಯದಲ್ಲಿಯೇ ತಾಯಿಯಿಂದ ಶಾಸ್ತ್ರ, ಸಂಪ್ರದಾಯ, ನೇಮಗಳನ್ನು ಕಲಿತಂತೆ, ಅನೇಕ ಲಲಿತ ಕಲೆಗಳನ್ನು ರೂಢಿಸಿಕೊಂಡಿದ್ದರು. ಅವುಗಳಲ್ಲಿ. ಅಲಂಕರಣ ಸಾಮಾಗ್ರಿಗಳನ್ನು ತಯಾರಿಸುವುದು. ಜೇಡಿ ಮಣ್ಣಿನಲ್ಲಿ ಬೊಂಬೆಗಳನ್ನು ತಯಾರಿಸುವುದು, ಹಸನಾದ ಮಣ್ಣಿನಲ್ಲಿ ಮುದ್ದು ಪಾರಿವಾಳಗಳನ್ನು ಮಾಡುವುದು, ಚಿತ್ರ ವಿಚಿತ್ರವಾದ ರಂಗೋಲಿಗಳನ್ನು ಬಿಡಿಸುತ್ತಿದ್ದರು. ಇವುಗಳೊಂದಿಗೆ ಪಾಕಶಾಸ್ತ್ರ, ಮನೆವೈದ್ಯದಲ್ಲೂ ಆಕೆಗೆ ಪ್ರಾವೀಣ್ಯತೆಯು ತವರಿನ ಕೊಡುಗೆಯಾಗಿತ್ತು. ಅಪ್ಪನವರು ತಮ್ಮ ವೈದ್ಯ ಕಲೆಯಿಂದ ಜನಸಾಮಾನ್ಯರಲ್ಲಿ ಬಂದದೊದಗುವ ಸನ್ನಿಪಾತ, ಜ್ವರ, ಮಕ್ಕಳಿಗೆ ಬರುವ ವಾಯು, ಅಪಸ್ಮಾರ ಮುಂತಾದ ಖಾಯಿಲೆಗಳಿಗೆ ಇವರ ಮಾತ್ರೆಗಳು ಸಂಜೀವಿನಿಯಂತೆ ಕಾರ್ಯ ನಿರ್ವಹಿಸುತ್ತಿದ್ದವು.

ಅಪ್ಪನವರು ಮನೆಯಲ್ಲಿಯೇ ಗುಳಿಗೆಗಳನ್ನು ತಯಾರಿಸಿಕೊಂಡು ಕೇಳಿದವರಿಗೆ ಉಚಿತವಾಗಿಯೇ ನೀಡುತ್ತಿದ್ದರು. ಲಕ್ಷ್ಮೀದೇವಮ್ಮನವರಿಗೆ ಚಿಕ್ಕಂದಿನಿಂದಲೂ ಅಪಾರವಾದ ದೈವ ಭಕ್ತಿ ಶ್ರದ್ಧೆಗಳಿದ್ದರೂ, ಆಕೆ ಎಂದಿಗೂ ಮೂಢನಂಬಿಕೆಗೆ ಶರಣಾಗಿರಲಿಲ್ಲ. ಅದಕ್ಕೆ ನಿದರ್ಶನವೆಂಬಂತೆ ಅಪ್ಪನವರ ಮನೆತನದಲ್ಲಿ ವರಮಹಾಲಕ್ಷ್ಮಿ ವ್ರತವನ್ನು ಮಾಡುವಾಗ ಕಲಶ ಸ್ಥಾಪನೆಯನ್ನು ಮಾಡುತ್ತಿರಲಿಲ್ಲ. ಆ ಮನೆಯವರು ಬೇರೆ ಮನೆಗಳಲ್ಲಿಟ್ಟು ಪೂಜಿಸುತ್ತಿದ್ದ ಕಲಶಕ್ಕೆ ಪೂಜೆ ಸಲ್ಲಿಸಿ ಬರುತ್ತಿದ್ದರು. ಯಾವುದೇ ಕಾರಣಕ್ಕೂ ಆ ಮನೆಯವರು ವ್ರತವನ್ನು ಹಿಡಿಯದೇ ಉದ್ಯಾಪನೆಯನ್ನು ಮಾಡದೆ ತಮ್ಮ ಪರಂಪರೆಯಂತೆಯೇ ನಡೆಸುತ್ತಿದ್ದರು. ಇದನ್ನೆಲ್ಲ ಗಮನಿಸಿದ ಅಮ್ಮನವರು, ಕಲಶ ಸ್ಥಾಪನೆ ಎಂಬುದು ಕೆಟ್ಟ ವಿಚಾರವಲ್ಲ ಎಂದು ಯೋಚಿಸಿ ಜಗನ್ಮಾತೆಯಾದ ಮಹಾಲಕ್ಷ್ಮಿಯನ್ನು ಪೂಜಿಸಿದರೆ ಕೆಡುಕಾಗುವುದೇ? ಸಾಧ್ಯವಿಲ್ಲ ಎಂದು ನಿರ್ಧರಿಸಿ, ಆದದ್ದಾಗಲಿ ಎಂಬಂತೆ ವರಮಹಾಲಕ್ಷ್ಮೀ ಹಬ್ಬದ ದಿನ ಕಲಶ ಸ್ಥಾಪನೆ ಮಾಡಿ ಶಾಸ್ತ್ರೋಕ್ತವಾಗಿ, ಯಥೋಚಿತ ಸಂಪ್ರದಾಯಗಳಂತೆ ಪೂಜೆಯನ್ನು ಮಾಡಿದರು. ಪೂಜೆ ಮುಗಿದ ಬಳಿಕ ಸ್ವಲ್ಪ ಹೊತ್ತು ವಿರಮಿಸಲು, ಮಲಗಲು ಆಕೆಗೆ ಏನೋ ಶಬ್ಧವಾದಂತಾಯಿತು. ಕಣ್ತೆರೆದು ನೋಡಿದರೆ, ಸರ್ವಲಂಕಾರ ಭೂಷಿತೆಯಾದ ಸ್ತ್ರೀಯೊಬ್ಬಳು ದೇವರ ಮನೆಯಿಂದ ಹೊರ ಹೋಗುತ್ತಿರುವುದು ತಿಳಿದು ಆಕೆಯನ್ನು ಅಡ್ಡಗಟ್ಟಿ ಪ್ರಶ್ನಿಸುತ್ತಾರೆ. ಆಕೆಗೆ, ಆ ಸ್ತ್ರೀಯು ಕೊಟ್ಟ ಉತ್ತರವೆಂದರೆ, ತನಗೆ ದೊರೆಯುವ ಪೂಜಾ, ಮರ್ಯಾದೆಗಳೆಲ್ಲ ದೊರೆತ ಮೇಲೆ ತನಗಿನ್ನೇನು ಕೆಲಸ ಎಂದಳಂತೆ. ಆಗ ಅಪ್ಪನವರು ಅದಾಗದು, ನೀನು ಈ ಮನೆಯಲ್ಲಿ ನೆಲಸಲಿ ಎಂಬ ಉದ್ದೇಶದಿಂದಲೇ ಪೂಜಿಸಿದ್ದು, ನೀನು ಇಲ್ಲಿಯೇ ನೆಲೆಸಿ ನಮ್ಮ ಮನೆಯವರಿಗೆ ಒಳಿತಾಗುವಂತೆ ಅನುಗ್ರಹಿಸಬೇಕೆಂದು ಬೇಡಿಕೊಂಡರಂತೆ. ಆಗ ಆ ಸ್ತ್ರೀಯು ಹಾಗೆಯೇ ಆಗಲಿ ಎಂದು ಪುನಃ ಒಳಗೆ ಹೋದಂತಾಯಿತಂತೆ.

ಇಂತಹ ಅಪಾರ ದೈವಶ್ರದ್ಧೆಯನ್ನು ಒಳಗೊಂಡ ಲಕ್ಷ್ಮೀದೇವಮ್ಮರು ಅನೇಕ ಪೂಜೆ, ವ್ರತ ಗಳನ್ನು ನಡೆಸಿ, ಧರ್ಮಕಾರ್ಯಗಳಲ್ಲಿ ತೊಡಗಿಸಿಕೊಂಡವರು. ಅಪ್ಪನವರು ಅನೇಕ ತೀರ್ಥಕ್ಷೇತ್ರಗಳನ್ನು

ಸಂದರ್ಶಿಸಿದರಂತೆ. ತಿರುಪತಿ, ಮಂಗಳಗಿರಿ, ಸಿಂಹಾಚಲ, ಮುಂತಾದವುಗಳ ಕ್ಷೇತ್ರ ಸಂದರ್ಶಿಸಿ ಅವುಗಳ ಮಹಿಮೆಯ ಕುರಿತು ಪದಗಳನ್ನು ರಚಿಸಿರುವರು. ಅಂದಿನ ಕಾಲದಲ್ಲಿ ಲಕ್ಷ್ಮೀದೇವಮ್ಮನವರ ಮನೆ ವಿದ್ಯಾದಾನ ಮತ್ತು ಅನ್ನದಾನ ಕೇಂದ್ರವಾಗಿತ್ತು.

ಜನಸಾಮಾನ್ಯರು ಇವರ ಆಶ್ರಯ ಪಡೆದು ಅನೇಕ ಪ್ರಯೋಜನ ಪಡೆಯುತ್ತಿದ್ದರು. ಅಪಾರವಾದ ಶ್ರದ್ಧಾ ಭಕ್ತಿಯಿಂದ ಅವ್ವನವರು ಹರಿ-ಗುರುಗಳ ಸೇವೆಗೆ ಸದಾಕಾಲ ಸಿದ್ಧರಿರುತ್ತಿದ್ದರು. ಲಕ್ಷ್ಮೀದೇವಮ್ಮನವರಿಗೆ ಐವತ್ತೆರಡನೇ ವಯಸ್ಸಿನಲ್ಲಿ ಪತಿ ವಿಯೋಗವುಂಟಾಯಿತು. ಈ ಘಟನೆಯ ನಂತರ ಅವ್ವನವರ ಮನಸ್ಸು ಇನ್ನಷ್ಟು ವಿರಕ್ತವಾಗಲು ಕಾರಣವಾಯಿತು.

ಈ ವಿಧವಾಗಿ ಲಕ್ಷ್ಮೀದೇವಮ್ಮನವರ ದೇಹ-ಮನಸ್ಸುಗಳೆರಡು ಸದಾ ತಮ್ಮ ಇಷ್ಟದೈವದ ಸೇವೆಯ ಚಿಂತನ-ಮಂಥನಗಳಲ್ಲಿ ತೊಡಗಿಸಿಕೊಂಡವು. ''ಅವ್ವನವರ ಮನೆ ದೇವರಾದ ಲಕ್ಷ್ಮೀ ನರಸಿಂಹಸ್ವಾಮಿ ದೇವಾಲಯವನ್ನು ಬಳ್ಳಾರಿಯಲ್ಲಿ ನಿರ್ಮಿಸಲು ಮನಸ್ಸು ಮಾಡಿದರು. ಆದರೆ ದೇವಾಲಯ ನಿರ್ಮಾಣವೆಂದರೆ, ಸುಲಭ ಸಾಧ್ಯವಾದುದಲ್ಲ ಆದುದರಿಂದ ಅವ್ವನವರು ಅಪಾರವಾಗಿ ನಂಬಿಕೆಯಿರಿಸಿದ್ದು ಮಂತ್ರಾಲಯದಲ್ಲೂ, ಕಸಾಪುರ ಪ್ರಾಣದೇವರಲ್ಲೂ, ಅಲ್ಲಿ ಸೇವೆ ನಡೆಸಿದರು. ಆದರೆ, ಅವ್ವನವರಿಗೆ ರಾಯರ ಮಂತ್ರಾಕ್ಷತೆ ದೊರಕದೆ ನಿರಾಶರಾಗಿ ಊರಿಗೆ ಹಿಂತಿರುಗಿ ಬರುವ ದಾರಿಯಲ್ಲಿ ಎಂಟು ವರ್ಷದ ವಟುವೊಬ್ಬ ಏದುಸಿರುಬಿಡುತ್ತಾ ಬಂದು ಅವ್ವನವರ ಕೈಗೆ ಒಂದು ಪತ್ರವನ್ನು ಕೊಟ್ಟನು. ಒಡೆದು ನೋಡಿದರೆ ಅದರ ತುಂಬಾ ಮಂತ್ರಾಕ್ಷತೆಯಿದ್ದವಂತೆ, ಆಶ್ಚರ್ಯಚಕಿತರಾಗಿ ಹುಡುಗನೆಡೆಗೆ ನೋಡಿದರೆ, ಅಲ್ಲಿ ಆ ಬಾಲಕನಿರಲಿಲ್ಲ. ಇದರಿಂದ ಅವ್ವನವರಿಗೆ ರಾಯರ ಸಮ್ಮತಿ ಸಿಕ್ಕ ಸಂತೋಷ ಅಪಾರವಾಗಿ ತಮ್ಮ ಧರ್ಮಕಾರ್ಯ ಮಾಡಲು ಪ್ರಾರಂಭಿಸಿದರು. ದೇವಾಲಯದ ಕೆಲಸ ಆರಂಭವಾಯಿತು. ಬಳ್ಳಾರಿಯಲ್ಲಿ ಅಕ್ಕಸಾಲಿಗರ ಬೀದಿಯಲ್ಲಿ ದೇವಾಲಯ ನಿರ್ಮಾಣ ಮಾಡುವುದೆಂದು ತೀರ್ಮಾನವಾಯಿತು. ಸನ್ ಸಾವಿರದ ಒಂಭೈನೂರು ಐದರಲ್ಲಿ ಶ್ರೀಲಕ್ಷ್ಮೀನರಸಿಂಹ ದೇವರ ಪ್ರತಿಷ್ಠಾಪನೆಯಾಯಿತು.

ಹೀಗೆ ಧರ್ಮಕಾರ್ಯಗಳಲ್ಲಿ ತೊಡಗಿಸಿಕೊಂಡ ಅವ್ವನವರು ಅಂದಿನ ಸಾಮಾಜಿಕರಲ್ಲಿ ಭಕ್ತಿಯನ್ನು ತುಂಬಿ ಆಕೆ ನಡೆದಾಡಿದರೆ ಜ್ಯೋತಿ ನಡೆದಾಡಿದಂತೆ ಭಾಸವಾಗುತ್ತದೆ.''[೫] ಮಾನವ ಸೇವೆಯೇ ಮಾಧವ ಸೇವೆಯೆಂದು ಅವ್ವನವರು ಚೆನ್ನಾಗಿ ತಿಳಿದಿದ್ದರು. ಅವರ ಗೃಹವೈದ್ಯಗಳು ಅಂದು ಎಲ್ಲರಿಗೂ ಅತ್ಯಂತ ಉಪಯೋಗವಾಗುತ್ತಿದ್ದವು ಮತ್ತು ಅವ್ವನವರು ಇದಕ್ಕಾಗಿ ಯಾವ ಪ್ರತಿಫಲವನ್ನು ಪಡೆಯುತ್ತಿರಲಿಲ್ಲ. ಹಾಗಾಗಿ ಅವ್ವನವರ ಸೇವೆಯು ಮಾನವರ ಸೇವೆ, ಮಾಧವನ ಸೇವೆಯಾಗಿತ್ತು ಎಂಬುದು ಖಚಿತವಾದುದಾಗಿತ್ತು.

**ಕೀರ್ತನೆಗಳು :** ಓರುಬಾಯಿ ಲಕ್ಷ್ಮೀದೇವಮ್ಮನವರು ಕೃತಿ ರಚನೆ ಮಾಡಿರುವರು. ಲಕ್ಷ್ಮೀದೇವಮ್ಮನವರ ಕೀರ್ತನೆಗಳ ಅಂಕಿತ "ನರಸಿಂಹವಿಠಲ" ಎಂಬುದು. ಆಗಿನವರು ತಮ್ಮ ಕೀರ್ತನೆಗಳನ್ನು ಬರೆದಿಡುವ ಅಭ್ಯಾಸಗಳಿರಲಿಲ್ಲವಾದುದರಿಂದ ಅವ್ವನವರ ರಚನೆಗಳು ಬಾಯಿಯಿಂದ ಬಾಯಿಗೆ ಹರಿದು ಬರುತ್ತಿದ್ದವು.

ಅನೇಕ ದೇವರನಾಮಗಳು, ರಾಯರ ಮೇಲಿನ ಹಾಡುಗಳು, ಗೊಲ್ಲರ ಹಾಡು, ರಾಮದಾಸರ ಕಥೆ, ಉಡುಪಿಯಲ್ಲಿ ಸುಧಾಮಚರಿತ್ರೆ, ಗೋಪಿಗೀತ, ರಾಸಕ್ರೀಡೆ, ಗೋಕರ್ಣದಲ್ಲಿಮಹಾಬಲೇಶ್ವರ ಸ್ತೋತ್ರ, ಸೋದೆಯಲ್ಲಿ ಶ್ರೀವಾದಿರಾಜರು ಮತ್ತು ತ್ರಿವಿಕ್ರಮದೇವರ ಸ್ತೋತ್ರಗಳನ್ನು ರಚಿಸಿದ್ದಾರೆ. ಇವರ ಅನೇಕ ಕೃತಿಗಳು ಉಪಲಬ್ಧವಿಲ್ಲ.

ಲಕ್ಷ್ಮೀದೇವಮ್ಮನವರು ಅತ್ಯಂತ ಶಿಷ್ಟ ಸಂಪ್ರದಾಯದ ಮನೆಯಲ್ಲಿ ಬೆಳೆದುದು, ಹರಿಗುರುಗಳ ಆರಾಧನೆಯನ್ನು ಬಾಲ್ಯದಿಂದಲೂ ಬೆಳೆಸಿಕೊಂಡು ಬಂದಿರುವ ಅವರು ಸಹಜವಾಗಿ ಭಕ್ತಿಯ ಕುರಿತು ಅತ್ಯಂತ ಭಾವುಕ ಮನಸ್ಸಿನವರಾಗಿದ್ದರು. ಆಕೆಯ ಮನಸ್ಸಿನಾಳದಲ್ಲಿ ಕಾವ್ಯವು ಹರಿಯುವ ತುಂಗಭದ್ರೆಯಾಗಿದ್ದಳು. ಉಕ್ಕುವ ಸಾಗರವಾಗಿ, ವಿಶಾಲವಾದ ವಸ್ತು ವಿಷಯಗಳನ್ನು ಭಕ್ತಿಯಲ್ಲಿ ಗಂಭೀರವಾಗಿ ಹಿಡಿದಿಡಲು ಪ್ರಯತ್ನಿಸಿದ್ದರು. ಈ ರೀತಿಯಾಗಿ ಬರೆದ ಅನೇಕ ರಚನೆಗಳಲ್ಲಿ ಆಕೆ ನೋಡಿದ್ದು, ಕೇಳಿದ್ದು, ಕೂತರೆ, ನಿಂತರೆ ಎಲ್ಲ ಕ್ಷಣಗಳಲ್ಲೂ ಕಾವ್ಯ ನಿರ್ಮಾಣವಾಗಲಾರಂಭಿಸಿತು. ಶುಕ್ರವಾರದ ಹಾಡು, ಶನಿವಾರದ ಹಾಡು, ಮಂಗಳ ಗೌರೀ ಹಾಡು ಶ್ರೀಕೃಷ್ಣದಾನವ್ರತ, ಚೇಳಿನ ಹಾಡು ಇತ್ಯಾದಿ ರಚಿಸಿದ್ದಾರೆ.

ಲಕ್ಷ್ಮೀದೇವಮ್ಮನವರು ಬೆಳೆದದ್ದು ಅಪ್ಪಟ ಕನ್ನಡ ಮಾತನಾಡುವ ಮನೆಯಲ್ಲಿ, ಸೇರಿದ್ದು ಬಳ್ಳಾರಿಯಲ್ಲಿ, ಬಳ್ಳಾರಿ ದೇಸಿಯಮಾತು ಕನ್ನಡವಾದರೂ, ಅಂದಿನ ಲಿಪಿ ತೆಲುಗು ಆಗಿತ್ತು. ಹಾಗಾಗಿ ಅವ್ವನವರ ರಚನೆಗಳಲ್ಲಿ ಕನ್ನಡದ ಶಬ್ದಗಳು, ತೆಲುಗು ಶಬ್ದಗಳೊಡನೆ ಬೆರೆತಿರುವುದು, ತೆಲುಗು ಶಬ್ದಗಳು ಕನ್ನಡ ಶಬ್ದಗಳೊಡನೆ ಬೆರೆತು ಬಳ್ಳಾರಿ ಕನ್ನಡದ ಗಡಸುತನ ಹೊಂದಿವೆ. ಅವ್ವನವರ ಭಾಷೆ ಅತ್ಯಂತ ಹೃದಯಂಗಮವಾಗಿದ್ದು, ಎಂತಹ ಮನಸ್ಸಿನಲ್ಲೂ ಸಾತ್ವಿಕಶಕ್ತಿಯನ್ನು ಪ್ರೇರೇಪಿಸುವ ಶಕ್ತಿಯಿದೆ.

ಲಕ್ಷ್ಮೀದೇವಮ್ಮನವರಿಗೆ ಹರಪನಹಳ್ಳಿ ಭೀಮವ್ವನವರ ಹಾಡುಗಳು ತುಂಬಾ ಪ್ರಭಾವವನ್ನು ಉಂಟು ಮಾಡಿವೆ. ಅದು ಎಷ್ಟೆಂದರೆ ಇವರ ಹಾಡುಗಳ ವಸ್ತು ವಿಷಯ ಭೀಮವ್ವನವರ ಹಾಡುಗಳಿಂದ ಗ್ರಹಿಸಲ್ಪಟ್ಟಂತವೆ ಆಗಿವೆ. ಈ ಹಾಡುಗಳಲ್ಲಿನ ವಿಷಯ ಒಂದೇ ಆದರೂ ನಿರೂಪಣೆ ಹಾಗೂ ಶೈಲಿಗಳಲ್ಲಿ ಭಿನ್ನತೆಯನ್ನು ತಿಳಿಯಬಹುದು.

ಉದಾಹರಣೆಗೆ ದ್ರೌಪದಿ ವಸ್ತ್ರಾಪಹರಣದಲ್ಲಿ ಭೀಮನ ಕೋಪ

"ಯಾಕೆ ಸಂತಾಪ ಪಡುವೆ ಸಖೀ, ನೀನ್ಯಾಕೆ ಸಂತಾಪ ಪಡುವೆ
ಯಾಕೆ ಸಂತಾಪ ಬಿಡು | ಕಾಕು ಮನುಜನ
ನೂಕಿ ಯಮನ ಪುರಕ್ಹಾಕುವೆ ಈ ಖಳನ"[೩೦]

ಉದಾಹರಣೆಗೆ ಸಾಂಗತ್ಯ(ಶ್ರೀಕೃಷ್ಣ ಬಾಲಲೀಲೆ)

''ಅಂಬೆಗಾಲಿಕ್ಕುತ| ಅಂಗಳದೊಳಾಡುತ
ಚಂದ್ರನ್ನ ನೋಡಿ ನಲಿಯುತ
ನಲಿಯುತ್ತಲಾ ಗೋಪ ಮಂಗಳ ಮುಖವು ತೋರುತ್ತಾ
ಮಣ್ಣು ಮೆಲ್ಲುವರೇನೋ| ಸಣ್ಣ ಕೃಷ್ಣನಾದೆ ನೀನು|
ಚಿನ್ನನೆ ಬಾಯಿ ತೆಗೆಯೆಂದಲ್ಲಿ''[೨೧]

ಹೀಗೆ ಸರಳ ಭಾಷೆಯಲ್ಲಿ ರಚನೆ ಮಾಡಿರುವುದು, ಸರಾಗವಾಗಿ ಓದಿಸಿಕೊಳ್ಳುತ್ತದೆ. ನೇರ ನಿರೂಪಣೆಯಿಂದ ಕಥೆಯನ್ನು ಸುಲಭವಾಗಿ ಗ್ರಹಿಸಬಹುದಾಗಿದೆ. ಅವ್ವನವರು ಹಾಡಿದ ಹಾಡುಗಳನ್ನು ಲಿಪಿಯಲ್ಲಿ ಬರೆದಿಡಲಿಲ್ಲ. ಹಾಗಾಗಿ ಅವರಿವರಲ್ಲಿ ಉಳಿದುಕೊಂಡಿದ್ದ ಹಾಡುಗಳನ್ನು ಪಾವಂಜೆ ಗುರುರಾಯರು, ರಾವ್‌ಜೀ ಶ್ರೀನಿವಾಸರು ಪ್ರಕಟಿಸಿದ್ದಾರೆ. ಹೆಚ್ಚಿನವು ಮೌಖಿಕವಾಗೇ ಉಳಿದಿವೆ.

**ಅಂಬಾಬಾಯಿಯವರು(೧೯೦೨-೧೯೬೪)**

ಹರಿದಾಸ ಮಹಿಳೆಯರಲ್ಲಿ ಪ್ರಮುಖಳಾದ ಅಂಬಾಬಾಯಿ ಈಕೆ, ಗೋಪಾಲದಾಸ, ಜಗನ್ನಾಥದಾಸ, ಮೋಹನದಾಸ, ಪಂಗನಾಮದ ತಿಮ್ಮಣ್ಣನವರ ಸಮಕಾಲೀನಳು. ಹೀಗೆ ಸಾಲು ಸಾಲು ಹರಿದಾಸರ ಶಿಷ್ಯ ಸಮೂಹ ದಾಸ ಕೂಟದ ಚಟುವಟಿಕೆಗಳು ೧೯ ಮತ್ತು ೨೦ನೇ ಶತಮಾನದಲ್ಲಿ ಮೈಸೂರಿನ ಪ್ರಾಂತ್ಯದಲ್ಲಿ ನೆಲೆಗೊಂಡವು. ಜಯೇಶ ವಿಠಲರು, ಗುರುರಾಮ ವಿಠಲರು, ಮುದ್ದು ಮೋಹನದಾಸರು, ತಂದೆ ಮುದ್ದು ಮೋಹನದಾಸರು ಹೀಗೆ ಎಲ್ಲರನ್ನೂ ಸೇರಿಸಿಕೊಂಡು ದಾಸಕೂಟವು ವಿಶಾಲವಾಗಿ ಹರಡಲಾರಂಭಿಸಿತು.

ಅಂಬಾಬಾಯಿಯವರು ಮೂಲತಃ ಚಿತ್ರದುರ್ಗದಲ್ಲಿ ಜನಿಸಿದವರು. ಇವರ ತಂದೆ ಭೀಮ ಸೇನರಾಯರು, ತಾಯಿ ಭಾರತೀದೇವಿ(ವೆಂಕಮ್ಮ) ಅಂಬಾಬಾಯಿಯವರು ತಂದೆಯ ಮನೆಯಲ್ಲಿ ಹೆಚ್ಚು ಕಲಿಯಲಾಗದಿದ್ದರೂ, ಪ್ರಾಥಮಿಕ ಹಂತದ ಮೂರು, ನಾಲ್ಕು ತರಗತಿಯನ್ನು ಕಲಿತಿದ್ದರು. ಅಂದು ಹೆಣ್ಣುಮಕ್ಕಳಿಗೆ ಶಿಕ್ಷಣ ವ್ಯವಸ್ಥೆಯಲ್ಲಿ ಯಾವ ರೀತಿಯ ಬೆಂಬಲವಿರದೆ, ತಂದೆಯವರ ಸಹಕಾರದಿಂದ ಅಂಬಾಬಾಯಿಯವರಿಗೆ ಪ್ರಾಥಮಿಕ ಶಿಕ್ಷಣ ದೊರೆಯುವಂತಾಯಿತು.

ಇದರಿಂದ ಆಕೆಯೇ ಹೇಳಿಕೊಂಡಂತೆ ತನ್ನ 'ಅನಂತರ ಪದ್ಮನಾಭಕಥಾಸಾರ' ಎಂಬ ಹಾಡಿನಲ್ಲಿ "ಧರೆಯೊಳಗೆ ಪುಟ್ಟಿ ಮೂವ್ವತ್ತಾರು ಸಂವತ್ಸರವು ಸರಿದೀದಿ ಬಹುಧಾನ್ಯಕೆ"[೨೨] ಎಂದು ಬರೆಯುತ್ತಾ, ತಾವು ಬರೆದ ಈ ಕಥಾನಕ ೩೬ ವರ್ಷಗಳ ನೆನಪಿಗಾಗಿ ೩೬ ಪದ್ಯಗಳಿವು ಎಂದಿದ್ದಾರೆ.

ಅಂಬಾಬಾಯಿಯವರು ಅಂದಿನ ಸಾಮಾಜಿಕ ರೀತಿಗಳಿಗನುಸಾರವಾಗಿ ಆಕೆಗೆ ೧೧ನೇ ವರ್ಷದಲ್ಲಿ ಗೋಪಾಲಪುರದ ಹನುಮಂತಾಚಾರ್ಯ ಎಂಬ ಬಾಲಕನೊಂದಿಗೆ ವಿವಾಹ ಮಾಡಿದರು. ಆದರೆ ದುರ್ವಿಧಿಯಾಗಿ ಕಾಡಿದ ಪ್ಲೇಗ್ ಮಾರಿ ಅಂಬಾಬಾಯಿಯ ಗಂಡನನ್ನು ಹಾಗೂ ತಂದೆಯನ್ನು ಒಂದೇ

ಸಾರಿ ಕಸಿದುಕೊಂಡಾಗ ಆಕೆಗೆ ಯಾರು ಇಲ್ಲದ ಅನಾಥ ಸ್ಥಿತಿ ಬಂದೊದಗಿತು. ಒಂದೆಡೆ ಬಾಲವೈಧವ್ಯ ಮತ್ತೊಂದೆಡೆ ತಂದೆಯ ಮರಣ ಆ ಚಿಕ್ಕ ಬಾಲಕಿಗೆ ಬದುಕಿನಲ್ಲಿ ಕಷ್ಟಗಳ ಸರಮಾಲೆಯನ್ನೆ ಹೆಣೆದಿತ್ತು.

ಅಂಬಾಬಾಯಿಯವರು ಅತ್ಯಂತ ಪುಟ್ಟ ವಯಸ್ಸಿನ ಮಡಿ ಹೆಂಗಸಾಗಿ ತಮ್ಮ ಹಾಗೂ ತಂಗಿಯರ ಕುಟುಂಬಗಳಲ್ಲಿ ಬದುಕನ್ನು ಸವೆಸಲಾರಂಭಿಸಿದರು. ಇಲ್ಲಿ ನಾವು ಮುಖ್ಯವಾಗಿ ಆಕೆಯ ಕೌಟುಂಬಿಕ ಹಿನ್ನೆಲೆಯು ಅತ್ಯಂತ ಕಟ್ಟುನಿಟ್ಟಾದ ಸಂಪ್ರದಾಯಸ್ಥ ಮನೆಯಾಗಿತ್ತೇ ಹೊರತು, ಆಕೆಯಲ್ಲಿ ಭಕ್ತಿ ಮೂಡಿಸುವ ಪರಿಸರವಿರಲಿಲ್ಲ.

ಅಂಬಾಬಾಯಿಯವರನ್ನು ಗಂಡನ ಮನೆಯವರು ವಿಧವೆಯಾದ ಕಾರಣಕ್ಕೆ ಆ ಮನೆಯಿಂದ ದೂರವಿಟ್ಟರೂ ಆಕೆಗೆ ಅಲ್ಲಿ ಯಾವ ವಿಧವಾದ ಆಶ್ರಯ, ಆಸರೆಗಳು ಸಿಗದೆ ಅನಿವಾರ್ಯವಾಗಿ ತೌರಿನತ್ತ ಬಂದರೆ, ಅಲ್ಲಿ ತಮ್ಮನ ತುಂಬು ಸಂಸಾರದಲ್ಲಿ ತಾವೂ ಒಬ್ಬರಾಗಿ ಜೀವಿಸಲಾರಂಭಿಸಿದರು. ಮನೆಗೆಲಸಗಳಲ್ಲಿ ಪೂಜೆ, ವ್ರತ, ಉಪವಾಸಗಳು, ಪಾರಾಯಣೆ ಮುಂತಾದವುಗಳನ್ನು ರೂಢಿಸಿಕೊಂಡು ತಮ್ಮ ದೈನಂದಿನ ಬದುಕಿನಲ್ಲಿ ಎದುರಾಗುವ ಕಷ್ಟಗಳನ್ನು ಮರೆಯುವ ಪ್ರಯತ್ನ ಮಾಡಿದರು. ಈ ರೀತಿಯ ಬದುಕಿನಿಂದ ಹರಿನಾಮ ಸ್ಮರಣೆ, ಗುರುಗಳ ಮಾರ್ಗದರ್ಶನವು ಆಕೆಗೆ ಆತ್ಮವಿಶ್ವಾಸ ಮೂಡಿಸಿತೆಂದು ಹೇಳಬಹುದು.

**ಉಗಾಭೋಗ**

''ಹ್ಯಾಗೆ ದರುಶನ ಪಾಲಿಸುವ ವಿಠ್ಠಲನೆ
ಹ್ಯಾಗೆನ್ನ ಪೊರೆವೆ ವಿಠ್ಠಲನೆ ||ಪ||
ನಾಗಶಯನನೆ ನಿನ್ನ ನೋಡಬೇಕೆಂದು ಮನ
ಈಗ ತವಕಿಸುತಿಹುದು ಹ್ಯಾಗೆ ಮಾಡಲಿ ವಿಠಲ
ಅರಿಯದಾ ದೇಶದಲಿ ಅಲ್ಪರಿದು ಅನ್ಯರಿಗೆ ಬರಿದಾಯ್ತು ಬಯಕೆ ವಿಠ್ಠಲನೆ
ಅರಿಯೆ ಮುಂದೊಂದು ಪರಿ ಹರಿಯೆ ನೀನಲ್ಲದಲೆ ಪೊರೆಯುವರನ ಕಾಣೆ ವಿಠ್ಠಲನೆ
.............
............
ತಂದೆ ತಾಯಿಯು ನೀನೆ ಬಂಧು ಬಳಗವು ನೀನೆ
ಇಂದಿರೇಶನೆ ಕಾಯೊ ಸತತ ವಿಠ್ಠಲನೇ
ಹಿಂದಿನವರನು ಪೊರೆದ ಕೀರ್ತಿ ಉಳಿಯಲು ಈಗ
ಕುಂದನೆಣಿಸದೇ ಕಾಯಬೇಕೊ ವಿಠ್ಠಲನೇ
ಕರುಣಿ ಎನ್ನಯ್ಯ ಕಂಗೆಡಿಸದಲೆ ಕಾಪಾಡೊ
ಚರಣವೇ ಗತಿ ಎಂದು ಬಂದೆ ವಿಠ್ಠನೆ

ಗುರು ಅಂತರ್ಯಾಮಿ ಎನ್ನಭಿಮಾನ ನಿನ್ನದೈಯ್ಯ
ಸಿರಿಯರಸ ಗೋಪಾಲಕೃಷ್ಣ ವಿಠ್ಠಲನೆ"[೩೩]

ಎಂದು ಈ ರೀತಿಯಾಗಿ ಅಂಬಾಬಾಯಿಯವರು ತಮ್ಮ ಕೌಟುಂಬಿಕ ಬಂಧನಗಳಿಂದ ವಿಮುಕ್ತಿಗೊಂಡು ಅಂಕಿತ ಪಡೆದು ಸದಾ ಸಂಚರಿಸುತ್ತಾ ತೀರ್ಥಕ್ಷೇತ್ರಗಳ ದರ್ಶಿಸುತ್ತಾ, ಹರಿನಾಮ ಪದ ಹಾಡುತ್ತಾ, ಸಾರುತ್ತ, ಸಾರುವುದೇ ಪವಿತ್ರವೆಂದೆಣಿಸಿ ಕಾರ್ಯ ಪ್ರವೃತ್ತರಾದರು ಅಂಬಾಬಾಯಿಯವರ ಕುಟುಂಬದ ವರೆಲ್ಲರೂ ಹರಿದಾಸರೇ ಆಗಿದ್ದು, ಒಬ್ಬೊಬ್ಬರೂ ಅಂಕಿತ ಪಡೆದು ಹರಿಸೇವೆಗೆ ಬದ್ಧರಾಗಿದ್ದರು. ಅವರಲ್ಲಿ, ಅಜ್ಜಿ-ಸೀತಾಪತಿ ವಿಠ್ಠಲ, ತಾಯಿ-ಯಾದವೇಂದ್ರ ವಿಠ್ಠಲ ತಮ್ಮ-ರಮಾಕಾಂತ ವಿಠಲ, ತಮ್ಮನ ಪತ್ನಿ-ಸುರೇಶ ವಿಠಲ, ತಂಗಿ-ಪರಮಾನಂದ ವಿಠಲ, ತಂಗಿಯ ಗಂಡ-ನಿತ್ಯಾನಂದ ವಿಠಲ, ಹೀಗೆ ಎಲ್ಲರೂ ಒಂದು ರೀತಿಯಾದ ಹರಿಸೇವೆಗೆ ಮುಕ್ತ ಮನಸ್ಸಿನವರಾಗಿ ತೊಡಗಿದ್ದರು.

ಇಂತಹ ಸಂದರ್ಭದಲ್ಲಿಯೇ ಅಂಬಾಬಾಯಿಯವರಿಗೂ ತಂದೆ ಮುದ್ದು ಮೋಹನದಾಸರಿಂದ ಅಂಕಿತ ದೊರೆತ ಮೇಲೆ ಆಕೆಯೇ ಹೇಳಿಕೊಂಡಂತೆ, ಅಂಬಾಬಾಯಿಯವರ ಬದುಕಿನ ರೀತಿ ನೀತಿಗಳು ಬದಲಾದವು.

"ಗುರುಗಳ ಜ್ಞಾನ ಬೋಧೆಯನ್ನು ನಿರಂತರವಾಗಿ ಕೇಳುತ್ತಾ "ಮನದ ಶೋಕಾಗ್ನಿ ಶಾಂತವಾಯಿತು", "ಕನಸಿನ ಮನಸಿನ ಕಳವಳ ದೂರಾಯಿತು" ಸಕಲ ಶಾಸ್ತ್ರಗಳನ್ನು ಶೋಧಿಸಿ ಅಕಂಳಕ ತತ್ವವ ಸಾಧಿಸಿ ಮುಕುತಿ ಯೋಗ್ಯರಿಗೆಲ್ಲ ಅಂಕಿತಗಳನ್ನು, ನೀಡಿ ಮಲಿನ ಮನವನ್ನು ತಿದ್ದುವ ಸುಜ್ಞಾನಿಗಳಾದವು."[೩೪]

ಅಂಬಾಬಾಯಿಯವರು ಅಂಕಿತ ಪಡೆದ ಮೇಲೆ ಚಿಕ್ಕವಯಸ್ಸಿನಲ್ಲೇ ವೈಧವ್ಯ ತಾಪದಿಂದ, ಬದುಕಿನ ಬಗೆಗಿನ ಚಿಂತೆಗಳೆಲ್ಲ ದೂರಾಗಿ ದೇಹ-ಮೋಹವೇ ದೂರಾಗಿ, ಭೋಗದಲ್ಲಿ ವೈರಗ್ಯ ಮೂಡಿತು. ನಿರಂತರವಾದ ಸಂಚಾರ, ಧರ್ಮಕರ್ಮಗಳ ಆಚರಣೆ, ಕೃತಿ ರಚನೆ, ಭಜನೆ ಮುಂತಾದವು ಅಂಬಾಬಾಯಿಯವರ ಜೀವನದ ಮುಖ್ಯ ಸಂಗತಿಗಳಾದವು. ತಮ್ಮ ವೈಯಕ್ತಿಕ ಜೀವನದಲ್ಲಿ ನೆಮ್ಮದಿಯನ್ನು ತಾವು ಪಡೆದ ಆಧ್ಯಾತ್ಮಿಕ ತಿಳಿವಿನಿಂದಲೂ, ಪಾರಮಾರ್ಥಿಕ ಸಾಧನೆಯಿಂದಲೂ ಸರಿದೂಗಿಸಲು ಪ್ರಯತ್ನಿಸಿದರು.

ಅಂಬಾಬಾಯಿಯವರು ಧಾರ್ಮಿಕವಾಗಿ

"ಅರಿಯೇನೋ ಅನ್ಯರ ಹರಿ ಸರ್ವೇಶ| ಹೃತ್ಕಮಲದಿ ವಾಸ
ಪರಿಹಾರಗೈಸೊ ಈ ಭವಕ್ಲೇಶ| ನಂಬಿದ ಸರ್ವೇಶ
ಅರಘಳಿಗೆ ನಿನ್ನನಗಲಿರಲಾರೆನೊ
ಸಿರಿಸಹಿತದಿ ನಿನ್ನರಮನೆಯಿಂದಲಿ
ಅರುಹಿದರೆನಗೆ ಶ್ರೀ ಗುರುಗಳು ಇಂದು| ನೀ ರಕ್ಷಕನೆಂದು

ಕರಕರೆಗೊಳಿಪುದು ಧರ್ಮವೆ ನಿಂದು| ನೀ ಕಾಯಲೇಬೇಕೆಂದು
ಸರಿಯಲ್ಲವು ಈ ತೆರದಲಿ ತೊರೆವುದು
ಶರಣ ರಕ್ಷಕನೆಂಬೊ ಬಿರುದು ಪೊತ್ತಿಲ್ಲವೆ.
ಎಂತೆಂತು ಸಹಿಸಲಿ ಈ ಭವಕ್ಲೇಶ | ಜೀವಾಂತರವಾಸ
ಕಂತುಪಿತ ಎಣಿಸದೆ ಎನ್ನಯ ದೋಷ | ಸರಿಯಲ್ಲ ಸುದೇಶ
ಇಂತು ನಿನಗೆ ಒಪ್ಪಿಸಿದರೂ ಗುರುಗಳು
ಚಿಂತಿತಾರ್ಥ ನಿನಗೆನ್ನ ತರ ತಿಳಿಯದೆ
ಬೆಟ್ಟದ ಒಡೆಯ ಬೇಗನೆ ಬಾರೊ| ಹೃತ್ಕಮಲವ ತೋರೊ
ಶ್ರೇಷ್ಠ ಶ್ರೀ ಗುರುಗಳ ಕರುಣವ ಬೀರೋ ಸಲಹುವರಿನ್ಯಾರೊ
ಮುಟ್ಟಿ ಭಜಿಪನೆ ನಿನ್ನ ಶ್ರೇಷ್ಠ ಪದಂಗಳ
ಸೃಷ್ಟೀಶ ಗೋಪಾಲಕೃಷ್ಣ ವಿಠಲನೆ"[೨೨]

ಎಂದು ನಂಬಿ ನಡೆಯುತ್ತಾ, ಮಾನಸಿಕವಾಗಿ ಕುಸಿಯುವ ಪರಿಸ್ಥಿತಿಯಿದ್ದಾಗ, ಕುಸಿಯದಂತಹ ಮನೋಶಕ್ತಿಯನ್ನು ಈ ಧಾರ್ಮಿಕ ಪ್ರವೃತ್ತಿ ತಂದುಕೊಟ್ಟಿತು. ಹೀಗೆ ತಂದೆ ಮುದ್ದು ಮೋಹನದಾಸರಿಂದ ಅಂಬಾಬಾಯಿವರ ಅಂಕಿತ "ಗೋಪಾಲಕೃಷ್ಣ ವಿಠ್ಠಲ" ಪಡೆದ ದಿನ ಪ್ರಜೋತ್ಪತ್ತಿ ಸಂವತ್ಸರದ ಚೈತ್ರ ಶುದ್ಧ ಶ್ರೀರಾಮನವಮಿ ಅಂಬಾಬಾಯಿಯವರು ತಮ್ಮ ಕೀರ್ತನೆಗಳಲ್ಲಿ ಹನುಮ, ಭೀಮ, ಮಧ್ವ ಮೂರು ಅವತಾರತ್ರಯರನ್ನು ಹೀಗೆ ಹಾಡಿ ಹೊಗಳಿದ್ದಾರೆ.

(೧೧೮)
"ಬಾರೊ ಹನುಮ ಬಾರೊ ಭೀಮ ಬಾರೊ ಮಧ್ವಮುನಿಪ
ಬಾರೊ ರಾಮಕೃಷ್ಣ ವೇದವ್ಯಾಸರ ಪ್ರಿಯಭಕ್ತ.
ಅಂಜನೇಯಸುತನು ಆಗಿ
ಸಂಜೀವನಗಿರಿಯ ತಂದೆ
ಕಂಜಲೋಚನೆಯ ವಾರ್ತೆ
ಮಂಜುಭಾಷಣ ರಾಮನಿಗರುಹಿದೆ
ಪಾಪಿಕೌರವ ಕುಲವ ಕೊಂದು
ದ್ರೌಪದಿಯ ಕಾಯ್ದು ಮಹಿಮ
ಶ್ರೀಪತಿ ಶ್ರೀಕೃಷ್ಣ ಭಜಿಸಿದ
ಭೂಪ ಭೀಮನೇ ಬೇಗ
ಭೂಸುರ ಜನ್ಮದಲಿ ಬಂದು

ಆಸೆಯಿಂದ ಆಶ್ರಮ ಕೊಂಡು
ದೋಷಿ ಅನ್ಯಮತವ ಮುರಿದು
ಭೂಸುರರ ಕಾಯ್ದು ಮಧ್ವ
.........
.........
..........
ಗೋಪಾಲಕೃಷ್ಣ ವಿಠ್ಠಲನ
ರೂಪ ನೋಡುವ ಕೃಪೆಯ ಮಾಡೊ
ಶ್ರೀಪತಿ ಶ್ರೀ ಶ್ರೀನಿವಾಸಗೆ
ನೀ ಪ್ರೀತಿ ಕರನೆಂದೆ ನಮಿಪೆ"[೬೬]

ಅಂಬಾಬಾಯಿಯವರು ಸಾಮಾಜಿಕವಾಗಿಯೂ ತಮ್ಮ ರಚನೆಗಳಲ್ಲಿ

ಈಗಲೂ ನೀ ಕಾಯ ಬೇಕೋ ಇಂದಿರೆ ರಮಣ
ಆಗಲೂ ನೀ ಕಾಯಬೇಕೋ ಅರವಿಂದನಯನ.
ಈಗ ಈ ಜನ್ಮದಲ್ಲಿ
ಆಗ ಭವ ದಾಟುವಲ್ಲಿ
ನಾನಾ ಜನ್ಮದಲಿ ತಿರುಗಿ ಮಾನವ ನಾನಾಗಿ ಪುಟ್ಟಿ
ಶ್ವಾನ ಸೂಕರನಂತೆ ಕಾಲ ಕಳೆದು
ದೀನನಾಗೀಗ ಇನ್ನು ನೀನೆ ಗತಿಯೇ ಎನಲು
ಶ್ರೀನಾಥ ನಿನ್ನ ನಾಮ ಎನ್ನ ನಾಗಲಗೆಯಲಿ ನುಡಿಸಿ
...........
...........
...........
ತ್ರಿಗುಣದಿಂದ ಬದ್ಧವಾದ ವಿಗಡದೇಹ ತೊಲಗುವಂತೆ
ಬಗೆಬಗೆಯ ನಿನ್ನ ಲೀಲೆ ಅಂತರದಿ ತಿಳಿಸಿ
ಜಗದಾವರಣ ತೊಲಗುವಾಗ ಬಗೆಬಗೆಯ ಲಯದ ಚಿಂತೆ
ತಗಲಿ ಮನಕೆ ನಿನ್ನ ಮಹಿಮೆ ಆನಂದವಾಗುವಂತೆ

ಬದುಕಿನ ಜಂಜಾಟದಿಂದ ಮುಕ್ತರಾಗಿ ಕಳೆಯುವ ಜೀವನವನ್ನು, ಪರಮಾತ್ಮನ ಲೀಲೆಯ ಪೊಗಳಿ, ಬಂದ ಬವಣೆಗಳ ನಿವಾರಿಸಿಕೊಳ್ಳಲು ತಮ್ಮ ಅನುಭವದ ವಿಸ್ತಾರದಲ್ಲಿ ಸಾಮಾಜಿಕವಾಗಿಯೂ ಅಂಬಾಬಾಯಿ ತಮ್ಮ ರಚನೆಯಲ್ಲಿ ಸ್ಪಂದಿಸಿರುವುದನ್ನು ತಿಳಿಯಬಹುದು.

ಹಾಗೆಯೇ, ಅಂಬಾಬಾಯಿಯವರು ತಮ್ಮ ಸೌಭಾಗ್ಯವೆಲ್ಲವನ್ನೂ ಈ ದಾಸ ತತ್ವದಲ್ಲಿ ಕಂಡು ಹೀಗೆಂದಿದ್ದಾರೆ.

''ಮುತ್ತೈದೆಯಾದೆ ನಾ ಮುರವೈರಿ ದಯದಿ

ನಿತ್ಯತೃಪ್ತನು ಎನ್ನ ನಿಜಕರವ ಪಿಡಿಯೆ''

ಎಂದು ಘೋಷಿಸಿ ತನ್ನಲ್ಲಿ ಸೌಮಂಗಲ್ಯದ ಎಲ್ಲ ಸಂಕೇತಗಳು ಗುರುಕರುಣೆಯಿಂದ ಮತ್ತೆ ಪ್ರಾಪ್ತವಾದವೆಂದು ಭಾವಿಸಿದರು. ಅದರಂತೆ, ಅಂಕಿತವೇ ಮಾಂಗಲ್ಯ, ನಾಮವೇ ತಿಲಕ, ಗುರುಕರುಣವೇ ಕವಚ, ಗುರುಪ್ರೀತಿಯೆ ವಸನ, ಭಕ್ತಿ, ಜ್ಞಾನ, ವೈರಾಗ್ಯಗಳೇ ಮೂರು ಕಾಲಿನ ಜಡೆ, ತತ್ವಗಳೇ ಚೌಲಿ, ರಾಗುಟೆ, ಗೊಂಡ್ಯಗಳು, ಶ್ರವಣವೇ ಕರ್ಣಕುಂಡಲ, ನಿರ್ಮಾಲ್ಯವೇ ನಾಸಿಕಾಭರಣ, ಭಕ್ತಿಯೇ ನಡುವಿನೊಡ್ಯಾಣ, ಸದ್ಗುಣವೇ ಪಾದಾಭರಣ, ಗುರುವಿನ ಅನುಗ್ರಹವೇ ಮಂಗಳ ದ್ರವ್ಯಗಳು ಹೀಗೆ ಸಾಲಂಕೃತಳಾದ ತನ್ನನ್ನು ಹರಿಗೆ ಧಾರೆಎರೆದು ಕೊಡಲಾಯಿತು''[೨೭] ಎಂದು ಭಾವುಕತೆಯಿಂದ ನುಡಿದಿದ್ದಾರೆ.

''ಗುರುಕೊಟ್ಟ ಅಂಕಿತವೆ ಮಾಂಗಲ್ಯವಾಯ್ತೆನಗೆ
ಗುರುವಿಟ್ಟ ನಾಮವೆ ತಿಲಕವಾಯ್ತು
ಗುರುಕರುಣವೆಂಬ ಕವಚವ ತೊಟ್ಟೆ ಹರುಷದಲಿ
ಗುರುಪ್ರೀತಿ ಎಂಬ ವಸನನುಟ್ಟು ಮುದದಿ
ಗುರುವು ಭೋದಿಸಿದ ಭಕ್ತಿ ಜ್ಞಾನ ವೈರಾಗ್ಯ
ಸರಿ ಮಾಡಿ ಮೂರು ಕಾಲೀನ ಜಡೆಯನು
ಪರಿಪರಿಯ ತತ್ವಗಳ ಚೌರಿ ರಾಗುಟಿ ಗೊಂಡ್ಯ
ಗುರುವಾಜ್ಞೆ ಎಂಬ ಪುಷ್ಪವ ಧರಿಸಿ ಗಿರದಿ
--------------
-------------
-------------
ಮುಕ್ತಿ ಸುಖವೆಂಬ ಮಂಗಳಸೂತ್ರ ಬಂಧಿಸಲು
ಮುಕ್ತರಾರಾಧ್ಯ ಲಕ್ಷ್ಮೀಕಾಂತನು
ಮುಕ್ತರಾರಾಧ್ಯ ಜಗದ್ಭರ್ತೃ ಮುನಿಜನವಂದ್ಯ
ವ್ಯಕ್ತನಾಗಲು ಮನದಿ ಗುರುಕಟಾಕ್ಷದಲಿ''

ಎಂದು ಅತ್ಯಂತ ಸಮಾರ್ಪಣಾ ಭಾವದಲ್ಲಿ ಸ್ಮರಿಸಿದ್ದಾರೆ.

ಇಂಥ ದೃಢನಿರ್ಧಾರ ಮತ್ತು ಸಮರ್ಪಣಾಭಾವದಿಂದ ಅಂಬಾಬಾಯಿಯವರು ಹರಿದಾಸರಂತೆಯೇ ಕಾಲಿಗೆ ಗೆಜ್ಜೆ ಕಟ್ಟಿ, ತಾಳ, ತಂಬೂರಿ ಹಿಡಿದು, ಕಾವಿಯ ವಸ್ತ್ರ ಧರಿಸಿ, ಕೊರಳಿಗೆ ತುಲಸೀ ಮಾಲೆ

ಧರಿಸಿ ಬಗಲಿಗೆ ತಂಬೂರಿ, ಜೋಳಿಗೆ ಹಾಕಿಕೊಂಡು, ದೇಹಕ್ಕೆ ಸಂಬಂಧಿಸಿದ ಮೋಹಾಭಿಮಾನಗಳನ್ನು ದೂರ ಮಾಡಿ, ಏಕಾಂತ ಸುಖವನ್ನು ನೀಡುವ ತಂಬೂರಿಯೇ ಶ್ರೀಹರಿಯನ್ನು ಒಲಿಸಿಕೊಳ್ಳುವ ಸಾಧನ ಎಂದು ತಿಳಿದಿದ್ದಾರೆ.''[೩೮]

ಅಂಬಾಬಾಯಿಯರು ಒಂದು ರೀತಿಯ ಆಶುಕವಯಿತ್ರಿ ಎಂದ್ಹೇಳಬಹುದು. ಏಕೆಂದರೆ, ಸದಾ ಸಂಚಾರದಲ್ಲಿರುವ ಅಂಬಾಬಾಯಿ ಪ್ರತಿನಿತ್ಯ ಹಾಡುಗಳನ್ನು ಬರೆಯುವ, ಹಾಡುವ, ಅದನ್ನು ಮಹಿಳೆಯರಿಗೆ ಹೇಳಿಕೊಡುವ ಪ್ರವೃತ್ತಿಯಿತ್ತು. ಹಾಗಾಗಿ ಅವರಲ್ಲಿ ಅಪಾರವಾದ ಸೃಜನಶಕ್ತಿಯಿತ್ತು ಎಂಬುದಕ್ಕೆ ಅಂಬಾಬಾಯಿಯವರು ತಂಗಿಯ ಮನೆಯಲ್ಲಿದ್ದಾಗಿನ ಒಂದು ಘಟನೆಯನ್ನು ಇಲ್ಲಿ ಉಲ್ಲೇಖಿಸಬಹುದು.

ಅಂಬಾಬಾಯಿ ತಂಗಿಯ ಮನೆಯಲ್ಲಿದ್ದಾಗ ನಡೆದ ಘಟನೆ, ಪಕ್ಕದ ಮನೆಯ ಗೃಹಣಿಯೋರ್ವಳು ತನ್ನ ಕಂದನ ಮಲಗಿಸಲು ಲಾಲಿ ಹಾಡೊಂದನ್ನು ಹೇಳುತ್ತಿದ್ದಳು. ಆ ಚಂದವಾದ ಹಾಡನ್ನು ಬರೆದುಕೊಡುವಂತೆ ತಂಗಿ ಆಕೆಯನ್ನು ಕೇಳಿದಳು. ಆದರೆ ಪಕ್ಕದ ಮನೆಯಾಕೆಯು ಇಂದು, ನಾಳೆ ಎಂದು ಎರಡು ಮೂರು ದಿನಗಳು ಕಾಡಿಸಿ ಕೊನೆಗೆ ನಯವಾಗಿ ತಿರಸ್ಕರಿಸಿದಳು. ತಂಗಿ ತನ್ನ ಬೇಸರವನ್ನು ಅಂಬಾಬಾಯಿಯವರ ಬಳಿ ಹೇಳಿಕೊಂಡಳು. ಅಂದು ಮಧ್ಯ ರಾತ್ರಿ ಅಂಬಾಬಾಯಿಗೆ ಇದ್ದಕ್ಕಿದ್ದಂತೆಯೇ ಎಚ್ಚರವಾಗಿ, ಆ ಹೊತ್ತಿನಲ್ಲೇ ಮಿಂದು ಮಡಿಯುಟ್ಟು ದೇವರ ಮುಂದೆ ಕುಳಿತು ಸೊಗಸಾದ ಲಾಲೀ ಹಾಡೊಂದನ್ನು ಬರೆಯಲು ಆರಂಭಿಸಿದರು.

''ನಾರಿಯರು ಮನ ಬಂದ ತೆರದಲಿ
ಜಾರ ಚೋರ ಚೋರನೆನುತ್ತಾ ಬೈಯ್ಯಲು
ಧೀರಯತಿಗಳೂ ಸೇರಿ ಪರಬೊಮ್ಮ
ಶ್ರೀರಮಣನೆನ್ನುತ ಸ್ತುತಿಸುವೋ
ವಾರುತಿಗೆ ಮೈದೋರಿ ಭಕುತರ
ಪಾರುಗಾಣಿಪೆನೆಂಬ ನೆವದಲಿ
---------
---------
----------
ಬಾಲಕಂದಗೆ ತೊಡಿಗೆ ತೊಡಿಸಲು
ಲೀಲೆಯಿಂದಲಿ ಗೋಪಿದೇವಿಯು
ಕಾಳಮಡುವಿಲಿ ಧುಮಕಿ ಎಲ್ಲವ
ಕಳೆದು ಬರೆ ಆಟಗಳ ಪರೆವೆಲಿ
ಶೀಲ ಯತಿಗಳು ವಾರವಾರಕೆ

ಬಾಲ ತೊಡಿಗೆ ಶೃಂಗಾರಗೈಯಲು
ಆಲಯವ ಬಿಟ್ಟೆಲ್ಲಿ ಪೋಗದ
ಓಲಗವ ಕೈಕೊಳ್ಳೆನ್ನುತ"[೬]

ಹೀಗೆ ಅಂಬಾಬಾಯಿಯವರ ರಚನೆಯು ಸ್ಫೂರ್ತಿಯಿಂದಲೂ, ಭಕ್ತಿಯಿಂದಲೂ ರಚಿಸಿರುವ ಅವರ ಕೀರ್ತನೆಗಳಲ್ಲಿ ಬಳ್ಳಾರಿ ಜಿಲ್ಲೆಯ ಭಾಷಾ ಸೊಗಡನ್ನು ಸರಳವಾದ ಶೈಲಿಯಲ್ಲಿ ಅಭಿವ್ಯಕ್ತಿಸಿದ್ದಾರೆ. ಭಕ್ತಿ ಬದುಕಿನ ಕುರಿತು ಆಕೆಗಿರುವ ಅನನ್ಯ ಜೀವನ ಪ್ರೀತಿ ನಿಷ್ಠೆಗಳು ಅವರ ಕೀರ್ತನೆಗಳಲ್ಲಿ ಬೆರೆತಿವೆ.

ಅಂಬಾಬಾಯಿಯವರ ಜೀವನ ಚರಿತ್ರೆಯು ಸದಾ ಸಂಚಾರ ಕೀರ್ತನಕಾರ್ತಿಯಂತಿದ್ದುದು, ಆಕೆಯ ರಚನೆಗಳಲ್ಲಿ ಮಹಾರಾಷ್ಟ್ರದ ಭಕ್ತ ಸಂತರನ್ನು, ಬಂಗಾಳದ ಶಕ್ತಿ ದೇವತೆಗಳನ್ನು ತನ್ನ ಹಾಡುಗಳಲ್ಲಿ ಉಲ್ಲೇಖಿಸಿರುವುದು. ಆಕೆಯ ಸಂಚಾರವು ಪ್ರಯೋಗಶೀಲ ವಸ್ತುವಿಷಯಗಳ ಆಯ್ಕೆಗೆ ಅತ್ಯಂತ ಸೂಕ್ತವಾದ ಕಾರಣವೆನ್ನಬಹುದು.

**ಜೀವುಬಾಯಿಯವರು**

ಜೀವುಬಾಯಿಯವರು, ಕೊಲಾರ ಜಿಲ್ಲೆಯ ಚಿಂತಾಮಣಿ ತಾಲ್ಲೂಕಿನ ನಿಡಗುರುಕಿ, ಒಂದು ಸಣ್ಣ ಹಳ್ಳಿ, ಅಲ್ಲಿ ತುಂಬಾ ಚೆನ್ನಾಗಿ ಬಾಳಿ ಬದುಕಿದ ಆಚಾರ್ಯವಂತರ ಮನೆಯ ಮಗಳು. ಇವರ ತಂದೆ ಶ್ಯಾನುಭೋಗರಾದ ರಾಮಚಂದ್ರರಾಯರು ಮತ್ತು ತಾಯಿ ರಮಾಬಾಯಿಯವರು. ಈ ದಂಪತಿಗಳ ನಾಲ್ಕನೇ ಮಗಳಾಗಿ ಜೀವುಬಾಯಿಯವರು ''ಶಾಲಿವಾಹನ ಶಕ ೧೮೮೯ನೇ ಹೇಳಂಬಿ ನಾಮ ಸಂವತ್ಸರದ ಕಾರ್ತೀಕ ಬಹುಳ ನವಮಿ ಗುರುವಾರ ಅಂದರೆ ೧೮೯೭ ನವೆಂಬರ್ ೧೮ರಂದು ಜೀವಮ್ಮನವರು ಜನಿಸಿದರು.''[೪೦]

ನಿಡಗುರಕಿಯಲ್ಲಿ ಪಾಠಶಾಲೆಗಳಿಲ್ಲದುದರಿಂದ ತಂದೆ ರಾಮಚಂದ್ರರಾಯರೇ ಮಗಳಿಗೆ ಓದು ಬರಹ ಕಲಿಸಿದರು. ಇದರೊಂದಿಗೆ, ಅತ್ಯಂತ ಸಂಪ್ರದಾಯಸ್ಥ ಮನೆತನದಲ್ಲಿ ಬೆಳೆಯುತ್ತಿದ್ದ ಜೀವುಬಾಯಿಯವರು ಮನೆಯಲ್ಲಿ ನಿತ್ಯ ನಡೆಯುತ್ತಿದ್ದ ದೇವರ ಪೂಜೆ ವ್ರತ, ನೇಮ, ಹೋಮಗಳಿಂದ ಪ್ರಭಾವಿತರಾಗಿ, ಸದಾ ಧಾರ್ಮಿಕ ಭಕ್ತಿಯಿಂದ ಮನದಲ್ಲಿ ಚಿಂತನೆ, ಮಂಥನಗಳು ಪ್ರಾರಂಭವಾಗಲಿಕ್ಕೇ ಕಾರಣವಾದವು ಎನ್ನಬಹುದು.

ಕೋಲಾರ ಜಿಲ್ಲೆಯಲ್ಲಿನ ನಿಡಗುರುಕಿ ಊರಿನಲ್ಲಿ ಸುತ್ತಲಿನ ಪರಿಸರ ಬೆಟ್ಟ ಗುಡ್ಡ, ದೊಡ್ಡ ದೊಡ್ಡ ಹುಣಿಸೇಮರಗಳು ಜೀವುಬಾಯಿಯವರ ಪುಟ್ಟಮನಸ್ಸಿಗೆ ಆಶ್ಚರ್ಯವನ್ನುಂಟುಮಾಡಿದವು. ಆ ಕಾರಣಕ್ಕೆ ಅವರು, ಪ್ರಕೃತಿಯ ವರ್ಣನೆಗೆ ತೊಡಗಿಕೊಂಡು,

''ಆ ಹಣ್ಣು ಈ ಹಣ್ಣು ನೆನಸಿ ಫಲವೇನೆ
ಈ ಹುಣಿಸೇ ಹಣ್ಣಿಗೆ ಸಮ ಬಾಹೋದೇನೆ''

ಎಂಬ ಹಾಡು ರಚಿಸಲು ಪ್ರೇರಣೆ ಪಡೆದಿರಬೇಕು.

ಜೀವುಬಾಯಿ ೧೦ ವರ್ಷದ ಬಾಲಕಿಯಾಗಿರುವಾಗಲೇ ಮನೆಯವರು ಪರಂಪರೆಯ ವಾಡಿಕೆಯಂತೆ ಸೋದರ ಮಾನವನೊಂದಿಗೆ ಬಾಲ್ಯವಿವಾಹ ಮಾಡಿದರು. ಆದರೆ ದುರ್ದೈವ ವಶದಿಂದ ಮರು ವರ್ಷವೇ ಅಂದರೆ ೧೧ನೇ ವಯಸ್ಸಿನಲ್ಲಿಯೇ ವೈಧವ್ಯ ಪ್ರಾಪ್ತವಾಯಿತು. ಜೀವುಬಾಯಿಯು ಅಪ್ರಾಪ್ತಳಿರುವಾಗಲೇ ಆಕೆಯ ಲೌಖಿಕದ ಬದುಕು ಕಮರಿ ಹೋಯಿತು.

ವಿವಾಹದ ಅರ್ಥ ತಿಳಿಯುವ ಮೊದಲೇ, ಆ ವೈವಾಹಿಕ ಬದುಕಿನಿಂದ ಹೊರಗಿದ್ದರು. ಮಡಿವಂತರ ಆಚರಣೆಯನ್ನು ಜೀವಮ್ಮ ಬಾಲ್ಯ ಕಳೆದು ಹರೆಯಕ್ಕೆ ಬಂದಂತೆಲ್ಲ ಮನೆಯವರ ಎಲ್ಲ ಕೆಲಸಗಳನ್ನು ಅವಿರತವಾಗಿ ಮಾಡುತ್ತಾ, ಹಗಲುರಾತ್ರಿ ದುಡಿಮೆಯಲ್ಲಿ ಕಳೆಯತೊಡಗಿದರು. ಮನೆಯಲ್ಲಿ ಹೆಣ್ಣುಮಕ್ಕಳ ಬಸಿರು, ಬಾಣಂತಿಯರ ಹಾರೈಕೆಯಿಂದ ಹಿಡಿದು ದೇವರ ಪೂಜೆ, ನೇಮ, ವ್ರತ ಮುಂತಾದ ಕೆಲಸಗಳಲ್ಲೂ ಪ್ರಾಮಾಣಿಕವಾಗಿ ತೊಡಗಿಸಿಕೊಂಡು ದುಡಿಯುತ್ತಿದ್ದರು.

ಜೀವಮ್ಮನವರು ಮನೆಯಲ್ಲಿದ್ದ ದನಕರುಗಳನ್ನು ಅತ್ಯಂತ ಮುತವರ್ಜಿಯಿಂದ ನೋಡಿ ಕೊಳ್ಳುತ್ತಿದ್ದು, ಅವುಗಳ ಮೇವು, ನೀರು, ಮುಂತಾದ ಹಟ್ಟಿಯ ಕೆಲಸಗಳನ್ನೆಲ್ಲ ಗೋಸೇವೆಯೇ ಹರಿಸೇವೆ ಎಂದು ಅತ್ಯಂತ ಶ್ರದ್ಧೆಯಿಂದ ಮಾಡುತ್ತಿದ್ದರು.

''ಓದಲು, ಬರೆಯಲು ತಿಳಿದಿದ್ದ ಜೀವಮ್ಮನವರು ಬಿಡುವಿನ ವೇಳೆಯಲ್ಲಿ ಕಥೆ, ಕಾದಂಬರಿಗಳನ್ನು ಓದುತ್ತಿದ್ದರು. ಅವುಗಳ ಅಭ್ಯಾಸಗಳಿಂದ ತಾವೇ ಕಥೆಗಳನ್ನು ರಚಿಸಿದರು, ಅವುಗಳೆಂದರೆ, ನಿರುಪಮ, ತಾರಾಮುಖಿ, ಅಥವಾ 'ಸುಂದರರಾಜ' ಇತ್ಯಾದಿ ತಮಾಷೆಯ ಕಥೆಗಳನ್ನು ಬರೆದವರಾದರೂ ಅವರಿಗೆ ಈ ರೀತಿಯ ರಚನೆಗಳಲ್ಲಿ ಯಾವುದೇ ಹಿತವೆನಿಸಲಿಲ್ಲ.''[೪೧] ಅನಂತರದಲ್ಲಿ ರಾಮಾಯಣ, ಮಹಾಭಾರತ, ಭಾಗವತಗಳನ್ನು ಓದುತ್ತಾ, ಅವುಗಳಲ್ಲಿಯೇ ಹೆಚ್ಚು ತನ್ಮಯರಾಗುತ್ತಾ, ಅದರೊಡನೆ ಶ್ರೀನಿವಾಸ ಕಲ್ಯಾಣ, ಹನುಮದ್ವಿಲಾಸ, ದ್ರೌಪದೀ ಸ್ವಯಂವರ ಮುಂತಾದ ಪೌರಾಣಿಕ ಹಾಡುಗಳನ್ನು ಚೆನ್ನಾಗಿ ಹಾಡುತ್ತಾ, ಅವುಗಳ ಸ್ವಾರಸ್ಯವನ್ನು ಮನೆಗೆ ಬಂದವರೆದುರು ಬಹುಸ್ವಾರಸ್ಯವಾಗಿ ವಿವರಿಸುತ್ತಿದ್ದರು.

ಜೀವಮ್ಮನವರು ತಮ್ಮ ಬದುಕಿನ ಬಹುಪಾಲು ಮನೆಯಲ್ಲಿಯ ಕೆಲಸ ಕಾರ್ಯ, ಪೂಜೆ, ವ್ರತ, ನೇಮಗಳ ಆಚರಣೆಯಲ್ಲಿ ಕಳೆಯುತ್ತಲೂ ಹಾಗೂ ತಂದೆ ತಾಯಿಯರ ಆರೈಕೆಗಳಲ್ಲೇ ಸೇವೆಯಲ್ಲಿ ಆಕೆ ಹೆಚ್ಚು ಸಮಯ ಕಳೆಯಲಾರಂಭಿಸಿದರು.

ಅವರ ತಾಯಿಯ ಮರಣಾಂತರ ತಂದೆಯೊಂದಿಗೆ ಅಣ್ಣಂದಿರ ಮನೆಗಳಲ್ಲಿ ವಾಸ ಮಾಡಲಾರಂಭಿಸಿದರು. ಇದಾದ ಸ್ವಲ್ಪ ಕಾಲದಲ್ಲಿಯೇ ತಂದೆಯನ್ನೂ ಕಳೆದುಕೊಂಡು ಅನೇಕ ರೀತಿಯ

ಸಂಕಟಗಳನ್ನನುಭವಿಸಿದರು. ಅನಂತರದ ದಿನಗಳಲ್ಲಿ ಜೀವಮ್ಮನವರು ಬದುಕಿನ ಬಹುಸಮಯ ತೀರ್ಥ ಯಾತ್ರೆಗಳನ್ನು ಮಾಡುವಲ್ಲಿ ಕಳೆದರು. ಅವರು ಸಂದರ್ಶಿಸಿದ ಪುಣ್ಯಕ್ಷೇತ್ರಗಳು ಹಲವಾರು. ಜೀವಮ್ಮನವರು ಲೀಲಾಜಾಲವಾಗಿ ಹರಿಕಥೆ, ದೇವರನಾಮಗಳನ್ನು ನಿರರ್ಗಳವಾಗಿ ಹಾಡುತ್ತಿದ್ದರು. ಬೆಂಗಳೂರು, ಮೈಸೂರುಗಳಲ್ಲಿ ನಡೆಯುತ್ತಿದ್ದ ಹರಿಕಥೆ, ಪುರಾಣ ಪ್ರವಚನಗಳಲ್ಲಿ, ಭಾಗವತ ಸಪ್ತಾಹಗಳಲ್ಲಿ ಅವರು ಸರಾಗವಾಗಿ ಹಾಡುವುದನ್ನು ಮೆಚ್ಚಿ ಭಕ್ತ ಜನರು ತಲೆದೂಗುತ್ತಿದ್ದರು. ಹಾಗೇ, ತಮ್ಮಲ್ಲಿ ನಡೆಯುತ್ತಿದ್ದ ಅನೇಕ ಧಾರ್ಮಿಕ ಕಾರ್ಯಕ್ರಮಗಳಾದ ಏಕಾದಶಿ, ಗೋಕುಲಾಷ್ಟಮಿ, ಶಿವರಾತ್ರಿ, ಋಷಿ ಪಂಚಮಿಗಳ ವಿಶೇಷ ಸಂದರ್ಭಗಳಲ್ಲಿ ಒಟ್ಟಾಗಿ ಸೇರಿ ಆಚರಿಸುತ್ತಿದ್ದರು.

ಹೀಗೆಯೇ, ನಡೆಯುತ್ತಿದ್ದ ಜೀವಮ್ಮನವರ ಬದುಕಿಗೆ ಗುರುಮುಖೇನ ಹರಿಸೇವೆಗೆ 'ಅಂಕಿತ ಪ್ರಧಾನ' ದೊರಕುವಂತಹ ಸಮಯ ಬಂದಿತು. ತುಮಕೂರಿನ ಬಳಿಯಿರುವ ದೇವರಾಯನದುರ್ಗದಲ್ಲಿ ಶ್ರೀ ತಂದೆ ಮುದ್ದುಮೋಹನ ವಿಠ್ಠಲದಾಸರ ಶಿಷ್ಯರಾದ ಶ್ರೀ ಉರಗಾದ್ರಿವಾಸ ವಿಠ್ಠಲದಾಸರು ಹಾಸನದಲ್ಲಿ ನಡೆಸ ಲಾಗುತ್ತಿದ್ದ ಧಾರ್ಮಿಕ ಸಪ್ತಾಹವೊಂದರಲ್ಲಿ ಭಾಗವಹಿಸಲು ತಮ್ಮ ಶಿಷ್ಯರಿಂದೊಡಗೂಡಿ ಆಗಮಿಸಿದ್ದರು.

ಈ ಕಾರ್ಯಕ್ರಮದಲ್ಲಿ ಭಾಗವಹಿಸುವ ಅವಕಾಶ ಜೀವಮ್ಮನವರಿಗೂ ಒದಗಿಬಂದಿತು, ಅಲ್ಲಿ ಧಾರ್ಮಿಕವಾಗಿ ನಡೆಸಲಾಗುತ್ತಿದ್ದ ದೇವತಾ ಕಾರ್ಯಗಳಲ್ಲಿ ಹಗಲಿರುಳು ಶ್ರದ್ಧಾ, ಭಕ್ತಿಯಿಂದ ದುಡಿಯುತ್ತಿದ್ದ ಜೀವಮ್ಮನವರಿಗೆ ಹರಿಗುರುಗಳ ಪ್ರೇರಣೆಯಿಂದ ಶ್ರೀ ಉರಗಾದ್ರಿ ವಿಠ್ಠಲದಾಸರು "ಶ್ರೀಕಮಲನಾಭವಿಠ್ಠಲ"ನೆಂಬ ಅಂಕಿತವನ್ನು ಅನುಗ್ರಹಿಸಿದರು.

ಮೊದಲೇ ದೇವರ ನಾಮ, ಪುರಾಣ ಪ್ರವಚನಗಳಲ್ಲಿ ಅಪಾರವಾದ ಶ್ರದ್ಧೆಯಿಂದ ಹಾಡುತ್ತಿದ್ದ ಜೀವುಬಾಯಿಯವರು ಗುರುಗಳಿಂದ ಅಂಕಿತ ಪಡೆದ ನಂತರ ಮತ್ತಷ್ಟು ಭಾವಪೂರ್ಣವಾಗಿ ಹಾಡಲಾರಂಭಿಸಿದರು.

ಅವರು ಅಂಕಿತ ಪಡೆದಾಗ ಹಾಡಿದ ಮೊದಲ ಹಾಡು

"ಕಮಲನಾಭ ವಿಠ್ಠಲ ಕಾಯಬೇಕಯ್ಯ ||ಪ||
ಶ್ರಮಜೀವಿ ಇವಳಿಗುತ್ತಮ ಗತಿಯಿತ್ತು
ಕ್ಷಣ ಸಹ ನಿನ್ನೆಯ ಭಕ್ತಿ ಗಣದವರ ಸೇವೆಯನು
ದಣಿಯದಲೆ ಮಾಳ್ಪ ಲಕ್ಷಣ ಶೀಲಳೋ
ಅಣು ಮಹದ್ಗತ ನಿಮಗೆ ಮಣಿದು ಭಿನ್ನೈಪೆ ಗುಣ
ಋಣವ ಪರಿಹರಿಸಿ ತಕ್ಷಣ ಪಾಲಿಸಯ್ಯ"[೪೨]

ಹೀಗೆ ಅತ್ಯಂತ ಸರಾಗವಾಗಿ ರಚಿಸಿ ಹಾಡುತ್ತಿದ್ದ ಜೀವುಬಾಯಿಯವರಿಗೆ ಹಾಡುಗಳನ್ನು ಬರೆದು ತಿದ್ದುವ ಕ್ರಮ ಇರಲಿಲ್ಲವಂತೆ. ಸ್ಫೂರ್ತಿ ಬಂದ ಕೂಡಲೇ ಕಾಗದದ ಮೇಲೆ ಒಮ್ಮೆಲೇ ಬರೆಯುವುದು, ಬರೆದದ್ದು ಶ್ರೀಹರಿಯ ಕೃಪೆಯೋ, ಹೊರತು, ಬರೆದ ಹಾಡನ್ನು ತಿದ್ದಲು ನನಗೆಲ್ಲಿಯ ಅಧಿಕಾರ ಎಂಬುದು ಆಕೆಯ ಅಭಿಮತವಾಗಿತ್ತು.

ಗುರು ಕರುಣೆಯಿಂದಲೂ, ದೈವಪ್ರೇರಣೆಯಿಂದಲೂ ಜೀವುಬಾಯಿಯವರು ರಚಿಸಿದ ಹಾಡುಗಳು ಹರಿಕಥೆಯನ್ನು ಹೋಲುವಂತಹ ಹಲವು ದೀರ್ಘ ಹಾಡುಗಳು, ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಶಾಲಿವಾಹನ ಶಕೆ ೧೯೦೫ ಶ್ರೀರುಧಿರೋದ್ಗಾರಿ ಸಂವತ್ಸರ ಉತ್ತರಾಯಣ ವೈಶಾಖ ಬಹುಳ ಚತುರ್ದಶಿ ಅಂದರೆ ಗುರುವಾರ ೯-೬-೧೯೮೩ ರಂದು ದೈವಾಧೀನರಾದರು.

## ಜೀವುಬಾಯಿಯವರ ಕೃತಿ ರಚನೆಗಳು

ಜೀವುಬಾಯಿಯವರ ಮೊದಲ ಹಾಡು "ಶ್ರೀ ಉರಗಾದ್ರಿವಾಸ ವಿಠ್ಠಲದಾಸ"ರನ್ನು ಕುರಿತು ರಚಿಸಿದ್ದರೆ, ಕೊನೆಯ ಹಾಡು ಉರಗಾದ್ರಿವಾಸ ವಿಠ್ಠಲದಾಸರ ಪರಮಾಪ್ತ ಶಿಷ್ಯರಾದ ತಂದೆ ವೆಂಕಟೇಶ ವಿಠ್ಠಲದಾಸರ ಮೇಲೆ ರಚಿತವಾಗಿದ್ದು. ಈ ಮೂಲಕ ಜೀವುಬಾಯಿಯವರು ತಮ್ಮ ಗುರುಗಳ ಕಾಣಿಕೆಯನ್ನು ಸಲ್ಲಿಸಿದ್ದಾರೆ.

ಜೀವುಬಾಯಿಯವರು ೧೭೦ ಕೀರ್ತನೆಗಳನ್ನು, ೧೦ ದೀರ್ಘ ಕೀರ್ತನೆಗಳನ್ನು ರಚಿಸಿದ್ದಾರೆ. ಉಗಾಭೋಗಾ, ಸುಳಾದಿ, ಹಾಡುಗಳಲ್ಲಿ ಪಲ್ಲವಿ, ಅನುಪಲ್ಲವಿ, ನುಡಿಗಳು ೩, ೫, ೭ ಮಾತ್ರೆಗಳಲ್ಲಿ ರಚಿತವಾಗಿವೆ. ಬಹಳಷ್ಟು ಹಾಡುಗಳು ಯಾವ ಛಂದಸ್ಸಿನ ನಿಯಮವಿರದೇ ರಚಿಸಲಾಗಿದೆ. ಜೀವು ಬಾಯಿಯವರು ತಮಗೆ ಸ್ಫೂರ್ತಿಯಾದಲ್ಲಿಯೇ ಬರೆಯುತ್ತಿದ್ದುದು ಅವರಿಗೆ ಹರಿಸೇವೆಯು ಮುಖ್ಯವಾಗಿರುತ್ತಿತ್ತು.

ಜೀವುಬಾಯಿಯವರ ಕೃತಿಗಳಲ್ಲಿ ವೈವಿಧ್ಯತೆಯನ್ನು ದೇವ, ದೇವತೆಗಳ, ಗುರುಗಳ ಸ್ತುತಿ ಮೂಲಕ ಕಂಡುಕೊಳ್ಳಬಹುದಾಗಿದೆ. ಗುರುಗಳ ಸ್ತುತಿ, ಹರಿಸಂಕೀರ್ತನೆ, ಗಣಪ, ಕೃಷ್ಣ, ಶ್ರೀನಿವಾಸ, ಶ್ರೀರಾಮ, ಲಕ್ಷ್ಮೀದೇವಿ, ಹನುಮ, ಭೀಮ, ಮಧ್ವ ಎಲ್ಲರನ್ನೂ ಒಂದೇ ಮನಸ್ಸಿನಿಂದ ಹಾಡಿ ಹೊಗಳಿದ್ದಾಳೆ.

ಗುರುಗಳ ಸ್ತುತಿಗಾಗಿ ಬರೆದ ಈ ಕೀರ್ತನೆಯು

"ಚಿಂತೆಯಾತಕೆ ಮನವೆ ಗುರುಗಳ ಪಾದ
ಚಿಂತನೆಯನು ಮಾಡದೆ ||ಪ||
ಸಂತತ ಬಿಡದಲೆ ಚಿಂತನೆ ಮಾಳ್ಪರ ||ಅ.ಪ||
ಅಂತರಂಗವ ತಿಳಿದರು ಗುರುವರು"[೪೩]

ಜೀವುಬಾಯಿಯವರ ಬದುಕಿನ ದಿಕ್ಕನ್ನು ಬದಲಾಯಿಸಲು ಕಾರಣವಾದ ಗುರುಕೃಪೆಯನ್ನು ನೆನೆಯುತ್ತಿರುವರು.

ಹರಿದಾಸ ಸಾಹಿತ್ಯ ಪರಂಪರೆಯಲ್ಲಿ ಹರಿಯ ದಶಾವತಾರಗಳ ವರ್ಣನೆಯನ್ನು ಮಾಡುವುದು ಸಂಪ್ರದಾಯವಾಗಿ ಬೆಳೆದಿದೆ. ಜೀವುಬಾಯಿಯವರು ತಮ್ಮ ಹಾಡುಗಳಲ್ಲಿ ದಶಾವತಾರಗಳ ಹಾಡುಗಳನ್ನು ದೀರ್ಘವಾಗಿ ೧೦ ನುಡಿಗಳಲ್ಲಿ ಬರೆದರೆ, ಕೆಲವೊಮ್ಮೆ ಒಂದೊಂದು ಪದದಲ್ಲಿಯೂ ವರ್ಣಿಸಿರುವರು.

''ನೀರೊಳು ಮುಳುಗುತ ಮೀನ ರೂಪದಿ
ನಾರುವ ಮಯ್ಯುವದಾರಕ್ಕ
ನೀರೊಳು ಮುಳುಗಿ ವೇದವ ತಂದು ಸುತಗಿತ್ತ ||೧||
ಧೀರ ಮತ್ಸ್ಯಮೂರುತಿ ತಂಗಿ
ಭಾರ ಬೆನ್ನಲಿ ಪೊತ್ತು ಮೋರೆ ಕೆಳಗೆ ಮಾಡಿ
ನೀರೊಳು ವಾಸಿ ಪದರಕ್ಕ
ವಾರಿಧಿ ಮಥಿಸಿದಮೃತ ಸುರರಿಗೆ ಇತ್ತ
ಧೀರ ಕೂರ್ಮ ಮೂರು ತಂಗಿ''[೪೪]

ಹೀಗೆ ದೀರ್ಘವಾಗಿ ವರ್ಣಿಸಿ, ಹಾಡಿರುವ ಪ್ರತಿ ಪದ್ಯವು ಒಂದೊಂದು ಅವತಾರಗಳನ್ನು ಹೇಳುವ ಒಟ್ಟು ೧೦ ರಿಂದ ೧೩ ಪದ್ಯಗಳನ್ನು ನಾವು ನೋಡಬಹುದು.

ಹಾಗೆಯೇ, ಒಂದೊಂದು ನುಡಿಯಲ್ಲಿಯೂ ಸೂಚಿಸಿರುವುದುಂಟು.

''ಜಾತುಕೊಂಡಿ ಯಾಕೋ ನರಹರಿ
ಪ್ರಾರ್ಥನೆಯನ್ನು ಕೇಳೊ ಸ್ವಾಮಿ
ವೇದ ತಂದ ಭಾರಪೊತ್ತು
ಕೋರೆ ತೋರಿ ಕರುಳ ಬಗೆದು
ಬೇಡಿ ಭೂಮಿ ದೂಡಿ ನೃಪರ
ಸಾಗರವ ಬಂಧಿಸಿದ ಭಯವೋ||೧||''[೪೫]

ಇಲ್ಲಿ ಒಂದೇ ನುಡಿಯಲ್ಲಿ ಏಳು ಅವತಾರಗಳನ್ನು ಹೇಳಿರುವುದನ್ನು ನಾವು ಗಮನಿಸಬಹುದು. ಜೀವುಬಾಯಿಯವರು ತೊಟ್ಟಿಲ ತೂಗುವ ಹಾಡುಗಳನ್ನು ಬರೆದಿರುವರು.

''ಊದೂ ಕೊಳಲನು ಕೃಷ್ಣ ಊದೊ ಕೊಳಲನು
ವೇದ ವೇದ್ಯ ಊದು ಕೊಳಲ ನಾದ ತುಂಬೆ ನಭದಿ ಕೃಷ್ಣ''

ಎಂದು ಗೋಪಿಕೆಯರ ಬೇಡಿಕೆಗೆ ಮಣಿದು ಕೃಷ್ಣನು ತನ್ನ ಕೊಳಲನು ಊದುವಾಗ ಗೋಪಿಯರು ಅತ್ಯಂತ ಸಂಭ್ರಮದಿಂದ ಕೃಷ್ಣನೊಡನೆ ಸರಸ ಸಂಭಾಷಣೆಯೊಂದು ಹೀಗಿದೆ.

**ಗೋಪಿಕೆಯರು**

''ನಾರಿಯರು ನಲಿದು ಬಂದು
ವಾರಿಧಿಯೊಳು ಸರಸವಾಡೆ
ಮಾರಮಣನು ಸೀರೆಗಳನು
ಗಾರು ಮಾಡಿ ಕದಿವರೇನೊ
ತಾರೊ ವಸನವ ದುರುಳ ಕೃಷ್ಣ ತಾರೊ ವಸನವ

**ಕೃಷ್ಣ**

''ಅಂಗನೆಯರೆ ನಿಮ್ಮ ವ್ರತಕೆ
ಭಂಗವಾದ ಕಾರ್ಯವೆಸಗೆ
ವಂದಿಸಿದರೆ ಕೊಡುವೆನೆಂದು
ರಂಗ ನಲಿದು ನುಡಿದ ಮುದದಿ
ವಸನ ನೀಡಿದ ರಂಗ ವಸನ ನೀಡಿದ''[೪೬]

ಎಂದು ಗೋಪಿಕೆಯರನ್ನು ಕೃಷ್ಣ ಕಾಡಿಸಿ, ಅವರು ಬೇಡಿಕೊಂಡಾಗ ಪ್ರೀತಿಯಿಂದ ಹರಸುವ ವಸ್ತುವನ್ನು ಈ ಹಾಡು ಹೊಂದಿರುವುದು. ಹನುಮ-ಭೀಮ-ಮಧ್ವರ ಅವತಾರತ್ರಯರನ್ನು ಕುರಿತು,

''ಕಂಜಾಕ್ಷನ ದಯದಿ ಅಂಜದೆ ನೀರಧಿಯ
ಹಿಂಜರಿಯದೆ ದಾಂಟಿ ಸಂಜೆ ಕಳೆಯೆ ಲಂಕೆ
ರಂಜಿಸುವದು ಕಂಡು ಕಂಜಾಕ್ಷಿಗುಂಗುರ ಪ್ರ
ಭಂಜನ ನೀಡಿದೆಯೊ ಅಂಜನೆಯ ತನಯ
ದುರುಳ ದೈತ್ಯನಾದ ಜರೆಯ ಸುತನ ಸೀಳಿ
ಹರಿಗರ್ಪಿಸಿ ಸರ್ವವನು ಧರಣಿ ಭಾರನಿಳುಹಿ
ಹರಿಯ ಭಕ್ತನಾದೆ ಪರಿಸರನೆ ಸಲಹೋ
ಮುದ್ದುಕೃಷ್ಣನ ಸೇವೆ ಶುದ್ಧ ಮನದಿ ಮಾಡಿ
ಸದ್ವೈಷ್ಣವರ ಕುಲದ ಪದ್ಧತಿಯನರುಹಿ
ಪದ್ಮನಾಭ ಕಮಲನಾಭ ವಿಠ್ಠಲನೊಲಿಸಿ
ಸದ್ಗ್ರಂಥಗಳ ರಚಿಸಿ ಉದ್ಧರಿಸಿದೆ ಜಗವ''

ಎಂದು ಮೂರು ರೂಪಗಳಲ್ಲೂ ಅನಂತರೂಪ ಶ್ರೀಹರಿಯನ್ನ ಕಂಡಿದ್ದಾರೆ. ಭಕ್ತಿ ಪರಂಪರೆಯಲ್ಲಿ ನವವಿಧವಾದ ಭಕ್ತಿಯು ಕಂಡುಬರುವುದು ಅದರಲ್ಲಿ ಆತ್ಮನಿವೇದನೆಯನ್ನು ಬಹುಪಾಲು ಮಹಿಳಾ ಹರಿದಾಸರಲ್ಲಿ ಕಾಣಬಹುದು. ಅಂತೆಯೇ ಜೀವುಬಾಯಿಯವರು

"ಕರೆ ಕರೆ ಭವದೊಳು ಮುಳುಗಿರುವೆ
ದುರಿತದೊರನೆ ದುಃಖ ತರ ತರ ವ್ಯಥೆಯಲಿ
ನಾನು ನನ್ನದು ಎಂಬ ಹೀನ ವೃತ್ತಿಗಳಿಂದ
ಹಾನಿಯಾಯಿತು ಆಯು ಶ್ರೀನಿಧಿಯು
ಜ್ಞಾನಿಗಳೊಡನಾಡಿ ಮೌನದಿಂದಿದಲೇ
ಶ್ವಾನ ಸೂಕರನಂತೆ ತಿರುಗಿ ಬಾಯ್ಬಿಡುತಿರಲು"

ಎಂದು ಕವಯಿತ್ರಿಯು ಇಲ್ಲಿ ಪಶ್ಚಾತ್ತಾಪಪಡುವಳು.

ದಾನವಾಂತಕ ಕೃಷ್ಣ ಧನವಿಲ್ಲವಯ್ಯ
ಗಾನಲೋಲನೆ ಭಕ್ತಪಾಲ ನಿನ್ನಯ ಪಾದ
ಧ್ಯಾನವ ಮಾಳ್ಪದ ಪಾದಧ್ಯಾನ ಕೊಡಿಸುದೇವ"[೪೭]

ಎಂದು ಅತ್ಯಂತ ವಿನೀತರಾಗಿ ನಿವೇದಿಸುವ ಜೀವಮ್ಮನವರು ಮುಂದುವರೆದು ತಮ್ಮ ರಚನೆಯಲ್ಲಿ,

"ಜ್ಞಾನಿಗಳೊಡನಾಡಿ ಶ್ರೀನಿವಾಸನೆ ನಿನ್ನ
ನಾನಾ ಲೀಲೆಗಳ ಧ್ಯಾನಿಸಲಿಲ್ಲ ಹರಿಯ
ಜ್ಞಾನಿಗಳರಸ ಭಕ್ತರ ಸುರಧೇನು
ಅಜ್ಞಾನಿಗಳಳಿದು ಸುಜ್ಞಾನ ಜನರ ಸಂಘ"

ಎಂದು ಮುಂತಾಗಿ ತಮ್ಮ ಸೇವೆಗೆ ತಕ್ಕುದಾದ ಹರಿದೀಕ್ಷೆ ದೊರೆತದ್ದು ತಮ್ಮೆಲ್ಲ ಅಜ್ಞಾನಗಳು ನಾಶವಾಗಿ ಹರಿಸೇವೆಯ ಸುಜ್ಞಾನ ದೊರೆತಿರುವುದು ಎಂದಿದ್ದಾರೆ.

ಹಾಗೆಯೇ ಲೋಕನೀತಿ, ವರಮಹಾಲಕ್ಷ್ಮಿಹಾಡು, ಗಣಪತಿಸ್ತುತಿ, ಹನುಮ-ಭೀಮ-ಮಧ್ವ, ಭಾರತೀದೇವಿ, ರುದ್ರದೇವರು, ಪಾರ್ವತಿದೇವಿ, ನದಿಸ್ತೋತ್ರ ಮುಂತಾದ ಕೀರ್ತನೆಗಳು ದೊಡ್ಡವು, ಕೀರ್ತನೆಗಳು ಲಭ್ಯವಾಗಿವೆ.

ಜೀವುಬಾಯಿಯವರು ತಮ್ಮ ಬದುಕಿನಲ್ಲಿ ಪಾಲಿಸಿಕೊಂಡು ಬಂದ ವಿಶಿಷ್ಟ ಪದ್ಧತಿ ಎಂದರೆ ಪ್ರತಿ ಯುಗಾದಿಯಂದು ಒಂದು ಹೊಸ ಹಾಡನ್ನು ಅಥವಾ ಒಂದೋ, ಎರಡೋ ಕೀರ್ತನೆಗಳನ್ನು ರಚಿಸಿ, ಅದನ್ನು ಶ್ರೀಹರಿಗೆ ಅರ್ಪಿಸುವುದು. ಈ ಹಾಡುಗಳಲ್ಲಿ ಸಾಮಾನ್ಯವಾಗಿ ಸಂವತ್ಸರದ ಹೆಸರುಗಳಿರುವುದು ಯುಗಾದಿಯ ದಿನವೇ ರಚಿತವಾಗಿರುವುದು ಎಂದು ನಾವು ಸ್ಪಷ್ಟವಾಗಿ ತಿಳಿಯಲುಬಹುದು.

೨೨ ಹಾಡುಗಳು ಮತ್ತು ಶ್ರೀರಾಮಜನನ ಮತ್ತು ಸೀತಾಕಲ್ಯಾಣ 'ಶ್ರೀಹರಿ ಲೀಲಾ' ಎಂಬ ಎರಡು ದೊಡ್ಡ ಹಾಡುಗಳು ಜೀವುಬಾಯಿಯವರ ಕೀರ್ತನೆಗಳಲ್ಲಿವೆ.

''ವಿಶ್ವವ್ಯಾಪಕ ನೀನೆ ವಿಶ್ವಮಾರುತಿ ನೀನೆ
ವಿಶ್ವಕರ್ತನು ನೀನೆ ವಿಶ್ವನಿಗೆ ಶ್ರೀ'
'ವಿಶ್ವ ವಸುನಾಮ ಸಂವತ್ಸರದೊಳು ಮೆರೆವ
ಪರಿ ಪರಿ ವಿಧದಲಿ ಹರಿ ಸ್ಮರಣೆಯ ಮಾಡೆ'
ಪರಾಭವ ನಾಮ ಸಂವತ್ಸರದಿ
'ಮಂಗಳಾಂಗ ಪ್ಲವಂಗವತ್ಸರ
ಗಂಗಾಜನಕ ನಿನ್ನಂಘ್ರಿಭಜಕರ'
'ಸೌಮ್ಯ ನಾಮ ಸಂವತ್ಸರದಂದು
ನೇಮದಿಂದ ಭಜಪ ಭಕುತರ
'ಸಾಧಾರಣ ವತ್ಸರದಲಿ ಸಲಹುವ
ಶ್ರೀದ ಕಮಲಾನಾಭ ವಿಠಲ ಸುಜನರ''[೪೮]

ಜೀವಮ್ಮನವರ ಸಣ್ಣ ಹಾಡುಗಳು ವೈವಿಧ್ಯಮಯವಾಗಿದ್ದು, ಅವರಲ್ಲಿನ ಕವಿತಾ ಸಾರ್ಮಥ್ಯವು ಸಹಜ ಸ್ಫೂರ್ತಿಯಿಂದ ಪುರಾಣ, ಪುಣ್ಯಕಥೆಗಳು, ಸಂಪ್ರದಾಯದ ಆಚಾರ-ವಿಚಾರಗಳು ಅತ್ಯಂತ ಸ್ಪಷ್ಟವಾಗಿ ಸರಳ ಭಾಷೆಯಲ್ಲಿ ಹೊರಹೊಮ್ಮಿವೆ.



ಜೀವುಬಾಯಿಯವರ ಕೀರ್ತನೆಗಳನ್ನು ವಿವೇಚಿಸುವುದರೊಂದಿಗೆ ಅಲ್ಲಿನ ಭಾಷೆ ಸಹಜ ಸರಳವಾಗಿದ್ದು, ಅವರ ಕೀರ್ತನೆಗಳು ''ಶ್ರೀ ಪುರಂದರ ವಿಠ್ಠಲ ದಾಸ ಚರಿತ್ರೆ', ಎಲ್ಲವುಗಳಿಗಿಂತಲೂ ದೀರ್ಘ ಕಥಾ ವಿಸ್ತರಣೆ ಹೊಂದಿದೆ. ಗದ್ಯ ಮತ್ತು ಪದ್ಯ ಮಿಶ್ರಿತವಾದ 'ಶ್ರೀರಾಮ ಜನನ ಮತ್ತು ಸೀತಾಕಲ್ಯಾಣ' 'ಗಾಲವ ಚರಿತ್ರೆ', ಶ್ರೀಹರಿಲೀಲಾ, 'ಸಮುದ್ರಮಥನ' ಶ್ರೀವರಮಹಾಲಕ್ಷ್ಮಿ ಕಥೆ 'ಶ್ರೀಕೃಷ್ಣಲೀಲಾ', 'ಶ್ರೀಹರಿಮಾನಸಪೂಜಾ', 'ರಾಧಾ-ಮಾಧವ ವಿಲಾಸ' ಎಲ್ಲವೂ ಅತ್ಯಂತ ಸುಂದರವಾಗಿ ಮೂಡಿ ಬಂದಿವೆ.

ಆದರೆ ಮೊದಲೇ ಹೇಳಿದಂತೆ ಜೀವುಬಾಯಿಯವರು ಹರಿಭಕ್ತಿಗೆ ಹೆಚ್ಚು ಒತ್ತು ಕೊಟ್ಟು ಹಾಡು ರಚನೆಗೆ ತೊಡಗಿರುವುದರಿಂದ ಅವರ ಕೀರ್ತನೆಗಳಲ್ಲಿ 'ವಸ್ತು'ವಿಗೆ ಹೆಚ್ಚಿನ ಆದ್ಯತೆ ಕೊಟ್ಟು, ಅವುಗಳ ಲಯ, ಛಂದಸ್ಸು, ಗಣ ಮುಂತಾದವುಗಳು ಅಷ್ಟಾಗಿ ಪ್ರಾಮುಖ್ಯವೆನಿಸುವುದಿಲ್ಲ. ಆದ್ದರಿಂದಲೇ ಒಮ್ಮೊಮ್ಮೆ ಅತಿ ಸ್ಪಷ್ಟವಾದ ಛಂದಸ್ಸು, ಗಣ ರಚನೆಗಳು ಕಂಡರೂ ಕೆಲವೊಮ್ಮೆ, ಯಾವ ಛಂದಸ್ಸು, ಗತಿ, ಗಣಗಳನ್ನು ಗಣನೆಗೆ ತಾರದೆ ಅಲ್ಲಿ ಹರಿಕಥೆ ಮಾತ್ರವೇ ಮುಖ್ಯವೆನಿಸುತ್ತಾರೆ.'' ಸಾಮಾನ್ಯವಾಗಿ ಹಾಡು, ಕೀರ್ತನೆಗಳು ಮುಕ್ತ ಛಂದಸ್ಸಿಗೆ ಒಳಪಡುತ್ತವೆ.

ಜೀವುಬಾಯಿಯವರ ಕೀರ್ತನೆಗಳಲ್ಲಿ ಭಕ್ತಿರಸವೇ ಪ್ರಧಾನವಾಗಿ ಮದುವೆ ವರ್ಣನೆಯ ಹಾಡುಗಳಲ್ಲಿ ವರ್ಣನಾ ವೈಖರಿಯು ತುಂಬಾ ಸಂಭ್ರಮವಾಗಿ ಮೂಡಿಬಂದಿದೆ. ಆದರೆ ಜೀವಮ್ಮನವರ ಕೀರ್ತನೆಗಳು ಹರಿಭಕ್ತಿ ಪ್ರಧಾನವಾಗಿರುವುದರಿಂದ, ಅಲ್ಲಿ ಶೃಂಗಾರ, ಕರುಣ ರಸಗಳು ಮುಖ್ಯ ಭಾವಕ್ಕೆ ಪೂರಕವಾಗಿ ಬಂದಿವೆ.

## ಇತರ ಮಹಿಳಾ ಹರಿದಾಸರು

ಮಹಿಳಾ ಹರಿದಾಸರಲ್ಲಿ ಅತ್ಯಂತ ಪ್ರಮುಖವಾಗಿ ಪರಿಗಣಿಸಿರುವ ಕೀರ್ತನಕಾರ್ತಿಯರನ್ನು ಈಗಾಗಲೇ ಅಭ್ಯಸಿಸುತ್ತಿದ್ದು, ಅವರಷ್ಟೇ ಅಲ್ಲದೇ, ಹರಿದಾಸ ಸಾಹಿತ್ಯವನ್ನು ರೂಢಿಸಿಕೊಂಡರವರನ್ನು ಕ್ರಮವಾಗಿ ಹೆಸರಿಸಲಾಗದಿದ್ದರೂ, ಅವರ ಹೆಸರು, ಕೃತಿ, ವಿಚಾರಗಳನ್ನಷ್ಟೆ ಇಲ್ಲಿ ವಿವೇಚಿಸಬಹುದಾಗಿದೆ.

ಆದರೆ ''ಮೊದಲಿನ ಮಹಿಳಾ ಹರಿದಾಸರಂತೆ ಇತ್ತೀಚಿನ ಕಾಲಘಟ್ಟದಲ್ಲಿ ಅಂತಹ ಪ್ರತಿಭಾನ್ವಿತ ರಾದ ಕವಯಿತ್ರಿಯರು ಕಾಣಬರುವುದಿಲ್ಲ. ೧೮೫೦ ರಿಂದೀಚಿನ ಕಾಲದಲ್ಲಿ ವೈಷ್ಣವ ಪಂಥದಲ್ಲಿ ಕೃತಿ ರಚನೆ ಮಾಡುವ ಮೂಲಕ ಗುರುತಿಸಿಕೊಂಡಿರುವುದನ್ನು ಡಾ. ಸರೋಜಿನಿ ಮಹಿಷಿಯರು ''ಕರ್ನಾಟಕ ಕವಯತ್ರಿಯರು''[೫೦] ಕೃತಿಯಲ್ಲಿ ಪ್ರಸ್ತಾಪಿಸಿದ್ದಾರೆ. ಈ ಮಹಿಳೆಯರ ಕುರಿತು ಕೆಲವು ವಿವರ ಕೊಟ್ಟಿದ್ದಾರೆ.

ಚೆ.ರಾ.ಚೆಲ್ಲಮ್ಮ(೧೮೫೦), ಗಣಪಕ(೧೮೭೦), ಸುಂದರ ಬಾಯಿ (೧೮೩೫), ಪನ್ನಿ ಲಕ್ಷ್ಮೀಬಾಯಿ (೧೮೮೦), ಶಾಂತಿಬಾಯಿ(೧೮೮೦) ಇವರೆಲ್ಲರ ಬಹುಪಾಲು ಕೃತಿಗಳು ಭಕ್ತಿಪ್ರಧಾನವಾದ ವಸ್ತು ವಿಷಯಗಳನ್ನು ಒಳಗೊಂಡಿರುವುವು. ಚೆ.ರಾ.ಚೆಲ್ಲಮ್ಮ(೧೮೫೦), ಈಕೆ ಕೃಷ್ಣ ತೀರದಲ್ಲಿರುವ ಚೆರುಪಲ್ಲಿ ಎಂಬ ಗ್ರಾಮದಲ್ಲಿ ಜನಿಸಿದರು. ಚೆಲ್ಲಮ್ಮ ಹಲವು ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ರುಕ್ಮಿಣೀ ಪರಿಣಯ' ಎಂಬುದು ಪ್ರಸಿದ್ಧವಾದ ಪೌರಾಣಿಕ ವಸ್ತುವನ್ನು ಒಳಗೊಂಡಿದೆ.

ಚೆಲ್ಲಮ್ಮ ಕೃತಿಗಳಲ್ಲಿ ಪ್ರಸಾದ ಗುಣವಿದೆ. ಭಕ್ತಿಯೇ ಪ್ರಧಾನ ಗುಣವಾದರೂ ಹೊಸ ಹೊಸ ಉಪಮೆಗಳ ಬಳಸುತ್ತಾ, ವರ್ಣನಾ ಕೌಶಲ್ಯವನ್ನು ಹೊಂದಿದ್ದಾಳೆ. ಈಕೆಯ ಇತರ ಕೃತಿಗಳು, ರಾಜಕಳಾನಿಧೀ, ಪಾರಿಜಾತಪಹರಣ ಮುಂತಾದವು.

### ಗಣಪಕ್ಕ (೧೮೭೦)

ಅಕ್ಷರಸ್ಥಳಾದ ಈಕೆ ಗೋಕರ್ಣ ಜಿಲ್ಲೆಯವಳು. ಚಿಕ್ಕ ವಯಸ್ಸಿನಲ್ಲಿಯೇ ಕಾವ್ಯ ರಚನೆಯಲ್ಲಿ ಆಸಕ್ತಿ ಹೊಂದಿದ್ದಳಂತೆ. ರಾಮಭಕ್ತರಾದ ಗಣಪಭಟ್ಟರು ಈಕೆಯ ತಂದೆ, ತಾಯಿ ಪಾರ್ವತಿ. ಇವರ ಮನೆಯಲ್ಲಿ ಸದಾ ಭಜನೆ, ಕೀರ್ತನೆ, ಸಂತರ್ಪಣೆಗಳು ನಡೆಯುತ್ತಿದ್ದು, ಸಹಜವಾಗಿ ಆಕೆಗೆ ಹರಿಭಕ್ತಿಯ ಕಡೆಗೆ ಒಲವುಂಟಾಯಿತು.

ಗೋಕರ್ಣ ಮಹಾತ್ಮೆ, ಕೃಷ್ಣನ ಹುಟ್ಟು, ಕೃಷ್ಣ ಲೀಲೆ, ಯಕ್ಷಗಾನ, ಅನಂತನ ಕಥೆ, ತುಳಸೀ ಮಹಾತ್ಮೆ, ಆರತಿ ಪದಗಳು, ಮದುವೆಹಾಡು ಮುಂತಾದವುಗಳನ್ನು ರಚಿಸಿದ್ದಾಳೆ.

**ಸುಂದರಬಾಯಿ (೧೮೭೫) :** ಧಾರವಾಡದ ಹೆಬ್ಬಳ್ಳಿ ತಾಲೂಕಿನ ಶ್ರೀಮಂತ ಜಹಗೀರದಾರರ ಮನೆತನದವಳು ಈಕೆ. ಬಾಲವಿಧವೆಯಾದ ಸುಂದರಬಾಯಿ ಸೋದರ ಮಾವಂದಿರಾದ ಶ್ರೀ ಸತ್ಯಪರಾಕ್ರಮ ಸ್ವಾಮಿಗಳಿಂದ ದೈವಭಕ್ತಿ, ಧರ್ಮಕಾರ್ಯಗಳಲ್ಲಿ ಪ್ರಭಾವಿತಳಾದಳು.

ಈಕೆಯ ಕಾವ್ಯಂಕಿತವು ಶ್ರೀ ವೆಂಕಟೇಶ, ಶ್ರೀ ಬೆಟ್ಟದೊಡೆಯ ಶ್ರೀ ವೆಂಕಟೇಶ ಎಂಬುದಾಗಿದ್ದು ತನ್ನ ಕೃತಿ ರಚನೆಗಳಲ್ಲಿ ತಿಳಿಸುತ್ತಾಳೆ.

**ಈಕೆಯ ಕೃತಿಗಳು :** ಕೃಷ್ಣನ ಹುಟ್ಟು, ರುಕ್ಮಾಂಗದ ಚರಿತ್ರೆ, ಸುಭದ್ರಾಮಯ್ಯ, ರುಕ್ಮಿಣೀ ಮಯ್ಯ, ರುಕ್ಮಿಣೀ ಪರಿಣಯ, ಸುಭದ್ರಾ ಕಲ್ಯಾಣ, ಶುಕ್ರವಾರ-ಶನಿವಾರ, ಗೌರಿಯ ಹಾಡುಗಳು ಮುಂತಾದವುಗಳನ್ನು ರಚಿಸಿದ್ದಾರೆ. ಸರಳವಾದ ರಚನೆಯಲ್ಲಿ ವೈವಿಧ್ಯವಿದ್ದು, ಮೃದು ಮಧುರ ನೀತಿವಾಕ್ಯಗಳು ಸುಂದರಬಾಯಿ ಯವರ ನೇರ ನಿರೂಪಣೆಗಳು ಈಕೆಯ ಶೈಲಿಯೂ, ಆಗಿದ್ದು ಗಮನಸೆಳೆಯುತ್ತವೆ.

**ಪನ್ನಿ ಲಕ್ಷ್ಮೀಬಾಯಿ (೧೮೮೦):** ಲಕ್ಷ್ಮೀಬಾಯಿಯು ಗೋಕರ್ಣದವಳಾಗಿದ್ದು, ರಾಮಭಟ್ಟರ ಮಗಳಾದ ಈಕೆ ಕೆಲವು ದೇವರನಾಮಗಳನ್ನು ರಚಿಸಿದ್ದಾಳೆ. ಗೋಕರ್ಣದ ಮನೆಯಲ್ಲಿಯೂ ಈಕೆಯ ಹಾಡುಗಳು ಪ್ರಚಲಿತದಲ್ಲಿವೆ. ಈಕೆ ತನ್ನ ಹಾಡುಗಳಲ್ಲಿ ಶಬ್ದಚಿತ್ರಗಳನ್ನು ಬಳಸಿ ಕಾವ್ಯ ಸುಂದರವಾಗುವಂತೆ ಮಾಡಿರುವುದು ವಿಶೇಷವಾಗಿರುವುದು.

**ಶಾಂತಿಬಾಯಿ (೧೮೮೦):** ಈಕೆ ಶಿವಮೊಗ್ಗ ಜಿಲ್ಲೆಯ ಸಾಗರದ ಕೊಪ್ಪ ವೆಂಕಟೇಶಯ್ಯನವರ ಮಗಳು. ಬದುಕಿನಲ್ಲಿ ಅನೇಕ ಸಂಕಟಗಳಿಂದ ನೊಂದು ಕಡೆಗೆ ಅಧ್ಯಾತ್ಮ ಪಾರಮಾರ್ಥಿಕದಂತಹ ವಿಷಯದತ್ತ ಯೋಚಿಸಲು ಆಕೆಗೆ ಪುಟ್ಟಯ್ಯನೆಂಬ ಸಾಧುವಿನ ಮೂಲಕ ಸಹಾಯವಾಯಿತು. ಈಕೆ ಕನ್ನಡ ಮರಾಠಿಗಳೆರಡರಲ್ಲಿಯೂ ಪದಗಳನ್ನು ರಚಿಸಿದ್ದಾಳೆ. ಈಕೆಯ ಅಂಕಿತ 'ಶಾಂತಿಲಾಲಿಪ ಗುರು' ಎಂಬುದಾಗಿದೆ. ಈಕೆಯ ಕೀರ್ತನೆಗಳು ಬಹುಪಾಲು ಭಕ್ತಿಪ್ರಧಾನವಾದ ವೈರಾಗ್ಯದ ಹಾಡುಗಳಾಗಿವೆ."[೫೧]

ದಾಸ ಸಾಹಿತ್ಯವು ತನ್ನ ಗೇಯ ಗುಣದಿಂದ ಜನಮಾನಸದಲ್ಲಿ ಉಳಿದು ಬೆಳೆದು ಬರುವಲ್ಲಿ ಕರ್ನಾಟಕದ ಮಹಿಳಾ ಹರಿದಾಸರ ಪಾತ್ರ ಅತ್ಯಂತ ಗಮನಾರ್ಹವಾದುದು.

ಮನೆ ಮನೆಯಲ್ಲಿ, ತಮ್ಮ ಜೀವನಗಳಲ್ಲಿ ಅಳವಡಿಸಿಕೊಳ್ಳುವ ಮೂಲಕ ಹರಿದಾಸ ಸಾಹಿತ್ಯವನ್ನು ಮುಕ್ತಿ ಸಾಹಿತ್ಯ ಸಾಧನವಾಗಿ ಪರಿಭಾವಿಸಿದ್ದಾರೆ. ದಾಸಸಾಹಿತ್ಯವು ಹಾಡುಗಳಲ್ಲಿ ಜೀವಂತವಾಗಿದ್ದು, ಹೆಚ್ಚಿನ ಪಾಲು ಮಹಿಳೆಯರ ಸಂಪ್ರದಾಯಗಳ ಪೂಜೆ, ನೇಮ, ವ್ರತಗಳಲ್ಲಿ ಮೌಖಿಕವಾಗಿ, ನಿರಕ್ಷರಿ ಗಳಲ್ಲೂ ರಚನೆಯ ಉತ್ಸಾಹ ತುಂಬಿದ್ದು ದಾಸ ಸಾಹಿತ್ಯದ ಹೆಗ್ಗಳಿಕೆ.

"ತಮ್ಮ ಹೆಸರನ್ನು ಓದಲು, ಬರೆಯಲು, ಬಾರದ ಅನೇಕ ಮಹಿಳಾ ಹರಿದಾಸರು ನಿರರ್ಗಳವಾಗಿ ತಮ್ಮ ರಚನೆಯಲ್ಲಿ ಕಾವ್ಯ ಪ್ರತಿಭೆಯನ್ನು ಮೆರೆದಿರುವುದು ಅತ್ಯಂತ ಸ್ತುತ್ಯಾರ್ಹವಾದುದು. ಇತ್ತೀಚಿನ ಮಹಿಳೆಯರು ಭಜನಾಮಂಡಳಿಗಳನ್ನು ಸಂಘಟಿಸಿಕೊಂಡು ಒಟ್ಟಾಗಿ ಪ್ರತಿನಿತ್ಯವು ಹಬ್ಬ ಹರಿದಿನಗಳಲ್ಲಿ ಹಾಡುವ ಪರಿಪಾಠ ಉಳಿಸಿಕೊಂಡಿದ್ದಾರೆ.

ಇಂತಹದ್ದೊಂದು ಸಾಂಘಿಕವಾದ ಪ್ರಯೋಗಶೀಲ ಲಕ್ಷಣವನ್ನು ಮಹಿಳಾ ಸಾಹಿತ್ಯದ ಅಧ್ಯಯನಕ್ಕೆ ಪೂರಕ ಅಂಶವೆಂದು ಕಾಣುತ್ತೇವೆ. ಈ ದಿಸೆಯಲ್ಲಿ ಗುಲ್ಬರ್ಗಾದ ಆಧುನಿಕ ಹರಿದಾಸ ಸಾಹಿತ್ಯದಲ್ಲಿ ಕಂಡು ಬರುವ ಮಹಿಳೆಯರಲ್ಲಿ, ಒದಗಿ ಬರುವ ಪರಿಸರ, ಅವರ ಕೃತಿಗಳನ್ನು ಇಲ್ಲಿ ನೋಡಬಹುದಾಗಿದೆ.

ಪ್ರತಿನಿತ್ಯದ ಬದುಕಿನಲ್ಲಿ ಆಚರಿಸುವ ಸಾಂಪ್ರದಾಯಿಕ ವಿಧಿ ವಿಧಾನಗಳಿಗೆ ಸಾಹಿತ್ಯಕ ರೂಪಕೊಟ್ಟವರು ಪದ್ಮಬಾಯಿ. ಇವರು ಮಧ್ವ ಸಿದ್ಧಾಂತವನ್ನು ಅಧ್ಯಯನ ಮಾಡಿದವರು. ಇವರು ಸಾಂಪ್ರದಾಯಕ ಪರಿಸರದಲ್ಲಿಯೇ ಅವರ ಸಾಹಿತ್ಯಶಕ್ತಿಯೂ ಪೂರಕವಾಗಿ ಬೆಳೆದು ಬಂದಿದೆ.

"ಪದ್ಮಾಬಾಯಿ, ಸುಮಾರು ೭ ಪ್ರಕಟಿತ ಸಂಕಲನಗಳು ಮತ್ತು ಅಪ್ರಕಟಿತ ಅಪಾರ ಸಾಹಿತ್ಯವನ್ನು ನೀಡಿದ್ದಾರೆ. ಮಹಿಳೆಯರಿಗಾಗಿ ಅನೇಕ ವ್ರತ ವಿಧಾನಗಳನ್ನೆಲ್ಲಾ ವಿಸ್ತಾರವಾಗಿ ರಚಿಸಿ ವ್ರತಕೋಶ ಕೈಪಿಡಿಯಂತೆ, ಈ ಆಚರಣೆಗಳೆಲ್ಲ ಒಂದು ಸಚಿತ್ರ ಪರಿಚಯದಂತೆ ಇಲ್ಲಿ ದೊರಕುತ್ತವೆ.

ಅನಂತರದಲ್ಲಿ ನಾವು ಇನ್ನೋರ್ವ ಮಹಿಳೆ, ಹರಿದಾಸ ಸಾಹಿತ್ಯವನ್ನು ರಚನೆ ಮಾಡಿದವರು. ದೊಡ್ಡಿಸುಧಾಭಾಯಿಯವರು. ಸುಮಾರು ೪೦೦ ಕೀರ್ತನೆಗಳನ್ನು, ಅನೇಕ ಸಂಕಲನಗಳನ್ನು ಹೊರ ತಂದಿದ್ದಾರೆ. ಸ್ವತಃ ರಚನೆದಾರರಾಗಿ, ಸಂಗ್ರಹಕರಾಗಿ, ಪ್ರಕಟಣೆಯಲ್ಲಿಯೂ ತಮ್ಮನ್ನು ತೊಡಗಿಸಿ ಕೊಂಡಿದ್ದಾರೆ. ಅಖಿಲಾ ಭಾರತ ಮಾಧ್ವ ಮಹಿಳಾ ಶಾಖೆಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿರುವರು."

ಕೀರ್ತನೆಯಂತೆ ಸಮೂಹ ಮಾಧ್ಯಮವಾದ ಭಜನೆಯು ಹರಿದಾಸ ಪಂಥದಲ್ಲಿ ಪ್ರಾಮುಖ್ಯತೆಯನ್ನು ಪಡೆದಿದೆ. ಶಾಂತಿಬಾಯಿ ಮಸ್ಕಿ, ಅವರು ಸುಮಾರು ಇಪ್ಪತ್ತು ವರ್ಷಗಳಿಂದ ನಿರಂತರವಾಗಿ ಭಜನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸ್ಥಳದಲ್ಲಿಯೇ ಕವಿತೆ ರಚಿಸುವ ಅಶುಕವಿತ್ವವನ್ನು ಹೊಂದಿರುವ ಶಾಂತಿಬಾಯಿ ಸಾವಿರಾರು ಕೃತಿಗಳನ್ನು ಎಡಬಿಡದೆ ಹಾಡುವಷ್ಟು ಅಪಾರ ಪ್ರೌಢಿಮೆಯು ಅವರದಾಗಿದೆ.

ಈಕೆಯ ಹಾಡುಗಳಲ್ಲಿ ಜಾನಪದ ಸತ್ವದ ಭಾಷೆ, ಸಹಜ ಕವಿತ್ವವು ಗುರುತಿಸುವಂತಹದ್ದಾಗಿದೆ ರಾಜ್ಯಮಟ್ಟದಲ್ಲಿ ಹಲವು ಗೀತ ಕಾರ್ಯಕ್ರಮಗಳಲ್ಲಿ ಜಯಶಾಲಿಯಾದ ಇವರು, ಪರಿಸರ ಪ್ರೇಮಿಗಳೂ ಆಗಿರುವರು.

ತಮ್ಮ ಅಶುಕವಿತ್ವದಲ್ಲಿ ತೊನೆಯುವ ತೆನೆಗಳ, ಪಕ್ಷಿಗಳ ಕಲರವರ ಎಲ್ಲವನ್ನೂ ತಮ್ಮ ಅನುಭವಗಳ ಮೂಲಕ ರಚಿಸಿದ್ದಾರೆ. ಈಗಲೂ ವೈಷ್ಣವ ಭಕ್ತಿಪಂಥದ ಜಾಡನ್ನೇ ಹಿಡಿದು ಹೊರಟರೆ,

ದಾಸ ಸಾಹಿತ್ಯವನ್ನು ಮುಂದುವರೆಸಿಕೊಂಡು ಬರುತ್ತಿರುವವರು. ಉಡುಪಿಯ ವಾದಿರಾಜಮಠ ಗಿರಿಬಾಲೆ, ಮೈಸೂರಿನ ವಿದ್ಯಾರಣ್ಯಪುರಂ ಜೀವುಬಾಯಿ, ಬೆಂಗಳೂರಿನ ಚಾಮರಾಜ ಪೇಟೆಯ ರಾಜಮಣಿಯವರನ್ನು ಹೆಸರಿಸಬಹುದು."[೧೨]

ಹೀಗೆ, ಹರಿದಾಸ ಸಾಹಿತ್ಯದಲ್ಲಿ ಮಹಿಳೆಯರು ತಮ್ಮ ರಚನೆಯಲ್ಲಿ ಭಕ್ತಿಯ ಭಾವವನ್ನೇ ಪ್ರಮುಖವಾಗಿಸಿಕೊಂಡರೂ, ಆ ಕೀರ್ತನೆಗಳಲ್ಲಿ ತತ್ವ, ನೇಮ, ಭಕ್ತಿ, ಶೃಂಗಾರ ಹಾಗೂ ವೈರಾಗ್ಯವನ್ನು ಸಂಗತಿಗಳಾಗಿ, ಸನ್ನಿವೇಶಗಳಾಗಿ ಬರಹದಲ್ಲಿ ಮೂಡಿಸುವಲ್ಲಿ ಒಬ್ಬೊಬ್ಬರೂ ಒಂದೊಂದು ವೈಶಿಷ್ಟ್ಯವನ್ನು ತನ್ಮೂಲಕ ಗುರುತಿಸಿಕೊಂಡಿದ್ದಾರೆ. ವೈಧವ್ಯದ ಬಿಸಿಯಲ್ಲಿ ಬಾಳು ಕಮರಲು ಬಿಡದೆ, ಭಕ್ತಿಯತ್ತ ತಮ್ಮ ಬದುಕಿನ ದಿಕ್ಕನ್ನು ಬದಲಾಯಿಸಿಕೊಂಡು ಭಕ್ತಿ ಪ್ರಾಧಾನ್ಯತೆಯಲ್ಲಿ ವೈರಾಗ್ಯವನ್ನು ಮೆರೆದರು. ಹರಿದಾಸ ಸಾಹಿತ್ಯವು ಈ ನಿಟ್ಟಿನಲ್ಲಿ ಮಹಿಳೆಯರ ಮೂಲಕ ವರ್ಣನಾ ಕೌಶಲ, ಸಂಪ್ರದಾಯಶೀಲತೆ ಹಾಗೂ ನವವಿಧಭಕ್ತಿಗಳೆಲ್ಲವನ್ನೂ ಅತ್ಯಂತ ಭಾವಪೂರ್ಣವಾಗಿ ವಿಷ್ಣುವಿನ ದಶಾವತಾರ, ಕೃಷ್ಣಲೀಲೆ, ಪುರಂದರ ದಾಸರ ಚರಿತ್ರೆ ಹೀಗೆ ಪುಂಖಾನುಪುಂಖವಾಗಿ ಹರಿಪಾರಮ್ಯತೆ ಸಾರುವ ವಿಶೇಷತೆಗಳನ್ನೇ ಹಾಡಿ ಹೊಗಳಿದ್ದಾರೆ. ಈ ಮೂಲಕ ವೈಷ್ಣವ ಪರಂಪರೆಯನ್ನು ಶ್ರೀಮಂತಗೊಳಿಸಿದ್ದಾರೆ.

**ಅಡಿಟಿಪ್ಪಣಿಗಳು**

೧. ಎಚ್ಕೆಸ್ಕೆ(ಸಂ), ದಾಸಸಾಹಿತ್ಯ ದರ್ಶನ, ೧೯೮೪, ಪು.೩೪೬

೨. ಹಣಮಂತ ತಾಸಗಾಂವಕರ, ಗಲಗಲಿ ಅವ್ವನವರ ಕೀರ್ತನೆಗಳು, ಪು.೩೦೫

೩. ಪೂರ್ವೋಕ್ತ, ಪು.೬

೪. ಪೂರ್ವೋಕ್ತ, ಪು.೩೩೨

೫. ಅದೇ, ಸಂಪುಟ ೭, ಪು.೧೮೨

೬. ಎಚ್ಕೆಸ್ಕೆ(ಸಂ), ದಾಸಸಾಹಿತ್ಯ ದರ್ಶನ, ೧೯೮೪, ಪು.೩೪೭

೭. ಉಷಾರಾಣಿ ಪಿ., ಹೆಳವನ ಕಟ್ಟೆ, ಗಿರಿಯಮ್ಮನ ಜೀವನ ಮತ್ತು ಕೃತಿಗಳು, ಅಪ್ರಕಟಿತ ಸಂಶೋಧನ ಕೃತಿ, ಪು.೪೧

೮. ಪವನಕುಮಾರ್ ಜಿ., ಹೂವ ಕೊಡೆ ತಾಯಿ, ಪು.೨೩

೯. ಅದೇ, ಪು.೨೩

೧೦. ಅದೇ, ಪು.೨೬

೧೧. ಅದೇ, ಪು.೨೫

೧೨. ಅದೇ, ಪು.೩೨

೧೩. ಇಂದುಬಾಯಿ ಟಿ.ಕೆ., ಹೆಳವನ ಕಟ್ಟೆ ಗಿರಿಯಮ್ಮನ ಹಾಡುಗಳು, ಪು.ಪೀಠಿಕೆ.Xiii

೧೪. ಅದೇ, ಪು.ಪೀಠಿಕೆ.xiv

೧೫. ಅದೇ, ಪು.ಪೀಠಿಕೆ.xvi

೧೬. ಅದೇ, ಪು.೪

೧೭. ಅದೇ, ಪು.xxiv

೧೮. ಅದೇ, ಪು.xxiv

೧೯. ಅದೇ, ಪು.xxiv

೨೦. ಅದೇ, ಪು.xxviii

೨೧. ಇಂದುಬಾಯಿ ಟಿ.ಕೆ., ಹೆಳವಕಟ್ಟೆ ಗಿರಿಯಮ್ಮನ ಹಾಡುಗಳು, ಪು.ಪೀಠಿಕೆ.xxiv

೨೨. ಅದೇ, ಪು.xxxii

೨೩. ಅದೇ, ಪು.xxxiii

೨೪. ಅದೇ, ಪು.xxxiv

೨೫. ಅದೇ, ಪು.xxxx

೨೬. ಅದೇ, ಪು.xxxvi

೨೭. ಅದೇ, ಪು.xxxix

೨೮. ನಂಜನಗೂಡು ತಿರುಮಲಾಂಬಾ(ಸಂ), ಮಹಿಳಾ ಹರಿದಾಸರ ಕೀರ್ತನೆಗಳು, ಸಮಗ್ರದಾಸ ಸಾಹಿತ್ಯ ಸಂಪುಟ, ಪು.೨೬

೨೯. ಅದೇ, ಪು.೩೮

೩೦. ಅದೇ, ಪು.೪೧

೩೧. ಅದೇ, ಪು.೫೦

೩೨. ಅಂಬಾಬಾಯಿ, ಸಮಗ್ರ ದಾಸಸಾಹಿತ್ಯ ಸಂಪುಟ, ಪು.೨೪

೩೩. ಅದೇ, ಪು.೧೧೩

೩೪. ಅದೇ, ಪು.೨೬

೩೫. ಅದೇ, ಪು.೭೮

೩೬. ಅದೇ, ಪು.೧೪೩

೩೭. ಅದೇ, ಪು.೨೫೮

೩೮. ಅದೇ, ಪು.೨೯

೩೯. ಅದೇ, ಪು.೩೩೭

೪೦. ಜೀವುಬಾಯಿ, ಸಮಗ್ರ ದಾಸಸಾಹಿತ್ಯ ಸಂಪುಟ, ಪು.ಪ್ರಸ್ತಾವನೆ.೨೫

೪೧. ಅದೇ, ಪು.೨೩

೪೨. ಅದೇ, ಪು.೨೪

೪೩. ಅದೇ, ಪು.೨೮

೪೪. ಅದೇ, ಪು.೧೦೮

೪೫. ಅದೇ, ಪು.೨೬

೪೬. ನಿಡಗುರುಕಿ ಜೀವೂಬಾಯಿಯವರ ಕೀರ್ತನೆಗಳು ಸಮಗ್ರದಾಸ ಸಾಹಿತ್ಯ ಸಂಪುಟ, ಪು.೭

೪೭. ಅದೇ, ಪು.೮೬

೪೮. ಅದೇ, ಪು.೧೧೭

೪೯. ಅದೇ,

೫೦. ಉಷಾರಾಣಿ ಪಿ., ಹೆಳವನ ಕಟ್ಟೆ, ಗಿರಿಯಮ್ಮನ ಜೀವನ ಮತ್ತು ಕೃತಿಗಳು, ಸಂಶೋಧನ ಕೃತಿ ಪು.೬೬ ಮತ್ತು ೬೭

೫೧. ಎಚ್ಚೆಸ್ಕೆ, ದಾಸ ಸಾಹಿತ್ಯ ದರ್ಶನ, ಪು.೩೫೪

೫೨. ಉತ್ತರ ಕನ್ನಡದ ಹರಿದಾಸರುಗಳು, ಪು.೫೪೧

## ಅಧ್ಯಾಯ ೩

# ಗಲಗಲಿ ಅವ್ವನವರ ಪರಿಸರ ಮತ್ತು ಇತಿವೃತ್ತ ವಿಚಾರ

೨

# ಗಲಗಲಿ ಅವ್ವನವರ ಪರಿಸರ ಮತ್ತು ಇತಿವೃತ್ತ ವಿಚಾರ

## ಧಾರ್ಮಿಕ ಪರಿಸರ

''ನಮಃಶ್ರೀಪಾದರಾಜಾಯ ನಮಸ್ತೆ ವ್ಯಾಸಯೋಗಿನೇ| ನಮಃ ಪುರಂದರರಾರ್ಯ ವಿಜಯಾರ್ಯ ಯತೇ ನಮಃ|'' ಎಂಬುದಾಗಿ ಆರಂಭಗೊಂಡ ಹರಿದಾಸ ಸಾಹಿತ್ಯವು ಅಪಾರವಾದ ಶಿಷ್ಯ ಪ್ರಶಿಷ್ಯ ಸಮೂಹದಿಂದಲೂ, ಕಾಲದೇಶಕ್ಕನುಗುಣವಾಗಿ ರಚನೆಯಾಗಿದೆ. ಸಮಾಜಮುಖಿಯಾಗಿ ಸ್ಪಂದಿಸುತ್ತಾ, ಜ್ಞಾನ, ಧರ್ಮ, ನೀತಿಗಳನ್ನು ಬಿತ್ತರಿಸಿದೆ. ದಾಸರು ಅನುಭವವೇದ್ಯವಾದ ನೀತಿಗಳನ್ನು ಭಗವಂತನಲ್ಲಿರುವ ಅನನ್ಯ ಭಕ್ತಿಯಿಂದ ಸರಳವಾಗಿ ಬೆರೆಯುವಂತೆ ಹಾಡಿದರು. ಈ ಮೂಲಕ ಜನಮಾನಸದಲ್ಲಿ ದಾಸಸಾಹಿತ್ಯ ನೆಲೆಯಾಯಿತು.

ಕೃಷ್ಣದೇವರಾಯನ ವೈಭವಯುತ ರಾಜ್ಯಾಡಳಿತದ ಸಮಯದಲ್ಲಿ ಶ್ರೀವ್ಯಾಸರಾಯರು, ಶ್ರೀಪಾದರಾಜರು, ವಾದಿರಾಜರಿಂದ, ಪುರಂದರದಾಸರು, ಕನಕದಾಸರಾದಿಯಾಗಿ ಹಲವಾರು ದಾಸಶ್ರೇಷ್ಠರು ಭಕ್ತಿಯನ್ನು ಸಮಾಜಮುಖಿಯಾಗಿ ಪರಿವರ್ತಿಸಿದರು. ಇದಾದ ನಂತರದಲ್ಲಿ ದಾಸಸಾಹಿತ್ಯದ ಶೂನ್ಯಕಾಲವೆಂದು ಕರೆಯುವ ಸಮಯ, ಆಗ ಕಾಖಂಡಕಿಯ ಮಹಿಪತಿದಾಸರಿಂದ ಮತ್ತೆ ಆರಂಭಗೊಂಡು ನಾಲ್ಕನೇ ಘಟ್ಟದ ದಾಸಸಾಹಿತ್ಯವು ವಿಜಯದಾಸರು, ಜಗನ್ನಾಥದಾಸರು ಮುಂತಾದವರಿಂದ ಪುನಃ ಪ್ರಚಾರ ಪಡೆಯಿತು. ಹೀಗೆ, ಸು.ಹದಿನಾಲ್ಕನೇ ಶತಮಾನದಿಂದ ಸು.ಹದಿನೇಳನೇ ಶತಮಾನದವರೆಗೂ ನಿರಾತಂಕವಾಗಿ ಜನಮಾನಸದಲ್ಲಿ ದಾಸಸಾಹಿತ್ಯ ಪ್ರವಹಿಸಿತು.

''ಕ್ರಿ.ಶ. ೧೫೬೫ರಲ್ಲಿ ನಡೆದ ರಕ್ಕಸತಂಗಡಗಿ ಯುದ್ಧದ ನಂತರ, ರಾಜ್ಯ ಶತ್ರುದಾಳಿಯಲ್ಲಿ ಲೂಟಿಯಾದಾಗ, ಹರಿದಾಸರು ಜೀವವುಳಿಸಿಕೊಳ್ಳಲು ದಿಕ್ಕೆಟ್ಟು ಓಡಿದರು.[೧]'' ಹೀಗೆ ಚದುರಿಹೋದ ಹರಿದಾಸರು ತಾವಿದ್ದ ಸ್ಥಳವನ್ನೇ ತಮ್ಮ ಕಾರ್ಯಕ್ಷೇತ್ರವಾಗಿಸಿದರು. ಅವುಗಳೆಂದರೆ, ಗದ್ವಾಲ.

ಕರ್ನೂಲ, ರಾಯಚೂರು, ಪ್ರಮುಖ ಹರಿದಾಸ ಕೇಂದ್ರಗಳಾದವು. ಇವರಲ್ಲಿ ಪ್ರಮುಖರು "ಶ್ರೀರಾಘವೇಂದ್ರ ಯತಿಗಳು 'ಮಂತ್ರಾಲಯ'ವನ್ನು ಕಾರ್ಯಕ್ಷೇತ್ರವಾಗಿಸಿಕೊಂಡು ಚದುರಿಹೋದ ಹರಿದಾಸರಿಗೆ ಆಶ್ರಯವಿತ್ತರು."[೨] ಅನಂತರದಲ್ಲಿ ಕ್ರಿ.ಶ. ೧೬೪೦ರಲ್ಲಿ ಮಹಿಪತಿದಾಸರು ದಾಸಸಾಹಿತ್ಯದಲ್ಲಿ ಕಂಡು ಬಂದಿದ್ದಾರೆ. ಇವರ ಸಮಕಾಲೀನರಲ್ಲಿ ಒಬ್ಬರು ಗಲಗಲಿ ಅವ್ವನವರು.

ಕೃಷ್ಣಾನದಿಯ ದಡದಲ್ಲಿನ ಗ್ರಾಮ 'ಗಲಗಲಿ' ಆಚಾರ್ಯ ಕುಟುಂಬದ ಗಲಗಲಿ ಅವ್ವನವರು ಪ್ರಪ್ರಥಮ ಮಹಿಳಾ ಹರಿದಾಸರು, 'ರಮಿಅರಸು' 'ರಾಮೇಶ' ಎಂಬ ಅಂಕಿತದ ಮೂಲಕ ಕೀರ್ತನ ಸಾಹಿತ್ಯ ರಚನೆ ಮಾಡಿದ್ದಾರೆ. ಆ ಗ್ರಾಮದ ಬ್ರಾಹ್ಮಣ ಹೆಣ್ಣುಮಕ್ಕಳು ಪ್ರತಿದಿನ 'ಕೃಷ್ಣಾ' ನದಿ ಸ್ನಾನದ ನಂತರ ಭಕ್ತಿಯಿಂದ ಹಾಡಿಕೊಳ್ಳುತ್ತಿದ್ದ ಹಾಡುಗಳೇ ಅವ್ವನವರ ಕೀರ್ತನೆಗಳು. ಅವರಿಗೆ ಕಂಠಸ್ಥವಾದ ಹಾಡುಗಳು, ಬಾಯಿಪಾಠ ಮುಖೇನ ಶ್ರದ್ಧೆ ಭಕ್ತಿಯಿಂದ ಹಾಡಿಕೊಳ್ಳುತ್ತಿದ್ದರು. ಇದು ಅಂದು ರೂಢಿಯಲ್ಲಿದ್ದ ತೊಂಡಿ ಸಂಪ್ರದಾಯ.

ಅವ್ವನವರ ಕುರಿತು ಇತಿವೃತ್ತ ವಿಚಾರವಾಗಿ ಹೆಚ್ಚು ವಿಚಾರಗಳು ತಿಳಿಯಲು ಸಾಧ್ಯವಾಗುತ್ತಿಲ್ಲ. ಆದರೂ ಕತ್ತಲಲ್ಲಿ ಬೆಳಕಿನ ಎಳೆಯಂತೆ ಪ್ರಥಮವಾಗಿ ಕ್ರಿ.ಶ.೧೯೨೭ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿದುದು ಬೆಳಗಾವಿಯ ರಾಯತತ್ತ್ವ ಪ್ರಕಾಶನದ ಮೂಲಕ. ಶಂಕರ ಆಬಾಜಿ ಸಾವಂತರವರು ಬಾಲಬೋದ ಲಿಪಿಯಲ್ಲಿರುವ ಪ್ರಥಮ ಭಾಗ ೧ ಮಾತ್ರ ಪ್ರಕಟಿಸಿದರು. ೧೯೫೦ರಲ್ಲಿ ಧಾರವಾಡದ ಡಾ. ಸರೋಜಿನಿ ಮಹಿಷಿಯವರು ತಮ್ಮ(ಕರ್ನಾಟಕ ಕವಯತ್ರಿಯರು) ಮಹಾಪ್ರಬಂಧದಲ್ಲಿ ಅಜ್ಞಾತ ಮಹಿಳಾ ಹರಿದಾಸರಲ್ಲಿ ಗಲಗಲಿ ಅವ್ವನವರನ್ನು ಪ್ರಸ್ತಾಪಿಸಿ ರಾಮತತ್ತ್ವ ಪ್ರಕಾಶನದ ಬಾಲಬೋಧ ಲಿಪಿ ಆಧರಿಸಿಯೇ ಬರೆದರು. ಆದರೆ ಅವ್ವನವರ ಸಾಹಿತ್ಯ ರಚನೆಯ ಕುರಿತು ಹೆಚ್ಚು ಪ್ರಚಾರವಾಗಲಿಲ್ಲ. ಅನಂತರ, ಅವ್ವನವರ ವಂಶಜರಾದ ಸಂಸ್ಕೃತ ಪಂಡಿತರಾದ ಪಂಡರಿನಾಥಾಚಾರ್ಯ ಗಲಗಲಿಯವರು ಕಷ್ಟಪಟ್ಟು ಸಂಗ್ರಹಿಸಿದ "ಮಾಧ್ವವಾಙ್ಮಯ ತಪಸ್ವಿಗಳು" ಎಂಬ ಬೃಹತ್ ಕನ್ನಡ ಗ್ರಂಥದಲ್ಲಿಯೂ ಅವ್ವನವರ ಕುರಿತು ಒಂದಿಷ್ಟು ಪರಿಚಯ ಮಾತ್ರ ಮಾಡಿದರು. ಆದರೆ ಈ ಮಹಿಳಾ ಹರಿದಾಸರ ರಚನೆಯ ಕುರಿತು ಸಂಸ್ಕೃತ ಭಾಷಾ ಪಂಡಿತರ ಹೆಣ್ಣುಮಗಳೊಬ್ಬಳ ಬದುಕು-ಬರಹಗಳ ಕುರಿತು ಯಾರೊಬ್ಬರೂ ವಿವರವಾಗಿ ದಾಖಲಿಸಲಿಲ್ಲ. ಇದಕ್ಕೆ ಮಹಿಳೆಯರ ರಚನೆ ಎಂತಲೋ ಹಾಗೂ ಕನ್ನಡ ಭಾಷೆಯ ರಚನೆ ಎಂಬದೋ, ಒಟ್ಟಾರೆ ಅವ್ವನವರ ಕೀರ್ತನೆಗಳು ಬೆಳಕಿಗೆ ಬರಲಿಲ್ಲ. ಗಂಭೀರ ಅಧ್ಯಯನಕ್ಕೆ ಒಳಗಾಗಲಿಲ್ಲ. ಈ ನಿಟ್ಟಿನಲ್ಲಿ ಶ್ರೀಯುತ ಹಣಮಂತ ತಾಸಗಾಂವಕರ ಅವರು ಸಂಪಾದಿಸಿದ "ಗಲಗಲಿ ಅವ್ವನವರ ಕೀರ್ತನೆಗಳು" ಕೃತಿಯೇ ದಾಸಸಾಹಿತ್ಯ ಸಂಪುಟದಲ್ಲಿ ಪ್ರಕಟಗೊಂಡಿರುವ ಆಕರ ಕೃತಿ ಎಂದು ಭಾವಿಸಬಹುದು.

## ಅಪ್ಪನವರ ಪರಿಸರ

"ಗಾಲವ" ಮಹರ್ಷಿಗಳು ತಪಸ್ಸು ಮಾಡಿದ ಸ್ಥಳವಾದ್ದರಿಂದ ಗಲಗಲೆ, ಗಲಗಲಿ ಮಂಗಲಿಗೆ, ಈಗ ಗಲಗಲಿ ಗ್ರಾಮ ಎಂಬುದಾಗಿ ಕರೆಯುತ್ತಾರೆ. ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲೂಕಿನ ಪುಟ್ಟ ಗ್ರಾಮ ಗಲಗಲಿ, ಕೃಷಿ ಪ್ರಧಾನವಾದುದು. ಕೃಷ್ಣಾನದಿ ತೀರದಲ್ಲಿರುವ ಗಲಗಲಿ ಗ್ರಾಮ ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಮುಳುಗಡೆಯಾಗಲಿರುವ ಗ್ರಾಮಗಳಲ್ಲಿ ಗಲಗಲಿಯೂ ಸೇರುವುದು ಈ ಕಾರಣದಿಂದ ಸ್ಥಳಾಂತರವಾಗುವುದರಲ್ಲಿದೆ.

ಮಾಧ್ವ ಸಂಪ್ರದಾಯದಲ್ಲಿ ಆಚಾರ್ಯ ಪರಂಪರೆಯೆಂದು ಹೆಸರಾದವರು ಗಲಗಲಿ ವಂಶಸ್ಥರು. ತಲೆ ತಲಾಂತರಗಳಿಂದಲೂ ಗಲಗಲಿ ಆಚಾರ್ಯ ವಂಶಸ್ಥರು ವಿದ್ವಾಂಸರು, ಋಷಿಗಳು, ಗಲಗಲಿ ಪಂಡಿತರೆಂದೇ ನಾಡಿನಲ್ಲಿ ಪ್ರಸಿದ್ಧರು. ಪಾಂಡಿತ್ಯವು ಇವರ ವಂಶಜರಿಗೆ ವಂಶಪಾರಂಪರ್ಯವಾಗಿಯೇ ದಕ್ಕಿರುವಂತಹದ್ದು. ಇದಕ್ಕೆ ಪೂರಕವಾಗಿ ಅನೇಕ ರಾಜರಿಂದಲೂ ಮನ್ನಣೆ, ಪುರಸ್ಕಾರಗಳನ್ನು ಪಡೆದಿರುವುದು ತಿಳಿಯುತ್ತದೆ. ಆದಿಲ್‌ಷಾಹಿ ನಿಜಾಮರು, ಪೇಶ್ವೆ, ಮರಾಠರು, ರಾಣಿ ಸರಕಾರ, ಮೈಸೂರು ಅರಸರಿಂದಲೂ ಹಾಗೂ ಇದೀಗ ಭಾರತ ಸರಕಾರದಿಂದಲೂ ಅನೇಕ ಜಹಗೀರುಗಳು ಮತ್ತು ವರ್ಷಾಸನ ಬಿರುದು ಬಾವಲಿಗಳು ಅವ್ಯಾಹತವಾಗಿ ಇವರ ಮನೆತನಕ್ಕೆ ಲಭ್ಯವಾಗಿವೆ. ಐತಿಹ್ಯದಂತೆ ಗಲಗಲಿ ವಂಶದ ಮೂಲಪುರುಷರು ಶ್ರೀ ಕೂರ್ಮತೀರ್ಥರು ಎನ್ನಲಾಗಿದೆ. ಇವರು ಮಹಾವಿರಕ್ತರು, ಮಹಾಯೋಗಿಗಳು, ವೇದಾಂತ ಶಾಸ್ತ್ರದಲ್ಲಿ ವಾಚಸ್ಪತಿ ಅಪ್ರತಿಮರು ಹಿಮಾಲಯದವರೆಗೂ ಸಂಚರಿಸಿ ಮಾಧ್ವಮತ ಪ್ರಸಾರ ಮಾಡಿದವರು. ಭಾರತದಾದ್ಯಂತ ಸಂಚರಿಸುತ್ತಾ ಬದರಿಯಾತ್ರೆ ಮಾಡುತ್ತಾ, ಅಲ್ಲಲ್ಲಿ ವೈಷ್ಣವ ಕೇಂದ್ರಗಳನ್ನು ಸ್ಥಾಪಿಸುತ್ತಾ ಏಕಚಕ್ರನಗರಕ್ಕೆ ಬಂದಾಗ ಅಲ್ಲಿಯೇ ವೈಕುಂಠವಾಸಿಗಳಾದರು. ಆದರೆ ಇವರ ಕಾಲ, ಸ್ಥಳ ಕುರಿತು ಇತ್ಯಾದಿಗಳಾವುವು ದೊರೆತಿಲ್ಲ.

ಇದೇ ವಂಶದ ಶ್ರೀಪತಿ ಹಾಗೂ ನರಸಿಂಹಶೂರ ಎಂಬಿಬ್ಬರು ಸಹೋದರರು ಗೋದಾವರಿ ತೀರದ 'ಗಂಗಾಖೇಡ'ದಲ್ಲಿ ದೊಡ್ಡ ಜಹಗೀರುದಾರರಾಗಿದ್ದರು. ರಾಜರುಗಳಿಗೆ ಯುದ್ಧಕಾಲದ ಸೈನಿಕ ಸಹಾಯ ಮಾಡುವ ಯೋಧರಾಗಿದ್ದರು. ಒಮ್ಮೆ ವಿಜಾಪುರದ ಎರಡನೇ ಇಬ್ರಾಹಿಂ ಆದಿಲ್‌ಷಾಹಿ (ಕ್ರಿ.ಶ. ೧೫೮೦-೧೬೨೬) ನೆರವಿಗೆಂದು ಹೊರಟಾಗ, ಹತ್ತಿರದಲ್ಲಿ 'ಯಕ್ಕುಂಡಿ' ಎಂಬ ಗ್ರಾಮದಲ್ಲಿ ಶಿಷ್ಯರಿಗೆ ಪಾಠಪ್ರವಚನ ಮಾಡುತ್ತಿದ್ದ ಗಂಭೀರಭಾವದ ಯತಿಯೋರ್ವರನ್ನು ಕಂಡು ಅವರಿಗೆ ದೀರ್ಘದಂಡ ನಮಸ್ಕಾರ ಮಾಡಿದರು. ಆ ಯತಿಗಳೇ ಯಾದವಾರ್ಯರು, ಸೈನಿಕ ವೇಷಧರಿಸಿದ ಸಹೋದರರು, ಚಿಲಖತ್ತು, ಶಿರಸ್ತ್ರಾಣ ಧರಿಸಿದ್ದು, ತಮ್ಮನ್ನು ಪರಿಚಯಿಸಿಕೊಂಡರು. ಯತಿಗಳು ಅವರ ಪೂರ್ವ ವೃತ್ತಾಂತವನ್ನು ತಿಳಿದು, ಶ್ರೀ ಕೂರ್ಮತೀರ್ಥರ, ವಂಶಜರಾದವರಿಗೆ ಈ ಸೈನಿಕ ರೂಪ, ಶಸ್ತ್ರಾಸ್ತ್ರಗಳು

ಭೂಷಣವಲ್ಲ ಎಂದರು. ನೀವು ಮುಂದೆ ಮಾಧ್ವಮತದ ಸಿದ್ಧಾಂತದ ಪ್ರಚಾರಕಾರ್ಯದಲ್ಲಿ ಮುಂದುವರೆದು, ಆಧ್ಯಾತ್ಮದ ವಿಷಯಗಳನ್ನು ಸಂಪೂರ್ಣ ತಿಳಿಯಿರಿ ಎಂಬುದಾಗಿ ಉಪದೇಶಿಸಿದರು. ಅನಂತರ ಈ ಸಹೋದರರು ಶ್ರೀ ವಿದ್ಯಾಧೀಶರಿಂದ ಮಂತ್ರೋಪದೇಶ ಪಡೆದು ಜನ್ಮಸಾರ್ಥಕವ ಪಡೆದರು.

ಶ್ರೀಯಾದವಾರ್ಯರ ಉಪದೇಶದಿಂದ ಸಹೋದರರಿಬ್ಬರೂ ಮನಪರಿವರ್ತಿತರಾಗಿ ಸಕಲ ರಾಜ ವೈಭೋಗಗಳನ್ನೆಲ್ಲಾ ಬಿಟ್ಟು, ಮಾಧ್ವಮತದ ಪ್ರಸಾರಕ್ಕೆ ತಮ್ಮ ಜೀವನವನ್ನು ಮುಡಿಪಾಗಿಟ್ಟರು. ಆ ಮೂಲಕ ನಿಜ ಬದುಕಿನ ನೆಲೆಯನ್ನು ಅರಸುತ್ತಾ ಕ್ಷೇತ್ರಸ್ಥಳವಾದ ಶೂರ್ಪಾಲಿಗೆ ಬಂದರು. ಕೃಷ್ಣಾನದಿ ತೀರದ ಪುರಾತನ ನರಸಿಂಹ ದೇವಾಲಯ, ಎದುರಿನಲ್ಲಿ ಅಶ್ವತ್ಥಕಟ್ಟೆ ಸುತ್ತೆಲ್ಲಾ ಬಿದುರಿನ ಮೆಳೆ, ಆಲ ಹುಣಿಸೆ, ಬೇವು, ಮಾವು ಮರಗಳು ನಿಬಿಡವಾಗಿ ಬೆಳೆದಿದ್ದವು. ಆದ್ದರಿಂದ ಈ ಕ್ಷೇತ್ರಕ್ಕೆ ಪರ್ಯಾಯ ಹೆಸರು 'ಮರನೂರು' ಎಂಬುದಾಗಿದೆ.

ಶ್ರೀಕ್ಷೇತ್ರ ಶೂರ್ಪಾಲಿಯಲ್ಲಿ ಪೀಠಸ್ಥರಾಗಿದ್ದ ವಿದ್ಯಾಧೀಶ ತೀರ್ಥರು ಈ ಸಹೋದರರಿಬ್ಬರನ್ನು ಅನುಗ್ರಹಿಸಿ ಉಪದೇಶ, ತಪ್ತಮುದ್ರಾಧಾರಣ ಮಾಡಿದರು. ಹೀಗೆ ಮುದ್ರಾಧಾರಣ ಹೊಂದಿದ ಸಹೋದರರಿಬ್ಬರೂ ಆಧ್ಯಾತ್ಮ ವಿಷಯಗಳ ಅನುಸರಿಸಿ ಋಷಿಜೀವನ ನಡೆಸುತ್ತಾ ಸಾರ್ಥಕತೆ ಪಡೆದರು. ಇವರಲ್ಲಿಯ ಗೋವಿಂದಾಚಾರ್ಯರು 'ಶ್ರೀ'ಗಳ ಆದೇಶದಂತೆ ಒಮ್ಮೆ 'ಗಾಲವ' ಕ್ಷೇತ್ರ ಗಲಗಲಿ ಗ್ರಾಮಕ್ಕೆ ಹೊರಟಿದ್ದರು. ಆಗ ಅಶ್ವತ್ಥ ಮತ್ತು ನರಸಿಂಹ ದೇವರಿಗೆ ಪ್ರದಕ್ಷಿಣೆ ಹಾಕುತ್ತಿರುವಾಗ, ಅಶ್ವತ್ಥ ಮರದ ಟೊಂಗೆಯೊಂದು ಅವರ ಮುಂದೆ ಮುರಿದು ಬಿದ್ದಿತು. ಇದನ್ನು ಕಂಡ ಶ್ರೀಗಳು, ಶೂರ್ಪಾಲಿಯ 'ನರಸಿಂಹದೇವರು' ಭಕ್ತರನ್ನು ಅನುಗ್ರಹಿಸಲೆಂದು ಭಕ್ತರಿದ್ದಲ್ಲಿಗೆ ಬರಲು ಬಯಸಿದಂತೆ ತೋರುತ್ತಿದೆ. ಈ ಟೊಂಗೆಯನೊಯ್ದು ಗಲಗಲಿಯಲ್ಲಿ ನೆಟ್ಟು ಪೋಷಿಸಿರಿ ಎಂದು ನುಡಿದರು.

ಶ್ರೀಗಳ ಆದೇಶದಂತೆ ಗಲಗಲಿಯಲ್ಲಿ ನೆಟ್ಟು ಪೋಷಿಸಿದ ಅಶ್ವತ್ಥಮರ ಇಂದು ದೊಡ್ಡದಾಗಿ ಬೆಳೆದು ಹೆಮ್ಮರವಾಗಿದೆ. ಅದೇ ರೀತಿ ಗಲಗಲಿ ವಂಶಸ್ಥರೂ ದಿನದಿಂದ ದಿನಕ್ಕೆ ಗಲಗಲಿ ಆಚಾರ್ಯ ವಂಶಜರಾಗಿ ಮುಂದೆ ಉನ್ನತವಾಗಿ ಬಾಳಿ ಬದುಕಿದರು.

ಶೂರ್ಪಾಲಿ ಕ್ಷೇತ್ರದಲ್ಲಿ ಆಚರಿಸುವಂತೆಯೇ ಗಲಗಲಿ ಗ್ರಾಮದಲ್ಲಿಯೂ ವೈಶಾಖ ದಶಮಿಯಿಂದ ಪೌರ್ಣಮಿಯವರೆಗೆ ನರಸಿಂಹ ಜಯಂತಿ, ಉತ್ಸವ ರಥೋತ್ಸವಗಳು, ಆಗಮೋಕ್ತ ಆಚರಿಸುವರು ಗಲಗಲಿಯ ಮನೆತನ ಅನೇಕ ವಿದ್ಯಾರ್ಥಿಗಳಿಗೆ ಆಶ್ರಯವಿತ್ತು ವಿದ್ಯಾದಾನ ಮಾಡುವ ಪ್ರವಚನ ಕೇಂದ್ರವಾಗಿತ್ತು. "ಶ್ರೀಮನ್‌ನ್ಯಾಯ ಸುಧಾಕ್ಕೆ ಪಂಚರತ್ನಸ್ತಬುಕವೆಂಬ" ಅಪೂರ್ವ ವ್ಯಾಖ್ಯೆ ಬರೆದ ವಿದ್ಯಾಪಾರಂಗತರು ಇವರ ವಂಶಸ್ಥರು. ಇಂತಹ ಪಂಡಿತ ಪರಂಪರೆಯ ಮುದ್ಗಲಾಚಾರ್ಯರು 'ಗಲಗಲಿ'ಯಲ್ಲಿ ವಾಸವಾಗಿದ್ದು ತಮ್ಮ ಸ್ವಯಿಚ್ಛಾನುಸಾರವಾಗಿ ಶಿಷ್ಯರನ್ನು ಪೋಷಿಸುತ್ತಿದ್ದರು.

''ಕೃಷ್ಣವೇಣಿ ಪವಿತ್ರಾಣಿ ತವದಾರೀಣಿ ಸೇವತೆ ಎಂದು 'ವರ ಕೃಷ್ಣಾನದಿ ತೀರೆ'ಯಲ್ಲಿ ನೆಲೆಸಿ ಆ ಗ್ರಾಮವನ್ನು ತಪೋಭೂಮಿಯಾಗಿಸಿದ್ದರು.[೩]'' ಶ್ರೀವಾದಿರಾಜತೀರ್ಥರ ಪರ್ಯಾಯದಲ್ಲಿ ಮುನ್ನೂರು ಜನ ಶಿಷ್ಯರೊಡನೆ ಮುದ್ಗಲಾಚಾರ್ಯರು ಉಡುಪಿಗೆ ಬಂದು ಗುರುರಾಜರ ಅನುಗ್ರಹಕ್ಕೆ ಪಾತ್ರರಾದರು. ಆಚಾರ್ಯರ ಅನನ್ಯ ಹರಿಭಕ್ತಿ, ತಪೋನಿಷ್ಠೆ, ಶಾಸ್ತ್ರಪಾಂಡಿತ್ಯ, ಪ್ರವಚನಪಟುತ್ವ ಇತ್ಯಾದಿಗಳ ಗುಣನಿಧಿಯಾಗಿರುವುದನ್ನು ತಿಳಿದರು. ಅತ್ಯಂತ ಆನಂದದಿಂದ ತಾವು ಪೂಜಿಸುತ್ತಿದ್ದ ''ಶ್ರೀ ರುಕ್ಮಿಣಿ ಸತ್ಯಭಾಮ ಸಮೇತ ಗೋಪಾಲಕೃಷ್ಣ''ರ ಪ್ರತಿಮೆಯನ್ನು ನೀಡಿ ಅನುಗ್ರಹಿಸಿದರು. ಅನಂತರ ''ಶ್ರೀ ಸತ್ಯಪೂರ್ಣತೀರ್ಥ''ರು ಆಚಾರ್ಯರನ್ನು ಆಸ್ಥಾನ ವಿದ್ವಾಂಸರೆಂದು ಪರಿಗಣಿಸಿ ಮುದ್ಗಲಾಚಾರ್ಯರಿಗೆ ವಿಶೇಷ ಪುರಸ್ಕಾರ ನೀಡಿ ಸನ್ಮಾನಿಸಿದರು. ಮುದ್ಗಲಾಚಾರ್ಯರು ಅದ್ವೈತ ಕುಠಾರ ನ್ಯಾಯ ಗ್ರಂಥಗಳಲ್ಲದೆ, ೧೪ ಅಷ್ಟಕಗಳನ್ನು ರಚಿಸಿದ್ದಾರೆ. ಹೀಗೆ ಪಾಂಡಿತ್ಯದಿಂದ ಹೆಸರಾದ ಶ್ರೀ ಮುದ್ಗಲಾಚಾರ್ಯರ ವಂಶಜರು ಅನೇಕ ಬಿರುದು ಬಾವಲಿಗಳನ್ನು ಪಡೆದು ಯತಿಗಳಂತೆ ಬಾಳಿದವರು. ತಮ್ಮ ಜ್ಞಾನಶಕ್ತಿಯಿಂದ, ತಪಃ ನಿಷ್ಠೆಯಿಂದಲೂ ತಮ್ಮೊಡನಿರುವ ಶಿಷ್ಯವೃಂದಕ್ಕೆ ವಿದ್ಯಾದಾನ ನೀಡುತ್ತಿದ್ದರು. ಸುತ್ತಲಿನ ಪ್ರದೇಶದಲ್ಲಿ ಎಲ್ಲ ಜನರಿಂದಲೂ ಪುರಸ್ಕೃತರಾಗಿ ಚಾಮರ, ಪಲ್ಲಕ್ಕಿ ಸೇವೆಯ ಜೊತೆಗೆ ಇನಾಮು, ಭೂದಾನಗಳನ್ನು, ವರ್ಷಾಸನಗಳನ್ನು ಹಾಗೂ ಭಕ್ತರ ಸೇವೆಯನ್ನು ಪಡೆದವರು.

ಇಂತಹ ಪ್ರಕಾಂಡ ಪಂಡಿತೋತ್ತಮರ ಧಾರ್ಮಿಕ ಪರಿಸರದಿಂದಲೂ ಸಂಪ್ರದಾಯನಿಷ್ಠ ಜಪ, ತಪ, ಭಕ್ತಿಯ ನಿರೂಪಣೆಗಳಿಂದಲೂ ಶ್ರೀಮಂತವಾದ ಜ್ಞಾನ ಸದೃಶ ವ್ಯಕ್ತಿತ್ವ ಪಡೆದುಕೊಂಡವರು ಗಲಗಲಿ ಅವ್ವನವರು. ಅವ್ವನವರ ಪತಿ ಮುದ್ಗಲಾಚಾರ್ಯರು. ಆದರೆ ಗಲಗಲಿ ಮನೆತನದ ವಂಶಸ್ಥರಲ್ಲಿ ಮೂವರು ಮುದ್ಗಲಾಚಾರ್ಯರು ಬರುತ್ತಾರೆ. ಈ ಮೂವರಲ್ಲಿ ಅವ್ವನವರ ಪತಿಯ ಕಾಲ ನಿರ್ಣಯದ ವಿಷಯ ಸಂದಿಗ್ಧವಾಗಿದೆ.

೧. ಬಾಗಲಕೋಟೆಯ ಅಪರೋಕ್ಷಜ್ಞಾನಿಗಳೆಂದು ಪ್ರಸಿದ್ಧಿ ಪಡೆದ ಶ್ರೀ ಪ್ರಸನ್ನ ವೆಂಕಟದಾಸರು. ಪಂಡಿತೋತ್ತಮರಾದ ಶ್ರೀ ಮುದ್ಗಲಾಚಾರ್ಯರ ಶಿಷ್ಯರು ಇವರು ಹೇಳುವಂತೆ 'ಭಜಿಸಿ ಬದುಕೆಲೊ ಮುದ್ಗಲಾರ್ಯರನು' ಎಂದಿರವರು. ಇನ್ನೊಂದು ಅಷ್ಟಕದಲ್ಲಿ ''ಶ್ರೀ ಗುರೋರು ಮಾನಸಾಂಬುಜಾಲ ಯೋದಯೋಧಧಿಃ' ಹಾಗೂ ''ನಿಮ್ಮ ಭೃತ್ಯರ ಭೃತ್ಯರ ಪರಿಚಾರಕನಾ ಸನ್ಮಾರ್ಗದಿ ಸಿಕ್ಕಿಸೆನ್ನನು'' ಎಂದಿದ್ದಾರೆ.

೨. ಕರ್ಜಗಿಯ ಗೋಪಾಲದಾಸರು ತಮ್ಮ ಹಾಡಿನಲ್ಲಿ

''ಧಾತ್ರಿಯೊಳಗೆ ವಿಚಿತ್ರ ಗಾಲವ ಕ್ಷೇತ್ರದಲ್ಲಿಹ
ಮುದ್ಗಲಾರ್ಯರ ಪುತ್ರಪೌತ್ರ ಪ್ರಪೌತ್ರರ್ಲೊಲು
..........................................

.......................................................

ಅಭಿನಮಿಸಿ ವರಗಳ ಬೇಡುವೆ, ವಂದನೆ ಬೇಡುವೆ''

ಇಂತಹ ತಪಃಪ್ರಭಾವಿ ಗುರುಗಳಾದ ಮುದ್ಗಲಾರ್‍ಯರು ಒಮ್ಮೆ 'ಗಯಾ' ಕ್ಷೇತ್ರದಲ್ಲಿ ಶಿಷ್ಯರೊಂದಿಗೆ ಪ್ರವಾಸದಲ್ಲಿದ್ದಾಗ, ನೋಡುತ್ತಿರುವಂತೆಯೋ, 'ಫಲ್ಗು' ನದಿಯು ಕ್ಷೀರ ನದಿಯಾಗಿ ಹರಿದಳಂತೆ!''

೨. ಪಂಡರಾಪುರದ 'ಪಾಂಡುರಂಗ' ಗಲಗಲಿ ವಂಶಜರ ಮನೆದೈವ. ಒಮ್ಮೆ ವಯೋವೃದ್ಧರಾದ ಮುದ್ಗಲಾಚಾರ್‍ಯರು ಪಾಂಡುರಂಗನ ದರ್ಶನಾಕಾಂಕ್ಷಿಗಳಾಗಿ ಪಂಡರಾಪುರಕ್ಕೆ ಹೋದರು. ಜನ ಸಂದಣಿಯಲ್ಲಿ ಏಳುತ್ತಾ, ಬೀಳುತ್ತಾ ಬರುತ್ತಿರುವುದನ್ನು ಕಂಡು, "ತ್ರಿವಾರಮ ಹಸತ ಶ್ರೀ ಪಾಂಡರಂಗೋ ಹರಿಃ'' ಎಂದರೆ, ಪಾಂಡುರಂಗನು ಮುದ್ಗಲಾಚಾರ್‍ಯರನ್ನು ಕಂಡು ಮೂರಾವರ್ತಿ ನಕ್ಕನಂತೆ!''[೪] ಹೀಗೆ ದರ್ಶನಾಪೇಕ್ಷಿಯಾದ ಆಚಾರ್‍ಯರಿಗೆ ಪಂಡರಾಪುರದಲ್ಲಿ ಪಾಂಡುರಂಗನ ದರ್ಶನ ಲಭಿಸಲಿಲ್ಲ. ಮನನೊಂದು ಮರಳಿ ಕುಪ್ಪೇಲೂರ ಗ್ರಾಮಕ್ಕೆ ಹಿಂದಿರುಗಿ ಬಂದರು. ಆದರೆ ಅವರ ಮನೆಯ ಪಾಯಸದ ಪಾತ್ರೆಯಲ್ಲಿ ಆಚಾರ್‍ಯರರಿಗೆ ಪಾಂಡುರಂಗ ದರ್ಶನವಿತ್ತನಂತೆ. ಇಂದಿಗೂ 'ಪಾಯಸ ವಿಠಲ' ಅವರ ವಂಶೀಯರಲ್ಲಿ ಪೂಜೆಗೊಳ್ಳುತ್ತಲಿದೆ. ಹೀಗೆ ಮೂವರು ಮುದ್ಗಲಾಚಾರ್‍ಯರು ಗಲಗಲಿ ಮನೆತನದ ವಂಶಾವಳಿಯಲ್ಲಿ ಕಾಣಬರುತ್ತಾರೆ. ಈಗಾಗಲೇ ದೊರೆತ ಕೆಲವಾರು ಬಖೈರು, ಸನದುಗಳು, ಮೋಡಿಲಿಪಿಯಲ್ಲಿದ್ದು, ಇಬ್ಬರ ಕಾಲಮಾನಗಳು ಬೇರೆಯಾಗಿರುತ್ತವೆ. ಬಹುಶಃ ಇಬ್ಬರಿಗಿಂತಲೂ ಮೊದಲೊಬ್ಬರು ಮುದ್ಗಲಾಚಾರ್‍ಯರು ಆಗಿಹೋಗಿದ್ದಾರೆ. ಅವರೇ ಅವ್ವನವರ ಪತಿ ಎಂದೆನ್ನುವರು. ಶ್ರೀಯುತ ಹಣಮಂತ ತಾಸಗಾಂವಕರರು. ಮುದ್ಗಲಾಚಾರ್‍ಯರು ಅತ್ಯಂತ ದೈವಭಕ್ತಿಯಿಂದ ಸುತ್ತಲಿನ ಪರಿಸರದಲ್ಲಿ 'ಅಪ್ಪನವರು' ಎಂದೇ ಗೌರವಿಸುವ ಹಿರಿಯರು, ಪಂಡಿತೋತ್ತಮರು. ಇಂದಿಗೂ ಅಲ್ಲಿನ ನರಸಿಂಹ ದೇವಾಲಯದಲ್ಲಿ ಅವರು ಒರುಗುತ್ತಿದ್ದ ಮುದ್ರಾಧಾರ ಮಣೆ (ಹಲಗೆ)ಯು ಪೂಜೆಗೊಳ್ಳುವುದು. ಆಚಾರ್‍ಯರ ಅಪಾರವಾದ ದೈವಭಕ್ತಿಯು ಜನಸಾಮಾನ್ಯರಲ್ಲಿ ದೈವಶ್ರದ್ಧೆಯನ್ನುಂಟು ಮಾಡುವಂತಹ ಪ್ರಭಾವಿ ವ್ಯಕ್ತಿತ್ವವಾಗಿತ್ತು.

## ಅವ್ವನವರ ಇತಿವೃತ್ತ ವಿಚಾರ

ಬಾಗಲಕೋಟೆ ಜಿಲ್ಲೆಯು ಶ್ರೀಮಂತವಾದ ಪ್ರಾದೇಶಿಕ ಪರಿಸರ ಹೊಂದಿರುವುದು. ಶಾಸ್ತ್ರಾಗಮಗಳನ್ನು ತಿಳಿದ ಪಂಡಿತೋತ್ತಮರಿಂದ ಶ್ರೀಮಂತವಾಗಿರುವುದು. ಇಂದಿಗೂ ಪಂಡಿತರ ಸಮೂಹದಲ್ಲಿ ಮುದ್ಗಲಾಚಾರ್‍ಯರು 'ಅಪ್ಪನವರು' ಎಂದೇ ಸಂಬೋಧಿಸಲ್ಪಡುತ್ತಾರೆ. ಆಚಾರ್‍ಯರ ಪತ್ನಿ ರಮಾದೇವಿಯವರನ್ನು ಅವ್ವನವರು ಎಂದು ಗೌರವಿಸುತ್ತಿದ್ದರು.

ಮುದ್ಗಲಾಚಾರ್‍ಯರ ಮರಣಾನಂತರದಲ್ಲೂ ಕುಟುಂಬದ ಹಿರಿಯರಿಗೆ ಸಲ್ಲುವಂತೆ ರಮಾದೇವಿಯವರಿಗೆ ಗೌರವ, ಮರ್ಯಾದೆಗಳು ಸಲ್ಲುತ್ತಿದ್ದವು. ಅವ್ವನವರು ಎಂಬ ಗೌರವಾನ್ವಿತ ಸಂಬೋಧನೆ ಆಚಾರ್‍ಯರ ಪತ್ನಿಯಾದಂದಿನಿಂದಲೂ ನಡೆದುಬಂದಿದೆ. ಅವ್ವನವರ ಕುರಿತು ಎಲ್ಲಿಯೂ ಅಧಿಕೃತ ದಾಖಲೆಗಳು

ಲಭ್ಯವಿಲ್ಲ. ಹಾಗೆಯೇ ಅವ್ವ, ತಮ್ಮ ಹಾಡುಗಳಲ್ಲಿಯೂ ತಮ್ಮ ಕಾಲ, ರಚನೆ ಮುಂತಾದವುಗಳ ಕುರಿತು ಹೇಳಿಲ್ಲ. ಆದರೆ ಅವರ ಹಾಡುಗಳನ್ನು ಹೇಳಿಕೊಳ್ಳುವ ಮಹಿಳೆಯರಲ್ಲಿ ಬಾಯಿಂದ ಬಾಯಿಗೆ ಸಾಗಿ ಬರುವಾಗ ಆಖ್ಯಾಯಿಕೆ ನಂಬಿಕೆಗಳು, ಊಹೆಗಳು ಇಂದಿಗೂ ರೂಢಿಯಲ್ಲಿವೆ.

"ಗಲಗಲಿ ವಂಶಸ್ಥರಿಗೆ ನೀಡಿದ ಇನಾಮುಪತ್ರ, ದಾನಪತ್ರ ಮುಂತಾದವುಗಳೇ ಅಧಿಕೃತ ದಾಖಲೆಗಳಾಗಿವೆ. ಇವೆಲ್ಲಾ ಪಾರಸಿ, ಮೋಡಿ ಲಿಪಿಗಳಲ್ಲಿವೆ. ಹಾಗೂ ಅವ್ವನವರಿಗೆ ಪೇಶ್ವೆ ಸರಕಾರ ನೀಡಿರುವ ದಾನಪತ್ರ, ಮತ್ತಷ್ಟು ಬಖೈರುಗಳು ಇರುವ ದೊಡ್ಡ ಗಂಟೊಂದು ಆಗಿನ ದಿವಾನರಿಗೆ ಯಾವುದೋ ಕಾರ್ಯರ್ಥವಾಗಿ ನೀಡಿದ್ದು, ಪುನಃ ಅವರ ವಂಶೀಯರಿಗೆ ಅದು ದೊರಕದೆ, ಇಂದಿಗೂ ಅಬೇಧ ರಹಸ್ಯವಾಗಿದೆ. ಆ ಗಂಟಿನಲ್ಲಿರುವ ಬಖೈರುಗಳಲ್ಲಿನ ವಿವರಗಳ ಮಹತ್ವವೇನು? ಅದರಲ್ಲಿನ ಕಾಲ ವಿಚಾರಗಳೇನು? ಯಾರಿಂದ ಬರೆಸಲ್ಪಟ್ಟವೆ?"[೫] ಎಂಬ ಮಹತ್ತರ ವಿಚಾರಗಳೊಂದೂ ತಿಳಿಯುವುದಿಲ್ಲ. ಇದರಿಂದಾಗಿ ಅವರ ಕುರಿತ ಇತಿವೃತ್ತ ವಿಚಾರವನ್ನು ರಾಮತತ್ವ ಪ್ರಕಾಶನದ ಬಾಲಬೋಧ ಲಿಪಿಯಲ್ಲಿರುವ ಮಾಹಿತಿಯೇ ಅಧಿಕೃತವಾಗಿ ದಾಖಲಾಗಿರುವಂತಹದ್ದು. ಬೆಳಗಾವಿಯ ದತ್ತಾಜಿರಾವ ಆಬಾಜಿರಾವ ಸಾವಂತರವರು "ಶ್ರೀರಾಮತತ್ವ ಪ್ರಕಾಶನ"ದಲ್ಲಿ ಕ್ರಿ.ಶ. ೧೯೨೭ರಲ್ಲಿ ಪ್ರಕಟಣೆ ಮಾಡಿದ ಅವ್ವನವರ ಮುಯ್ಯದ ಪದಗಳು ಭಾಗ-೧; ಇದರಲ್ಲಿ ಶ್ರೀಮಧ್ವಾ ಆಚಾರ್ಯರು ಈ ಹಾಡುಗಳಿಗೆ ಬರೆದ ಮಧ್ಯಮುನಿ ಆಚಾರ್ಯರ ಪ್ರಸ್ತಾವನೆಯೇ ಇಂದು ಅಧಿಕೃತ ಮಾಹಿತಿಯಾಗಿರುವುದು. ಹೀಗೆ ದೊರೆತಷ್ಟೇ ಮಾಹಿತಿಯನ್ನು ಆಧರಿಸಿ ಜೊತೆಗೆ ನಂಬಿಕೆ, ಪರಂಪರೆಯೊಂದಿಗೆ ಸೇರಿಸಿ ಅವ್ವನವರ ಇತಿವೃತ್ತ ವಿಚಾರವನ್ನು ಸುಮಾರು ಮುನ್ನೂರು ವರ್ಷಗಳಷ್ಟು ಹಿಂದಿನದೆಂದು ಹೇಳಲಾಗಿದೆ.

'ರಾಮತತ್ವ ಪ್ರಕಾಶನ'ದ ಬಾಲಬೋಧ ಲಿಪಿಯಲ್ಲಿರುವ ಕೃತಿಯ ಪ್ರಸ್ತಾವನೆಯ ಕನ್ನಡಾನುವಾದದಿಂದ ತಿಳಿಯುವುದು. ಅವ್ವನವರ ಪೂರ್ವಾಶ್ರಮದ ಹೆಸರು 'ರಮಾ', 'ರಮಾಬಾಯಿ' ಎಂದು. ಇವರ ತಂದೆ ಈಗಿನ ಕೊಪ್ಪಳ ಜಿಲ್ಲೆಯ ಭೋಗಾಪುರದ ಶಾನುಭೋಗರು ಹಾಗೂ ಆ ಊರಿನ ಗ್ರಾಮದೇವತೆ ಭೋಗಾಪುರೇಶ ದೇವಾಲಯದ ಅರ್ಚಕರು. ಆದರೆ ಅವರ ಮಗಳು ರಮಾಬಾಯಿಯವರಿಗೆ ಹನ್ನೆರಡು ವರ್ಷ ಪ್ರಾಯವಾದರೂ ವಿವಾಹವಾಗಿರಲಿಲ್ಲ. ಅಂದಿನ ಕಾಲಕ್ಕೆ ಸಂಪ್ರದಾಯದ ಪ್ರಕಾರ "ಅಷ್ಟವರ್ಷೇ ಕನ್ಯಾಭವೇತ್ ಲಗ್ನಂ."[೬] ಇದಕ್ಕೆ ಅವರ ತಂದೆಯ ಬಡತನವು ಕಾರಣವಾಗಿದ್ದಿತು. ಹೀಗೊಮ್ಮೆ, ಕುಪೀಲ ಗ್ರಾಮದ ಆಚಾರ್ಯ ಶ್ರೀಮುದ್ಗಲಾಚಾರ್ಯರು ತಮ್ಮ ಐದು ಜನ ವಿದ್ವಾಂಸರಾದ ಮಕ್ಕಳೊಡನೆ ಮೈಸೂರಿನ 'ವಿದ್ವಾಂಸರ ಸಮಾವೇಶದಲ್ಲಿ' ಭಾಗವಹಿಸಿ ಅಲ್ಲಿ ತಮ್ಮ ವಾದವೈಖರಿಯಿಂದ ಉತ್ತರದ ವಿದ್ವಾಂಸರನ್ನು ಮಣಿಸಿ, ಅನೇಕ ಬಹುಮಾನ ಸನ್ಮಾನ ಪಡೆದರು. ಸ್ವಗ್ರಾಮಕ್ಕೆ ಹಿಂತಿರುಗುವ ಹಾದಿಯಲ್ಲಿ 'ಭೋಗಾಪುರ' ಗ್ರಾಮದ ದೇವಾಲಯದಲ್ಲಿ ಪರಿವಾರ ಸಮೇತರಾಗಿ ತಂಗಿದರು. ಇಂತಹ ಸಮಯದಲ್ಲಿ ಆಚಾರ್ಯರ ಪರಿವಾರದ ಆದರೋಪಚಾರಕ್ಕಾಗಿ ಓಡಾಡುತ್ತಿದ್ದ ಸುಂದರ ಕನ್ಯೆಯನ್ನು ಕಂಡು

ಯಾರೆಂದು ವಿಚಾರಿಸಿದರು. ಆ ಕನ್ಯೆ ಅರ್ಚಕರ ಮಗಳೆಂಬುದಾಗಿ ತಿಳಿಯುತ್ತದೆ. ಈ ವಿಚಾರ ತಿಳಿದ ಆಚಾರ್ಯರಿಗೆ ಈ ಕನ್ಯೆಯ ವಿವಾಹ ಕುರಿತು ಮಕ್ಕಳೊಡನೆ ವಿಚಾರ ಮಾಡಿದರು. ತಮಗೂ ಸಂಪ್ರದಾಯಬದ್ಧ ಧಾರ್ಮಿಕ ಕಾರ್ಯಗಳಿಗಾಗಿ ಧರ್ಮಪತ್ನಿಯ ಅವಶ್ಯಕವಾಗಿರುವುದರಿಂದ ಅವರು ಯೋಚಿಸಿ ಆ ಕನ್ಯೆಯೊಂದಿಗೆ ವಿವಾಹವಾಗುವುದಾಗಿ ತಿಳಿಸಿದರು. ತಂದೆಯ ಮಾತಿನ ಆಜ್ಞಾನುವರ್ತಿಗಳಾದ ಮಕ್ಕಳೈವರು, ಅವರ ನಿರ್ಧಾರಕ್ಕೆ ಸಮ್ಮತಿಸಿದರು. ಮಕ್ಕಳೊಡನೆ ವಿಚಾರ ವಿನಿಮಯ ನಡೆಸಿದ ಮುದ್ಗಲಾಚಾರ್ಯರು, ಅರ್ಚಕರ ಮಗಳನ್ನು ವಿವಾಹವಾಗುವುದಾಗಿ ತಿಳಿಸಿದರು. ಆದರೆ ಸರಿಸುಮಾರು ೯೫ ವರ್ಷದ ಹಿರಿಯ ವಯೋವೃದ್ಧರಿಗೆ ಬಡತನದ ಕಾರಣವೊಡ್ಡಿ ವಿವಾಹ ಮಾಡಿಕೊಡಲು ಮನಸೊಪ್ಪಲಿಲ್ಲ. ಅವರು ಆಗದೆಂದು ಹೇಳಲಾಗದೆ ಸುಮಾರು ೧೨೦೦ ರೂ. ಬೆಳ್ಳಿನಾಣ್ಯಗಳ ದೊಡ್ಡ ಮೊತ್ತದ 'ತೆರ'ವನ್ನು ನೀಡಬೇಕೆಂದರು. ಆಚಾರ್ಯರು ಮರುಮಾತಾಡದೆ ಅಷ್ಟೂ ಹಣವನ್ನು 'ತೆರ'ವಾಗಿ ನೀಡಿ ವಿವಾಹವಾಗಲು ಒಪ್ಪಿಗೆಯಿತ್ತರು. ಇಷ್ಟಾದರೂ ಆ ಕನ್ಯಾಪಿತೃವಿನ ಮನಸೊಪ್ಪಲಿಲ್ಲ. ಕೊನೆಗೆ ಅವರ ಮಗಳು ರಮಾ ಮನೆಯ ಒಳಬಾಗಿಲಿನಲ್ಲಿ ನಿಂತು ಆಚಾರ್ಯರ ಹಿರಿಯ ಪುತ್ರನನ್ನು ಹತ್ತಿರ ಕರೆದು ಆಚಾರ್ಯರ ಮೈಮೇಲಿನ ಉತ್ತರೀಯವನ್ನು ಕೇಳಿ ಪಡೆದರು. ಆ ಉತ್ತರೀಯವನ್ನು ತಮ್ಮ ಮೈಮೇಲೆ ಧರಿಸಿ ಇಂದಿಗೆ ತಂದೆ ಮನೆಯ ಋಣ ತೀರಿಸಲೆಂದು ಮುದ್ಗಲಾಚಾರ್ಯರು ತನ್ನನ್ನು ವಿವಾಹವಾಗುವುದು, ಈ ರೀತಿ ತಂದೆಯ ಋಣ ತೀರಿಸಲೆಂದೇ ತಾನು ಹುಟ್ಟಿರುವುದಾಗಿ, ತಂದೆ ತಾಯಿಯವರಿಗೆ ತಿಳಿಸಿ ಅವರೊಡನೆ ಹೋಗುವುದಾಗಿ ನಿರ್ಧರಿಸಿದರು.

ಪ್ರಾಸಂಗಿಕವಾಗಿ ರಮಾಬಾಯಿ ಮತ್ತು ಮುದ್ಗಲಾಚಾರ್ಯರ ವಿವಾಹವು ನಡೆದು ಅನಂತರ ಕುಪ್ಪೇಲ ಕುಂಪಿಲ ಅಥವಾ ಕುಪ್ಪೆಲೂರು ಗ್ರಾಮಕ್ಕೆ ಪ್ರಯಾಣ ಮಾಡುತ್ತಾರೆ. ತಮ್ಮ ಕುಪ್ಪೆಲೂರು ಗ್ರಾಮದಲ್ಲಿ ಸಂಪ್ರದಾಯಬದ್ಧವಾಗಿ ವಿಧಿಯುಕ್ತ ವಿವಾಹಕಾರ್ಯ ಜರುಗಿತು. ಇದಾದ ಎಂಟು ದಿನಗಳಲ್ಲಿಯೇ ಆಚಾರ್ಯರು ಮರಣ ಹೊಂದುವರು. ತಮ್ಮ ಅಂತ್ಯಕಾಲದ ಸಮಯದಲ್ಲಿ ವಿವಾಹ ಮಾಡಿಕೊಂಡು ಕರೆತಂದಿದ್ದ ರಮಾಬಾಯಿಗೆ ಶಿಕ್ಷಣ ನೀಡಬೇಕೆಂಬುದು ಅವರ ಕೋರಿಕೆಯಾಗಿತ್ತು. ವಿವಾಹವಾಗಿ ಎಂಟು ದಿನಗಳಲ್ಲಿಯೇ ವಿಧಿವಶರಾದ ಆಚಾರ್ಯರ ಧರ್ಮಪತ್ನಿಯಾಗಿ ರಮಾ ಕಿಂಚಿತ್ತು ಖೇದಗೊಳ್ಳದೇ ಹಿರಿಯ ಮಕ್ಕಳೊಡನೆ ಸೇರಿ ಮಂಗಳಕಾರ್ಯ ಮಾಡಿಕೊಂಡರು. ತದನಂತರ ಅವ್ವ ಆಚಾರ್ಯರ ಮೂಲಮನೆಯಿದ್ದ ಗಲಗಲಿಯಲ್ಲಿ ವಾಸವಾದರು. ಹೀಗೆ ಕಿರಿಯ ವಯಸ್ಸಿಗೆ ವೈಧವ್ಯವ ಪಡೆದರೂ ಬೇಸರ, ದುಃಖಪಡಲಿಲ್ಲ. ದೃಢ ಮನಸ್ಸಿನಿಂದ ಆಚಾರ್ಯರ ಆದೇಶದಂತೆ ಹಿರಿಯ ಮಕ್ಕಳಿಂದ ಶಾಸ್ತ್ರಾಭ್ಯಾಸಗಳನ್ನು, ಶಿಕ್ಷಣವನ್ನು ಪಡೆದರು. ಅತ್ಯಂತ ಸುಶಿಕ್ಷಿತ ಪರಿಸರದಲ್ಲಿರುವ ಅವ್ವ, ತೀಕ್ಷ್ಣಮತಿ ಕೇವಲ ಕೇಳುವಿಕೆಯಿಂದ ಗ್ರಹಿಸುವ ಸೂಕ್ಷ್ಮಗ್ರಾಹಿಗ ದೊಡ್ಡ ಕುಟುಂಬದ ಹಿರಿಯರ ಪತ್ನಿಯಾಗಿ ಸಕಲ ಗೌರವಾದರಗಳನ್ನು ಪಡೆಯುತ್ತಾ 'ಅವ್ವನವರು' ಎಂದು ಕರೆಸಿಕೊಳ್ಳುತ್ತಾಳೆ. ತಮ್ಮ ಸೂಕ್ಷ್ಮ ತೀಕ್ಷ್ಣಗ್ರಹಿಕೆಯಿಂದ ಅನೇಕ ಶಾಸ್ತ್ರಾಗಮಗಳನ್ನು

ತಿಳಿಯುತ್ತಿದ್ದರು. ಮನೆಯಲ್ಲಿ ನಿರಂತರವಾಗಿ ನಡೆಯುತ್ತಿದ್ದ ವಿದ್ವತ್ ಸಮಾವೇಶದಲ್ಲಿ ಭಾಗವಹಿಸುತ್ತಿದ್ದ ವಿದ್ವಾಂಸರ ವಾದವೈಖರಿಯಿಂದ ತಮ್ಮ ಜ್ಞಾನಪರಿಧಿಯನ್ನು ವಿಸ್ತರಿಸಿಕೊಳ್ಳುತ್ತಿದ್ದರು. ಅಡುಗೆಮಾಡುತ್ತಲೇ ಕೇಳುತ್ತಿದ್ದ ಅವರ ಸ್ಮರಣಶಕ್ತಿಯು ಅತ್ಯಂತ ಚುರುಕಾಗಿತ್ತು. ಮನೆಯ ಕೆಲಸ ಕಾರ್ಯಗಳೊಡನೆಯೇ ವೇದಾಗಮಗಳ ಕುರಿತು, ಭಾರತ, ಭಾಗವತಗಳ ಬಗ್ಗೆ ಸೂಕ್ಷ್ಮ ತಿಳಿವಳಿಕೆ ಹೊಂದಿದ್ದರು.

ದಿನಗಳೆದಂತೆ, ಮಾಧ್ವಮತದ ಗಹನವಾದ ವಿಚಾರಗಳನ್ನು, ವೇದೋಪನಿಷತ್ತುಗಳಲ್ಲಿ ಅಡಕವಾಗಿರುವ ಕಷ್ಟತರವಾದ ತತ್ವವಿಚಾರಗಳನ್ನು ಸರಳವಾಗಿ ಕನ್ನಡ ಭಕ್ತಿಯ ಹಾಡುಗಳಾಗಿ ರಚಿಸಿ, ಶ್ರೀಕೃಷ್ಣನಿಗರ್ಪಿಸಲಾರಂಭಿಸಿದರು. ಕೃಷ್ಣಭಕ್ತಿಯೇ ಅವರ ರಚನೆಯ ಕೇಂದ್ರವಾಗಿದೆ. ನೂರಾರು ಹಾಡುಗಳು ದೇವರ ನಾಮಗಳಾಗಿ ರಚಿತವಾದವು. ಇದರೊಡನೆ ವೇದ, ಪುರಾಣ, ಶಾಸ್ತ್ರಾಗಮಗಳು, ಭಾರತ ಮೊದಲಾದವುಗಳ ಸಾರವನ್ನು ಬಳಸಿಕೊಳ್ಳುತ್ತಾರೆ. ತಮ್ಮ ವಿದ್ವತ್ ಪ್ರಭಾವದಿಂದಲೂ, ಅನುಭಾವದ ನೀತಿಸುಧೆಯನ್ನು, ಶುದ್ಧಚರಣ ಹರಿಭಕ್ತಿಯನ್ನು ಸಾರುವುದು ಪ್ರಮುಖವಾಗಿ ಶೃಂಗಾರ, ಹಾಸ್ಯ, ಕರುಣ ರಸಗಳಲ್ಲಿ ಹಾಡುಗಳನ್ನು ರಚಿಸಿದ್ದಾರೆ.

ಸುಸಂಸ್ಕೃತ ಸ್ವಭಾವದ ಅವ್ವನವರು ಶಾಸ್ತ್ರ ಕುರಿತು ಹೆಚ್ಚು ಓದಿದವರಲ್ಲ. ಆದರೆ ವಿದ್ವಾಂಸ ಮಕ್ಕಳೊಡನೆ ನಿರಂತರವಾಗಿ ನಡೆಯುತ್ತಿದ್ದ ವಾದಸರಣಿಗಳನ್ನು ಅಡಿಗೆ ಮಾಡುತ್ತಲೇ ಕೇಳಿ ಕಲಿತವರು. ಅವರು ಪ್ರತಿಭಾನ್ವಿತರಾದುದರಿಂದಲೇ ತಮ್ಮ ವಿದ್ವತ್ ಪ್ರತಿಭೆಗೆ ತಕ್ಕಂತೆ ವಿನಯಶಾಲಿಗಳಾಗಿದ್ದರು. ಅವರು, ನುಡಿಯುವುದು ಹೀಗೆ,

"ಬಲ್ಲಿದ ಗುರುಗಳ ಎಲ್ಲ ಹಿರಿಯರ ದಯದಿ ಬಲ್ಲಷ್ಟು ತತ್ವ ರಚಿಸಿದೆ" ಎಂದು ಹಾಡಿದ್ದಾರೆ.

"ಮುದ್ಗಲವಾಸನ ಶುದ್ಧನಾಮದವರು
ಮುದ್ದುಪಾದಗಳ ಸ್ಮರಿಸುತ
ಮುದ್ದುಪಾದಗಳ ಸ್ಮರಿಸುತ ರಚಿಸಿದ
ಅಪದ್ದ ನೋಡದಲೆ ಹರಿಕೊಳ್ಳೋ
ಮೂಢಳು ನಾನೊಂದು ಬೇಡಿ ಬಯಸಿಕೊಂಡೆ!
ಮಾಡಿದ ರಚನಿಯ ಮನಉಬ್ಬಿ"

ಎಂದು ಬಿನ್ನವಿಸಿದ್ದಾರೆ.

ಇಂತಹ ವಿನಯಶೀಲರಾದ ಅವ್ವ, ತಮ್ಮ ಶಿಷ್ಯರೊಡಗೂಡಿ ಕ್ಷೇತ್ರಪರ್ಯಟನೆ ಮಾಡುತ್ತಿದ್ದರು. ಒಮ್ಮೆ ಮೈಸೂರಿನ ಮಹಾರಾಜರನ್ನು ಭೇಟಿಯಾಗಲು ಅಲ್ಲಿ ತಂಗಿದರು. ಆದರೆ ಸತತ ಮೂರು ತಿಂಗಳು ಕಳೆದರೂ ಅರಸರ ಭೇಟಿಯಾಗಲಿಲ್ಲ. ಆಗ ಅವ್ವ ಒಂದು ಉಪಾಯ ಹೂಡಿದರು. ಅದೆಂದರೆ, ಚಿತ್ರಕಲೆಯಲ್ಲಿ ಪ್ರವೀಣರಾದ ಅವ್ವ, ತಾವು ತಂಗಿದ್ದ ಪ್ರಾಣದೇವರ ಗುಡಿಯಲ್ಲಿ ಸ್ಕಂದ ಅಧ್ಯಾಯದಲ್ಲಿ

ಶ್ರೀಭಗವನ್ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ಹೀಗೆ ಚಿತ್ರಿಸಿದ ಮೂರ್ತಿಗೆ ಬಣ್ಣಗಳಿಂದ ಅಲಂಕರಿಸಿದರು. ಸಂಪೂರ್ಣ ಸಾರಂಶವನ್ನು ಒಳಗೊಂಡ ಚಿತ್ರವನ್ನು ದೇವಾಲಯಕ್ಕೆ ಯಾರೇ ಬಂದರೂ ಪೂರ್ಣವಾಗಿ ಓದಿಕೊಂಡೇ ಬರಬೇಕು. ನಂತರ ದೇವರ ದರ್ಶನ ಪಡೆಯಬೇಕೆಂದು ಷರತ್ ವಿಧಿಸಿದರು. ಈ ಷರತ್ ಪಾಲಿಸುವುದಕ್ಕಾಗಿಯೇ ದ್ವಾರಪಾಲಕನೊಬ್ಬನನ್ನು ನೇಮಿಸಿದರು. ಹೀಗೆ, ದೇವಾಲಯದ ಭೇಟಿಗೆಂದು ರಾಜಪ್ರತಿನಿಧಿಗಳು ಬಂದಾಗ ದ್ವಾರಪಾಲಕರು ಅವರನ್ನು ಅಡ್ಡಗಟ್ಟಿದರು. ಅವ್ವನವರ ಆಣತಿಯಂತೆ ಅಲ್ಲಿರುವ ಚಿತ್ರದ ಸಾರಂಶವನ್ನು ಓದಿಕೊಂಡು ಮುಂದೆ ಸಾಗಲು ತಿಳಿಸಿದರು. ಇದು ಅವ್ವನವರ ಅಪ್ಪಣೆ ಎಂದು ತಿಳಿಸಿದರು. ಆ ರಾಜಪ್ರತಿನಿಧಿಗಳು ದೇವರ ದರ್ಶನ ಮಾಡದೇ, ಹಿಂತಿರುಗಲೂ ಆಗದೆ, ನಿರ್ವಾಹವಿಲ್ಲದೆ ಅಲ್ಲಿನ ಚಿತ್ರದ ಸಂಪೂರ್ಣ ಸಾರಂಶವನ್ನು ಓದುತ್ತಾ ದೇವಾಲಯದ ಮೆಟ್ಟಿಲನ್ನು ಹತ್ತಿ ಮೇಲಕ್ಕೆ ಹೋದರೆ, ಅಲ್ಲಿ ಅವರಿಗೆ ಅವ್ವನವರು ವಿರಾಜಮಾನರಾಗಿದ್ದುದು ಕಂಡುಬಂದಿತು. ಅವರ ವಿದ್ವತ್ ಪ್ರತಿಭೆಗೆ ಸಂಪೂರ್ಣ ಶರಣಾಗಿ ಸಾಷ್ಟಾಂಗ ಮಾಡಿದರು. ಅನಂತರ ಅರಮನೆಗೆ ಅವ್ವನವರನ್ನು ಆಹ್ವಾನಿಸಿದರು. ಆದರೆ ಅವ್ವ ಅರಸರೇ ಬಂದು ಕರೆದರೆ ತಾವು ಬರುವುದಾಗಿ ಹೇಳಿಕಳುಹಿಸಿದರು. ಆಗಿನ ಕೃಷ್ಣರಾಜ ಒಡೆಯರು ತತ್‌ಕ್ಷಣವೇ ತಮ್ಮ ಆಸ್ಥಾನ ವಿದ್ವಾಂಸರೊಡಗೂಡಿ ಬಂದು ಅವ್ವನವರನ್ನು ಅತ್ಯಂತ ವೈಭವದಿಂದ ಪಲ್ಲಕ್ಕಿಯಲ್ಲಿ ಕೂರಿಸಿ ಅರಮನೆಗೆ ಕರೆದೊಯ್ದರು.

ಅವ್ವ, ಶಾಸ್ತ್ರಸಂಪನ್ನರು, ಸಂಪ್ರದಾಯಶೀಲರು, ಅರಸರು ಕರೆದುದನ್ನು ಸ್ವೀಕರಿಸಿ ಒಪ್ಪಿಗೆಯಿತ್ತರು. ಆದರೆ ಅರಮನೆಯಲ್ಲಿ ತಮ್ಮ ದೇವರ ಪೂಜೆ, ಆಚಾರ್ಯರ ನೈವೇದ್ಯ, ಇವರಿಂದಲೇ ತೀರ್ಥ ವಗೈರೆ ತೆಗೆದುಕೋಬೇಕು ಎಂಬ ಕರಾರು ಹಾಕಿದರು. ಇದನ್ನು ರಾಜರು ಒಪ್ಪಿದ ನಂತರವೇ ತಾವು ಅರಮನೆಯನ್ನು ಪ್ರವೇಶಿಸಿದರು ಅದರಂತೆಯೇ ಅರಮನೆಯಲ್ಲಿ ಉಳಿದಿದ್ದ ದಿನಗಳಲ್ಲಿ ಅವರ ವಿದ್ವತ್ತಿನ ಪ್ರತಿಭೆಯಿಂದ ಆಸ್ಥಾನದ ಸಕಲ ವಿದ್ವಾಂಸರು ತಲೆದೂಗಿದರು. ಸ್ವತಃ ಅವ್ವ, ವೇದಾಂತ ಪಾಠ ಹೇಳುತ್ತಿದ್ದರು. ಅಲ್ಲಿನ ಸರ್ವ ವಿದ್ವಾಂಸರು ಅವರ ಪ್ರತಿಭೆಯನ್ನು, ವಿದ್ಯಾಚಾತುರ್ಯವನ್ನು ಸಂತೋಷದಿಂದ ಗಮನಿಸುತ್ತಿದ್ದರು. ಅರಸನಾದರೂ ಅವರ ವಿದ್ಯಾಕೌಶಲ್ಯಕ್ಕೆ ಸಂತೋಷಗೊಂಡು, ಗೌರವ ಸನ್ಮಾನ ನೆರವೇರಿಸಿದರು. ಅದು ಹಿಂದೆ ಮುದ್ಗಲಾಚಾರ್ಯರಿಗೆ ನಡೆಸಿದ ವೈಭವದ ಸನ್ಮಾನಗಳನ್ನು ಅಂದರೆ ೧೨೦೦ ಬೆಳ್ಳಿನಾಣ್ಯಗಳ ಕೊಟ್ಟಿದ್ದರೋ ಹಾಗೆಯೇ ಅವ್ವನವರಿಗೂ ಅಷ್ಟೇ ಪ್ರಮಾಣದ ಸನ್ಮಾನ, ಬಿರುದು, ಪಲ್ಲಕ್ಕಿ, ಛತ್ರಚಾಮರ ಕೊಟ್ಟು ಗೌರವಿಸಿದರು. ಇದು ಅವ್ವನವರ ವಿದ್ಯಾಚಾತುರ್ಯವುಳ್ಳ ವ್ಯಕ್ತಿತ್ವಕ್ಕೆ ದೊರೆತ ರಾಜಪುರಸ್ಕಾರವು ಅತ್ಯಂತ ಸೂಕ್ತವಾದುದಾಗಿತ್ತು. ರಾಜರುಗಳಿಂದ ಸನ್ಮಾನಿಸಿಕೊಳ್ಳುವ ಅವ್ವ, ಆಗಿನ ಕಾಲದಲ್ಲಿಯೇ ಅನೇಕ ವಿದ್ವಾಂಸರ ಸಮಾವೇಶಗಳಲ್ಲೂ ಭಾಗವಹಿಸುತ್ತಿದ್ದರು. ಒಮ್ಮೆ ಪೇಶ್ವೆ ರಾಜಧಾನಿ ಪುಣೆಯಲ್ಲಿ ನಡೆದ ಪಂಡಿತೋತ್ತಮರ ಸಮಾವೇಶದಲ್ಲಿ ಅವ್ವ, ತಮ್ಮ ವಿದ್ವಾಂಸ ಮಕ್ಕಳೊಡನೆ ಪಾಲ್ಗೊಂಡಿದ್ದರು. ಇಂತಹ ವಿದ್ವಾಂಸರ ಸಭೆಯಲ್ಲಿ ದಕ್ಷಿಣದ ಪಂಡಿತರು ತಮ್ಮ ವಾದ

ವೈಖರಿಯಲ್ಲಿ ಸೋಲೊಪ್ಪುವ ಹಂತ ತಲುಪಿದರು. ಆ ಸಭೆಯಲ್ಲಿ ಪರೋಕ್ಷವಾಗಿ ಭಾಗವಹಿಸಿದ್ದ ಅಪ್ಪ, ಮಕ್ಕಳಲ್ಲಿ ಒಬ್ಬರನ್ನು ಕರೆದು ಚರ್ಚೆಯಾಗುತ್ತಿದ್ದ ಆ ಕೋಟಿ ಪ್ರಮೇಯವನ್ನು ಸರಳವಾಗಿ ಬಿಡಿಸಿದರು. ಜೊತೆಗೆ ಅದರಿಂದ ಉಂಟಾಗುವ ಪರಿಹಾರವನ್ನು ಸೂಚಿಸಿದರಂತೆ. ಇಂತಹ ಕ್ಲಿಷ್ಟ ಸಮಸ್ಯೆಯನ್ನು ಬಿಡಿಸಿದ ಅಪ್ಪನವರ ಪಾಂಡಿತ್ಯಕ್ಕೆ ಪೇಶ್ವೆ ಮೆಚ್ಚುಗೆ ವ್ಯಕ್ತಪಡಿಸಿದರು. ದಕ್ಷಿಣದ ಪಂಡಿತರಿಗೆ ಜಯವನ್ನು ದೊರಕಿಸಿದ್ದಕ್ಕಾಗಿ ಅಪ್ಪನವರಿಗೆ ಅದ್ಧೂರಿಯಾಗಿ ಸನ್ಮಾನಿಸಿ ಅದರೊಡನೆ 'ಜಯಪತ್ರ'ವನ್ನು ವರ್ಷಾಸನವನ್ನು ಕೊಟ್ಟು ಗೌರವಿಸಿದರಂತೆ.

ಈ ಗೌರವ ವರ್ಷಾಸನವು ಬಹುಕಾಲ ಮುಂದುವರೆಯಿತು. ಇತ್ತೀಚೆಗೆ ಕೆಲವಾರು ವರ್ಷಗಳ ಹಿಂದೆ, ಒಂದಷ್ಟು ಇಡಿಯಾದ ಮೊತ್ತವನ್ನು ಈ ವಂಶೀಯರಿಗೆ ನೀಡಿ, ಈ ವರ್ಷಾಸನವನ್ನು ನಿಲ್ಲಿಸಲಾಗಿದೆ. ಇದೊಂದು ಪ್ರಕರಣದಿಂದ ಅಪ್ಪನವರ ವಿದ್ವತ್‌ಪ್ರತಿಭೆಯು ಅಸಾಧಾರಣವಾದುದಾಗಿತ್ತು ಎಂಬುದನ್ನು ತಿಳಿಯಬಹುದು. ಅಪ್ಪ, ಯತಿಗಳಂತೆ ದೇಶಪರ್ಯಟನೆ ಮಾಡುವ ಪರಿಪಾಠ ಹೊಂದಿದ್ದರು. ಹೀಗೆ ದೇಶಪರ್ಯಟನೆ ಮಾಡಿದ ಸ್ಥಳಗಳಲ್ಲಿ ತಮ್ಮ ವಿದ್ವತ್‌ಪ್ರತಿಭೆಗಳಿಂದ ಸನ್ಮಾನಿತರಾಗುತ್ತಿದ್ದುದು ವಿಶೇಷವಾಗಿದೆ. ಕಾಶಿನಗರದಲ್ಲೂ ಬಹುಕಾಲ ವಾಸಿಸಿದ್ದಂತೆಯು ತಿಳಿದುಬರುತ್ತದೆ. ಇದರೊಂದಿಗೆ ಹಲವು ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿದವರು ಎಂಬುದು ಅವರ ಕೀರ್ತನೆಗಳಲ್ಲಿ ವ್ಯಕ್ತವಾಗಿದೆ. ಅಪ್ಪ ತಮ್ಮ ಪಾಂಡಿತ್ಯದಿಂದ ಸನ್ಮಾನಿತರಾಗಿದ್ದುದು ತಮ್ಮ ವ್ಯಕ್ತಿತ್ವಕ್ಕೆ ಹಿರಿತನದ ಮೆರುಗನ್ನು ವಿದ್ವತ್ತಿನಿಂದ ಪಡೆದಿದ್ದರು. ಹಲವಾರು ಸ್ಥಳಗಳನ್ನು ಸಂದರ್ಶಿಸುತ್ತಾ ದೇಶಪರ್ಯಟನೆ ಮಾಡಿದರು. ಅಪ್ಪ ತಮ್ಮ ಇಳಿವಯಸ್ಸಿನಲ್ಲಿ ಅವರ ಪೂರ್ವಿಕರು ನೆಲೆಸಿದ್ದ ಗಲಗಲಿಯಲ್ಲಿ ವಾಸಿಸಲಾರಂಭಿಸಿದರು. ಗಲಗಲಿಯಲ್ಲಿ ತಮ್ಮ ತವರುಮನೆಯ ನೆನಪಿಗಾಗಿ ತಂದಿದ್ದ ಚಿಕ್ಕದಾದ ಭೋಗಪುರೇಶ ಮೂರ್ತಿಯನ್ನು ನರಸಿಂಹ ದೇವಾಲಯದ ಎದುರಿನ ಅಶ್ವತ್ಥಕಟ್ಟೆಯಲ್ಲಿ ತಾವೇ ಪ್ರತಿಷ್ಠಾಪಿಸಿ ಪೂಜಿಸುತ್ತಿದ್ದರು. ಇಂದಿಗೂ ಆ ಪುಟ್ಟ ಭೋಗಾಪುರದೀಶನ ಗುಡಿಯನ್ನು ಗಲಗಲಿಯಲ್ಲಿ ಕಾಣಬಹುದು.

ಕಾಲಾಂತರದಲ್ಲಿ ಅಪ್ಪ ತಮ್ಮ ಅಂತ್ಯಕಾಲ ಸಮೀಪಿಸುವವರೆಗೂ ಹಿರಿಯ ಮಗ ಶ್ರೀಮಧ್ವಾಚಾರ್ಯರೊಡನೆ ಶೂರ್ಪಾಲಿ ಕ್ಷೇತ್ರದಲ್ಲಿ ವಾಸಿಸುತ್ತಿದ್ದರು. ಅಪ್ಪ ವಿಶಿಷ್ಟವಾದ ವ್ಯಕ್ತಿತ್ವ ಹೊಂದಿದ್ದರು. ಅವರ ಅಂತ್ಯ ಕಾಲ ಸಮೀಪಿಸುವಷ್ಟಕ್ಕೆ ಸಾಧ್ಯವಿರುವ ಎಲ್ಲಾ ತೀರ್ಥಕ್ಷೇತ್ರಗಳನ್ನು ಸಂದರ್ಶನ ಮಾಡಿದರು. ಕೊನೆಯ ಕಾಲದಲ್ಲಿ ಶೂರ್ಪಾಲಿಯಲ್ಲಿ ಅವರ ಪ್ರಾಣೋತ್ಕ್ರಮಣವಾಯಿತು ಎಂದು ಹೇಳುವರು. ಆದರೆ ಅವರ ವಂಶೀಯರಲ್ಲೊಂದು ನಂಬಿಕೆಯಿದೆ. ಅದು ಅಪ್ಪನವರ ಮೊಮ್ಮಗನ ಮದುವೆಯ ಶುಭಮುಹೂರ್ತದ ಕಾಲದಲ್ಲಿ ಅಂದರೆ ಒಂದು ಕಡೆ ಮಾಂಗಲ್ಯಧಾರಣೆ ನಡೆಯುತ್ತಿದ್ದರೆ ಮತ್ತೊಂದು ಕಡೆ ಅವರು ಕೊನೆಯುಸಿರೆಳೆದರು ಎಂಬ ನಂಬಿಕೆ ರೂಢಿಯಲ್ಲಿರುವುದು. ಹೀಗೆ ಸರಿ ಸುಮಾರು ನೂರು ಅಥವಾ ನೂರಿಪ್ಪತ್ತು ವರ್ಷಗಳ ದೀರ್ಘಾವಧಿಯ ಬದುಕನ್ನು ಅಪ್ಪ

ನಡೆಸಿದರು ಎಂದು ಹಣಮಂತ ತಾಸಗಾಂವಕರ್ ಅವರು ಪ್ರಥಮ ಹರಿದಾಸ ಮಹಿಳೆ ಗಲಗಲಿ ಅವ್ವನವರು ಎಂಬ ಕೃತಿಯಲ್ಲಿ ಅಭಿಪ್ರಾಯಪಡುತ್ತಾರೆ.

**ಅವ್ವನವರ ಕುರಿತಾಗಿರುವ ನಂಬಿಕೆಗಳು**

೧. ಉತ್ತರ ಕರ್ನಾಟಕ ಭಾಗದಲ್ಲಿ ಒಮ್ಮೆ ಮಳೆ ಬರದೇ ಬರಗಾಲ ಅಡಿಯಿಟ್ಟಿತ್ತು. ಜನರೆಲ್ಲಾ ಮಳೆಯತ್ತ ನೋಡಲು ಆಗಸದತ್ತ ಕಣ್ಣು ಹಾಯಿಸಿ ನಿಟ್ಟುಸಿರುಗೆರೆಯುತ್ತಿದ್ದರು. ಇಂತಹ ಸಂಕಟಮಯ ಸನ್ನಿವೇಶದಲ್ಲಿ ಆ ಊರಿನ ವ್ಯಕ್ತಿಯೊಬ್ಬ ಬರಗಾಲದ ಸಂಕಟದಿಂದ ವ್ಯಥಿತನಾಗಿ ಎದುರಿಗೆ ಬಂದ (ಅವ್ವ) ಮಡಿ ಹೆಂಗಸೊಬ್ಬರನ್ನು ನೋಡಿ ಇಂತಹ ಮಡಿ (ವಿಧವೆ) ಹೆಂಗಸರು ಹೆಚ್ಚಾಗಿರುವುದರಿಂದಲೇ ಊರಿನಲ್ಲಿ ಸಮಯಕ್ಕೆ ಸರಿಯಾಗಿ ಮಳೆ-ಬೆಳೆಯಾಗದಿರುವುದು ಎಂದು ಹೀಯಾಳಿಸಿದನಂತೆ. ಇದಕ್ಕೆ ಯಾವ ರೀತಿಯೂ ಪ್ರತಿಕ್ರಿಯಿಸದೆ ಅವ್ವ ಆತನನೊಮ್ಮೆ ದಿಟ್ಟಿಸಿ ನೋಡಿ ಮುನ್ನಡೆದರಂತೆ. ಆ ಕ್ಷಣವೇ ವ್ಯಕ್ತಿ ನಿಂತಲ್ಲಿಯೇ ಮಳೆಯು ಧೋ! ಧೋ! ಎಂದು ಸುರಿದು ದಿಕ್ಕು ತೋಚದಂತಾಯಿತಂತೆ. ಆಗ ಅವ್ವನವರ ಬಳಿ ಬಂದು ಕ್ಷಮೆಯಾಚಿಸಿದನಂತೆ ಎಂಬ ಪವಾಡ ಸದೃಶವಾದ ನಂಬಿಕೆಯೊಂದು ರೂಢಿಯಲ್ಲಿರುವುದು.

೨. ಅವ್ವನವರು ಅಪಾರ ವಿದ್ಯಾಸಂಪನ್ನರು, ಪ್ರತಿಭಾವಂತರು, ಅವರ ವ್ಯಕ್ತಿತ್ವ ಪಂಡಿತೋತ್ತಮರಿಂದಲೇ ಗೌರವಿಸಿರುವಂತಹದ್ದು. ಆದರೆ ಅವರು ಶಾಪಗ್ರಸ್ತ ಪುರುಷಯತಿಗಳೆಂಬ ನಂಬಿಕೆಯೂ ಇರುವುದು. ಇದಕ್ಕೆ ಪೂರಕವಾಗಿರುವ ಘಟನೆಯೊಂದು ಹೀಗಿದೆ. ಕೃಷ್ಣಾನದಿ ತೀರದ ಜನರಿಗೆ ಪ್ರಾತಃಕಾಲದ ನದಿಸ್ನಾನವು ನಿತ್ಯದ ಪರಿಪಾಠವಾಗಿರುವುದು. ಅದರಂತೆ ಒಮ್ಮೆ ಅವ್ವ ಪ್ರಾತಃಕಾಲ ನದಿಸ್ನಾನಕ್ಕೆಂದು ತೆರಳುತ್ತಿರುವಾಗ ಕಿಡಿಗೇಡಿ ವ್ಯಕ್ತಿಯೋರ್ವ ಹೆಂಗಸೆಂದು ಅವರನ್ನು ನದೀ ತೀರದವರೆಗೂ ಹಿಂಬಾಲಿಸಿದನಂತೆ. ಹೀಗೆ ಹಿಂಬಾಲಿಸಿದ ವ್ಯಕ್ತಿಗೆ ನದಿಸ್ನಾನಕ್ಕೆಂದು ನಡೆಯುತ್ತಿದ್ದ ಹೆಂಗಸು ನದಿಯಲ್ಲಿ ಮುಳುವರೆಗೂ ಸ್ತ್ರೀಯಂತೆ ಕಾಣುತ್ತಿದ್ದು, ನದಿಯಲ್ಲಿ ಮುಳುಗಿ ಮಿಂದು ಮೇಲೇಳುವಾಗ ಪುರುಷಾಕಾರ! ಕಂಡು ಬಂದಿತು ಎಂಬುದು, ಹೀಗೆ ಅವ್ವನವರು ಸ್ತ್ರೀರೂಪದ ಶಾಪಗ್ರಸ್ತ ಪುರುಷಯತಿಯೆಂಬುದು ಅವರ ವಂಶಿಕರಲ್ಲಿ ರೂಢಿಯಲ್ಲಿರುವ ನಂಬಿಕೆಯಾಗಿದೆ. ಈ ಎಲ್ಲಾ ವಿಚಾರಗಳಿಂದ ಗಲಗಲಿ ಅವ್ವನವರು ಪ್ರಥಮ ಮಹಿಳಾ ಹರಿದಾಸರಾಗಿರುವರು ಎಂಬ ಅಂಶ ವಿದಿತವಾಗುತ್ತದೆ. ಅವ್ವನವರ ಬದುಕಿನ ಮೇಲೆ ಪಂಡಿತೋತ್ತಮರ ವಾದಸರಣಿಯ ಪ್ರಭಾವವಿತ್ತು. ಸಂಸ್ಕೃತ ಭಾಷಾ ವಲಯದಲ್ಲಿದ್ದು, ಕನ್ನಡ ಭಾಷೆಯಲ್ಲಿ ಸರಳ ರೀತಿಯ ಹಾಡುಗಳ ಮೂಲಕ ಧಾರ್ಮಿಕ ತತ್ವ, ವಿಚಾರವನ್ನು ರಚಿಸಿದ್ದಾರೆ. ಕಿರಿಯ ಪ್ರಾಯದಲ್ಲೇ ಮಂಗಳಕಾರ್ಯಗಳಿಂದ ದೂರವಾಗಿದ್ದರೂ, ಮದುವೆಯ ಸಂದರ್ಭದಲ್ಲಿ ಹಾಡಲ್ಪಡುವ ಮುಯ್ಯದ ಹಾಡುಗಳು ಅತ್ಯಂತ ಶ್ರೀಮಂತ ವರ್ಣನೆಯೊಂದಿಗೆ ಅವರ ಕಾವ್ಯ ಪ್ರತಿಭೆಯಲ್ಲಿ ಅನಾವರಣಗೊಂಡಿವೆ.

ಅಪ್ಪನವರು ಬೆಳೆದ ಪರಿಸರವು ಉತ್ತಮೋತ್ತಮವಾದ ಧಾರ್ಮಿಕ ಪರಿಸರವಾಗಿದೆ. ಭಕ್ತಿಯ ನಿರೂಪಣೆ ಅವರ ರಚನೆಗಳ ಮೂಲ ನೆಲೆಯಾಗಿರುವುದು. ಅವರು ರಚಿಸಿದ ಹಾಡುಗಳಲ್ಲಿನ ಪುರಾಣ, ಭಾಗವತ, ರಾಮಾಯಣ, ಮಹಾಭಾರತಗಳ ಪ್ರಾಸಂಗಿಕ ವರ್ಣನೆಗೆ ಮಾಧ್ವಮತದ ದಶಾವತಾರ ವರ್ಣನೆಗಳು ಸಹಕಾರಿಯಾಗಿವೆ. ಸರಳವಾದ ಆಡುಮಾತಿನ ಶೈಲಿಯಿಂದಲೂ ಜನಸಾಮಾನ್ಯರ ನಡುವಿನ ಗಾದೆ, ಶಕುನಗಳು, ನಾಣ್ಣುಡಿಗಳ ಬಳಕೆಯಿಂದ ಸದಾ ಮನೆಯ ಮಂಗಳ ಕಾರ್ಯಗಳಲ್ಲಿ ಹಾಡಿಸಿಕೊಳ್ಳುತ್ತಿರುವವು. ಆಕೆಯ ರಚನಾ ಕೌಶಲ್ಯವು ಸಂಪ್ರದಾಯನಿಷ್ಟ ಮನೆಯ ಹೆಣ್ಣುಮಗಳೊಬ್ಬಳ ಕೀರ್ತನೆಗಳ ರಚನೆಯೂ ಹರಿದಾಸ ಸಾಹಿತ್ಯದ ಹಿರಿಮೆಯೆಂದೇ ಹೇಳಬೇಕು, ಅಪ್ಪನವರ ಪ್ರತಿಭೆಯು ಹರಿದಾಸ ಸಾಹಿತ್ಯದ ಜನಮುಖಿಯಾಗುವ ಭಾವಕ್ಕೆ ಮಹಿಳೆಯರು ಸ್ಪಂದಿಸಿದ ರೀತಿಯನ್ನು ತೋರಿಸುತ್ತದೆ. ಸಾಗಿಬರುವ ಸಂಪ್ರದಾಯದೊಂದಿಗೆ ಅಪ್ಪನವರ ಹಾಡುಗಳು ಮಧ್ವಮತದ ಹೆಗ್ಗಳಿಕೆಯೊಂದಿಗೆ ಇಂದಿಗೂ ಹಾಡಲ್ಪಡುತ್ತವೆ. ತರತಮಭಾವವನ್ನು ಹೇಳುವಾಗ ಬಳಸಿರುವ ಗ್ರಾಮೀಣ ಸಾದೃಶ್ಯಗಳು ಎಲ್ಲಾ ಹೆಂಗಳೆಯರ ದಿನನಿತ್ಯದ ಕೆಲಸ ಕಾರ್ಯಗಳಲ್ಲಿಯೇ ನಿರೂಪಿತವಾಗಿರುವವು. ಒಟ್ಟಾರೆ ಅಪ್ಪನವರ ಬದುಕು, ಬರಹಗಳು, ಭಕ್ತಿ ಬದುಕಿನೊಂದಿಗೆ ಸೇರಿಕೊಂಡಿರುವುದೇ ಒಂದು ವಿಶೇಷ ಸಂಗತಿಯಾಗಿರುತ್ತದೆ.

**ಅಡಿಟಿಪ್ಪಣಿಗಳು**

೧. ಗಲಗಲಿ ಅಪ್ಪನವರು, **ಹಣಮಂತತಾಸಗಾವಂಕರ** '೨', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು

೨. ಪೂರ್ವೋಕ್ತ

೩. ಪೂರ್ವೋಕ್ತ

೪. ಪೂರ್ವೋಕ್ತ

೫. ಪೂರ್ವೋಕ್ತ

೬. ಪೂರ್ವೋಕ್ತ

೪

# ಗಲಗಲಿ ಅವ್ವನವರ ಕೀರ್ತನೆಗಳು ಸಾಮಾಜಿಕ ಮೌಲ್ಯ

ಹರಿದಾಸ ಸಾಹಿತ್ಯವು ಭಕ್ತಿಯ ಮೂಲ ನೆಲೆಯನ್ನು ಆಶಯವಾಗಿಸಿಕೊಂಡು ಜನಮಾನಸದಲ್ಲಿ ಬಿತ್ತರಿಸುತ್ತಾ ಸಾಗಲು, ವಚನ ಸಾಹಿತ್ಯದ ಹಿನ್ನಲೆ, ಪ್ರೇರಣೆಗಳೂ ಕಾರಣವಾದವು. ಶರಣರು ೧೨ನೇ ಶತಮಾನದಲ್ಲಿ ನಡೆಸಿದ ವಚನ ಚಳುವಳಿಯು ಭಾಷೆ, ಸಾಹಿತ್ಯ, ಸಮಾಜ, ಸಂಸ್ಕೃತಿ ಮುಂತಾದವುಗಳ ಮೇಲೆ ತನ್ನದೇ ಆದ ವಿಶಿಷ್ಟ ಪ್ರಭಾವವುಂಟು ಮಾಡಿರುವುದನ್ನು ನೆನೆಯಬಹುದು. ಈ ಹಿನ್ನೆಲೆಯಲ್ಲಿ ತಮ್ಮ ಭಕ್ತಿ ಸಾಹಿತ್ಯದ ಅಭಿವ್ಯಕ್ತಿಗೆ ಗೇಯರೂಪ ಕೊಟ್ಟ ಹರಿದಾಸರು ಖಂಡಕಾವ್ಯ ಕೀರ್ತನೆಗಳನ್ನು ರಚಿಸಿದರು. ಕೀರ್ತನೆ ಎಂಬುದು ಹಾಡುವುದು, ಹೊಗಳುವುದು ಎಂಬರ್ಥವನ್ನೇ ಪಡೆಯುವುದಾದರೂ ಭಗವತ್ ಸಾಕ್ಷಾತ್ಕಾರಕ್ಕಾಗಿ ಹರಿದಾಸರು ಕಂಡುಕೊಂಡ ಮಾರ್ಗ ಎನ್ನಬಹುದು. ಪ್ರಾಚೀನ ಸಂಪ್ರದಾಯಗಳನ್ನು ಧರ್ಮ ವೆಂಬುದಾಗಿ ಭ್ರಮಿಸಿ, ಆ ಧರ್ಮದ ಆಚರಣೆಗೆ ನೂರಾರು ಕಟ್ಟುಪಾಡುಗಳಿಂದ ಜನಸಾಮಾನ್ಯರೆಲ್ಲರಿಗೂ ಧರ್ಮದ ವಿಚಾರ, ಆಚರಣೆಗಳು ನಿಲುಕದೆ ಸಾಮಾಜಿಕ ಅಂತರವು ಬೃಹದಾಕಾರವಾಯಿತು. ಧರ್ಮವು ಜನರ ಬದುಕಿನ ನೆಲೆಯಿಂದ ದೂರಾದ ಸಂದರ್ಭದಲ್ಲಿಯೇ, 'ಭಕ್ತಿ'ಯು ವಚನ ಹಾಗೂ ದಾಸ ಸಾಹಿತ್ಯದ ಮೂಲ ನೆಲೆಯಾಗಿ ಅರಳಿತು. ಜನಸಾಮಾನ್ಯರನ್ನೂ ಆಕರ್ಷಿಸಿತು. ಈ ಹಿನ್ನೆಲೆಯಲ್ಲಿ ದಾಸ ಸಾಹಿತ್ಯವು ಸಂಗೀತದ ಮಧುರಾಲಾಪದೊಂದಿಗೆ ಜನಸಾಮಾನ್ಯರ ಮನ-ಮನೆಗಳಲ್ಲೂ ಸಂಚರಿಸಲಾರಂಭಿಸಿತು.

ಹರಿದಾಸರ ರಚನೆಗಳಲ್ಲಿ ಧರ್ಮ ಪ್ರಚಾರವಷ್ಟೇ ಅಲ್ಲದೇ, ಮಾನವ ಬದುಕಿನ ಆತ್ಮೋದ್ಧಾರದ ಜೊತೆ ಜೊತೆಗೆ ಸಮಾಜೋದ್ಧಾರವು ಅಡಗಿರುವುದನ್ನು ಗುರುತಿಸಬಹುದು.

''ಕೀರ್ತನೆ, ದೇವರನಾಮ ಎಂಬ ಹೆಸರು ಯಾವಾಗ ಪ್ರಚಾರದಲ್ಲಿ ಬಂತೆಂಬುದು ತಿಳಿಯದು. ಬಹುಶಃ ಪುರಂದರ ದಾಸರು ಮತ್ತು ಕನಕದಾಸರ ಕಾಲದಲ್ಲಿ ಬಂದಿರಬಹುದೆಂದು ಕಾಣುತ್ತದೆ. ದೇವರ

ನಾಮಸ್ಮರಣೆ, ಸ್ತುತಿಲೀಲೆಗಳ ಕಥನ ಇವು ಪ್ರಧಾನವಾಗಿದ್ದ ಕಾರಣ ಕೀರ್ತನ ಪದ ವಿಶೇಷವು ರೂಢವಾಗುತ್ತಾ ಬಂದಿತು. ಇದಕ್ಕೆ 'ದಾಸರ ಪದ' ಎಂದು ಹೇಳುವ ಪ್ರಥೆಯೂ ಉಂಟು..."[7] ಈ ಹೇಳಿಕೆಗಳನ್ನು ನೋಡಿದಾಗ ಈಗಾಗಲೇ ರೂಢಿಯಲ್ಲಿದ್ದ ಗೀತಪ್ರಕಾರವೂ ವಚನಕಾರರ ಸಂದರ್ಭದಲ್ಲಿ 'ಸ್ವರ ವಚನ' ವೆಂದೂ, ಹರಿದಾಸರ ಸಂದರ್ಭದಲ್ಲಿ 'ಕೀರ್ತನೆ' ಎಂದು ಕರೆಸಿಕೊಳ್ಳಲಾರಂಭಿಸಿತು. ಆದರೆ ಬಹು ವ್ಯಾಪಕವಾಗಿ ಗೀತ ಪ್ರಕಾರ ಬಳಕೆಗೊಂಡದ್ದು ಹರಿದಾಸರ ಯುಗದಲ್ಲಿ. ಪಲ್ಲವಿ, ಅನುಪಲ್ಲವಿ ಹಾಗೂ ನುಡಿ, ಅಂಕಿತಗಳಿಂದ ಕೂಡಿದ ಸಾಹಿತ್ಯ ರೂಪವು ಹರಿದಾಸರಲ್ಲಿ ಸ್ಫೂರ್ತಿಯುಂಟು ಮಾಡಿತು. ಕೈಯಲ್ಲಿ ಚಿಟಿಗೆ, ತಂಬೂರಿ ಹಿಡಿದು, ಕಾಲಿಗೆ ಗೆಜ್ಜೆ ಕಟ್ಟಿ ಸಾಹಿತ್ಯವೆಂಬ ಹಾಲಿಗೆ ಸಂಗೀತವೆಂಬ ಸಕ್ಕರೆ ಸೇರಿಸಿ ಹಾಡಿ ಕುಣಿದರು. ಈ ಗೇಯ ಗುಣದಿಂದ ಜನರ ಅಂತರಂಗವನ್ನು ತಲುಪಿದ ಹರಿದಾಸರು ಕೀರ್ತನೆಯ ಮೂಲಕವೇ ತಮ್ಮ ಸುತ್ತಲಿನ ಸಮಾಜದ ಅಂಕುಕೊಂಡುಗಳನ್ನು ವಿಡಂಬನಾತ್ಮಕವಾಗಿ ಹಾಡುತ್ತಾ, ಸಮಾಜದ ರೀತಿ, ನೀತಿಗಳನ್ನು ತಿದ್ದಲಾರಂಭಿಸಿದರು. ಈ ಸಂಗೀತ ಗುಣದಿಂದ ಜನಮಾನಸದಲ್ಲಿ ಬಹುವಾಗಿ ರೂಢಿಯಾಗಿದ್ದು, ಹೆಂಗಳೆಯರ ದಿನನಿತ್ಯದ ಬದುಕಿನ ಕೆಲಸ ಕಾರ್ಯಗಳಲ್ಲಿ ಹರಿಕೀರ್ತನೆಯು ಬಹು ಸುಲಭವಾಗಿ ಸರಳವಾಗಿ ಭಕ್ತಿಯ ಧಾರೆಯಾಗಿ ಹರಿಯಲಾರಂಭಿಸಿತು.

ಹರಿದಾಸ ಸಾಹಿತ್ಯಕ್ಕೆ ಶ್ರೀಪಾದರಾಜರ ನಂತರ ಮಾರ್ಗದರ್ಶಿಯಾಗಿ ಮುನ್ನಡೆಯಾದವರು ಶ್ರೀ ವ್ಯಾಸರಾಯರು. ವಿಜಯನಗರದ ಕೃಷ್ಣದೇವರಾಯನ ಕಾಲದಲ್ಲಿ ವ್ಯಾಸರಾಯರು ಹೆಚ್ಚು ಪ್ರಸಿದ್ಧಿಯಾಗಿದ್ದರು. ವ್ಯಾಸರಾಯರ ಶಿಷ್ಯಸಮೂಹದಲ್ಲಿ ಪುರಂದರದಾಸರು, ಕನಕದಾಸರು ತಮ್ಮ ಭಕ್ತಿ, ಜ್ಞಾನ, ವೈರಾಗ್ಯಗಳಿಂದ ಕನ್ನಡ ಸಾಹಿತ್ಯಕ್ಕೆ ಅವಿಸ್ಮರಣೀಯ ಕೊಡುಗೆಯಿತ್ತಿದ್ದಾರೆ. 'ಕರ್ನಾಟಕ ಸಂಗೀತ ಪಿತಾಮಹ' ಎಂದು ಕರೆಸಿಕೊಂಡ ಪುರಂದರರು ದಾಸ ಸಾಹಿತ್ಯಕ್ಕೆ ಶ್ರೇಷ್ಠ ಕೊಡುಗೆ ನೀಡಿದ್ದಾರೆ. ಪುರಂದರ ದಾಸರ ರಚನೆಗಳು ನಾಲ್ಕು ಲಕ್ಷ ಎಪ್ಪತ್ತೈದು ಸಾವಿರ, ಆದರೆ ಉಪಲಬ್ಧವಿರುವ ಪುರಂದರದಾಸರ ಕೃತಿಗಳು ಸಾವಿರ ಮಾತ್ರ. ದ್ವೈತ ಸಿದ್ಧಾಂತವನ್ನು ಪ್ರಚುರಪಡಿಸುತ್ತಾ, ಸಾಮಾಜಿಕ ಚಿಂತನೆಯನ್ನು ತಮ್ಮ ಕೃತಿಗಳಲ್ಲಿ ರಚಿಸಿದ್ದಾರೆ. ಸಂಸ್ಕೃತ ಭಾಷೆಯು ತನ್ನ ಪ್ರಬುದ್ಧ ಸಾಹಿತ್ಯದಿಂದ ಜನಸಾಮಾನ್ಯರಿಂದ ದೂರವುಳ್ಳಿಯಿತು. ಆಗ, ಪುರಂದರರು ತಮ್ಮ ಸರಳ ದೇಸಿಭಾಷೆಗೆ ಒತ್ತುಕೊಟ್ಟು ಜನಸಾಮಾನ್ಯರೆಲ್ಲರಿಗೂ ಅರ್ಥವಾಗುವಂತೆ ಕೀರ್ತನೆಗಳನ್ನು ರಚಿಸಿದರು. ಮನುಷ್ಯನ ಕರ್ಮಠತನವನ್ನು, ಡಂಭಾಚಾರಗಳನ್ನು ಬಯಲಿ ಗೆಳೆದು ಮನುಷ್ಯತ್ವದ ಭಾವನೆಗಳನ್ನು ಹಾಗೂ ಹರಿಭಕ್ತಿಯನ್ನು ತಮ್ಮ ಕೀರ್ತನೆಗಳಲ್ಲಿ ರಚಿಸಿದ್ದಾರೆ. 'ದಾಸರೆಂದರೆ ಪುರಂದರ ದಾಸರಯ್ಯ' ಎಂದು ಗುರು ವ್ಯಾಸರಾಯರಿಂದಲೇ ಕರೆಸಿಕೊಂಡವರು ಪುರಂದರ ದಾಸರು. 'ಜ್ಞಾನ ವೈರಾಗ್ಯ ಸಂಪನ್ನಂ ಭಕ್ತಿ ಮಾರ್ಗಪ್ರವರ್ತಕಂ' ಪುರಂದರ ಗುರುಂವಂದೇ ದಾಸ ಶ್ರೇಷ್ಠ ದಯಾನಿಧೆ' ಎಂಬುದು ಪುರಂದರ ದಾಸರ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ತಿಳಿಸುವಂತಿದೆ. ಪುರಂದರ ದಾಸರಂತೆಯೇ ಕನಕದಾಸರು ಸಮಕಾಲೀನ ದಾಸ ಶ್ರೇಷ್ಠರಾಗಿ ತಮ್ಮ ಕೃತಿಗಳಿಂದ ಹರಿದಾಸ ಸಾಹಿತ್ಯಕ್ಕೆ ಜೀವ ತುಂಬಿದವರು.

ಕನಕದಾಸರು ತಮ್ಮ ಜ್ಞಾನ ಪ್ರತಿಭೆಗಳಿಂದ ಕೀರ್ತನೆಗಳಷ್ಟನ್ನೇ ರಚನೆ ಮಾಡದೆ, ಹಲವಾರು ಕೃತಿ ರಚನೆಗೂ ತೊಡಗಿಸಿಕೊಂಡು ಮೋಹನ ತರಂಗಿಣಿ, ನಳಚರಿತೆ, ರಾಮಧಾನ್ಯ ಚರಿತೆ, ಹರಿಭಕ್ತಿಸಾರ ಕೃತಿಗಳನ್ನು ರಚಿಸಿದ್ದಾರೆ. ಸಮಾಜದ ಕೆಳವರ್ಗದ ಜನರ ನೋವು ನಲಿವುಗಳನ್ನು ಸಂವೇದನಾ ರೂಪದಲ್ಲಿ ಕನಕದಾಸರ ಕೀರ್ತನೆಗಳಲ್ಲಿ ಮೂಡಿಬಂದಿವೆ. ಕನಕದಾಸರು ತಮ್ಮ ಅಪೂರ್ವವಾದ ಕಾವ್ಯಭಿವ್ಯಕ್ತಿಯಲ್ಲಿ ಕಾವ್ಯಮೌಲ್ಯ ಹಾಗೂ ತೀವ್ರ ವಿಡಂಬನಾ ಧಾಟಿಯಲ್ಲಿ ರಚನೆ ಮಾಡಿದ್ದಾರೆ. ಅಂತೆಯೇ ಕನಕದಾಸರನ್ನು ದಾಸ ಸಾಹಿತ್ಯದ ವಿಶಿಷ್ಟ ಸ್ಥಾನದಲ್ಲಿ ನೋಡಲಾಗಿದೆ. ಹರಿದಾಸರ ಗುರಿ ಸಮಾಜ ಸುಧಾರಣೆಯಾಗಿದೆ. ಅದು ಆರ್ಥಿಕ ಸುಧಾರಣೆಯಾಗದಿದ್ದರೂ ಆತ್ಮೋನ್ನತಿಗೆ ಸಹಕಾರಿಯಾದ ಕರ್ಮವಿಮುಕ್ತಿಗೆ ಕಾರಣವಾಗಿದೆ. ಅವರು ಗಳಿಸಿದ ಲೋಕಾನುಭವ, ಅಪಾರವಾದುದು ಇಂತಹ ಅನುಭವ ಗಳಿಂದಲೇ ಹರಿದಾಸರ ಹಾಡುಗಳು ವಿಶಿಷ್ಟವೂ ಆಗಿ, ಜನಪ್ರಿಯ ಮೌಲ್ಯಗಳನ್ನು ಒಳಗೊಂಡಿವೆ.

ಕನ್ನಡದಲ್ಲಿ ನರಹರಿ ತೀರ್ಥರೇ ಕೀರ್ತನೆಯ ಪ್ರಥಮ ಕರ್ತೃ(ಪ್ರೊ.ಎ.ವಿ.ನಾವಡ ಹಾಗೂ ಗಾಯಿತ್ರಿ ನಾವಡ ಅವರು ಸಂಪಾದಿಸಿದ 'ಸಾವಿರ ಕೀರ್ತನೆಗಳು' ಎಂಬ ಸಂಕಲನವನ್ನು ಗಮನಿಸಲಾಗಿದೆ)ವೆಂದು ಪರಿಗಣಿತರಾಗಿದ್ದಾರೆ. ಅನಂತರ ಬಂದ ಪುರಂದರ, ಕನಕದಾಸರು ದಾಸ ಸಾಹಿತ್ಯದ ಅಶ್ವಿನೀ ದೇವತೆಗಳೆಂದು ಹೆಸರು ಪಡೆದವರು. ಅನಂತರದಲ್ಲಿ ಬಂದ ಪ್ರಸನ್ನವೆಂಕಟದಾಸ, ವಿಜಯದಾಸ, ಗೋಪಾಲದಾಸರು ಹರಿದಾಸ ಸಾಹಿತ್ಯದಲ್ಲಿ ಎರಡನೇ ಘಟ್ಟದಲ್ಲಿ ಹೆಸರುವಾಸಿಯಾದವರು. ಪ್ರತಿಯೊಬ್ಬ ದಾಸರು ತಾವು ಕಂಡುಂಡ ಅನುಭವಗಳು, ಭಕ್ತಿ ಜ್ಞಾನಗಳ ಮೂಲಕ ಕೀರ್ತನೆಗಳನ್ನು ರಚಿಸಿದ್ದಾರೆ. ಎಲ್ಲರ ಉದ್ದೇಶವೂ ಮೋಕ್ಷಮಾರ್ಗದ ಏಕೈಕ ಗುರಿಯಾಗಿದೆ. ಈ ಮೋಕ್ಷ ಸಾಧನೆಗೆ ಉತ್ತಮ ಮಾಧ್ಯಮವೆಂದರೆ ಮಾನವ ಜನ್ಮವೆಂಬುದು ದಾಸರ ಅಭಿಪ್ರಾಯವಾಗಿದೆ. ಆದುದರಿಂದಲೇ ಪುರಂದರದಾಸರು ''ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ'' ಎಂದು ಸಾರಿ ಹೇಳಿದರು. ಈ ಜೀವವು ಕರ್ಮಪಾಶದಿಂದ ಹಲವಾರು ಕ್ರಿಮಿಕೀಟಾದಿ ಜೀವಿಗಳಾಗಿ ಅನೇಕ ಜನ್ಮಗಳವರೆಗೂ ನಡೆದು ಯಾವುದೋ ಸುಕರ್ಮದಿಂದ ಮಾನವ ಜನ್ಮ ಪಡೆಯುತ್ತದೆ. ಕ್ರಿಮಿಕೀಟಾದಿಗಳಿಂದ, ಪ್ರಾಣಿಪಕ್ಷಿಗಳಿಂದ ಮಾಡಲಾಗದ ಕಾರ್ಯಗಳನ್ನು ಮಾನವನು ತನಗೆ ದೊರೆತ ಬುದ್ಧಿಶಕ್ತಿಯಿಂದ ಕೈಗೊಳ್ಳಬಹುದು. ಮನುಷ್ಯನು ಸೃಷ್ಟಿಯಲ್ಲಿ ವಿಶಿಷ್ಟವಾದ ವಾಕ್ ಸಾಮರ್ಥ್ಯವನ್ನು, ವಿವೇಚನಾ ಶಕ್ತಿಯನ್ನು ಪಡೆದಿರುವನು, ಅವನಲ್ಲಿ ಪಶುತ್ವ, ಮನುಷತ್ವಗಳೆರಡೂ ಅಡಗಿರುತ್ತದೆ. ಆದರೆ ಪಶುತ್ವವನ್ನು ಮೆಟ್ಟಿ ನಿಂತು ಮಾನವತ್ವವನ್ನು ಮುಂದುವರಿಸಿಕೊಂಡಾಗ ಭಕ್ತಿಯು ಮುಕ್ತಿಯತ್ತ ಸಾಗಲು, ದೇವ ಸಾಕ್ಷಾತ್ಕಾರ ಮಾಡಿಕೊಳ್ಳುವುದು ಸುಲಭ ಮಾರ್ಗವಾಗುವುದು. ಜೀವನದ ಏರುಪೇರುಗಳಲ್ಲಿ ಒದಗುವ ನಶ್ವರ ಸುಖಗಳನ್ನು ಕಡೆಗಣಿಸಿ ಶಾಶ್ವತ ಸುಖ ಮೋಕ್ಷವನ್ನು ಪಡೆಯಬೇಕಾದರೆ ಮಾನವನು ದೇಹದ ನಶ್ವರತೆಯನ್ನು ಅರಿತಿರಬೇಕು. ಆದ್ದರಿಂದಲೇ

ಪುರಂದರರು 'ನಿತ್ಯವಲ್ಲ, ನಿತ್ಯವಲ್ಲ ಅನಿತ್ಯ ದೇಹವಿಲ್ಲದಣ್ಣ' ಎಂದು ಮೊದಲಾಗಿ ಹೇಳುತ್ತಾ ಜೀವದ ಅಲ್ಪತೆಯನ್ನು ಸಾರಿದರು."[3] ಹರಿದಾಸರು ಭಕ್ತಿಯನ್ನೇ ಪ್ರಧಾನವಾಗಿಸಿಕೊಂಡು ಮಾನವನ ಬದುಕಿನ ಕಷ್ಟ ಪರಂಪರೆಗಳ ನಿವಾರಣೆಗೆ ದೈವಭಕ್ತಿಯೊಂದೇ ಪರಿಹಾರಮಾರ್ಗವಾಗಿದೆ. ಅದರಲ್ಲಿಯೂ ಪ್ರತಿಯೊಬ್ಬ ದಾಸರು ತಮ್ಮ ಭಕ್ತಿಯ ಸ್ವರೂಪವನ್ನು ಪಂಚ ವಿಧಗಳಲ್ಲಿಯೂ, ಆರಾಧಿಸುತ್ತಾ, ಭಗವಂತನಲ್ಲಿ ಸರ್ವಸ್ವ ಬದುಕನ್ನು ಅರ್ಪಿಸುವ ಸಮರ್ಪಣಾ ಭಾವವನ್ನು ಹೊಂದಿರುವುದನ್ನು ಕಾಣಬಹುದು. ಇದರೊಂದಿಗೆ ನೀತಿಬೋಧೆ ಮತ್ತು ಆತ್ಮವಿಮರ್ಶೆಯ ಕೀರ್ತನೆಗಳನ್ನು ಗಮನಿಸಬಹುದು. ಇದಕ್ಕೆ ಮಹಿಳಾ ಹರಿದಾಸರು ಹೊರತಾಗಿಲ್ಲ. ಗಲಗಲಿಯ ಅವ್ವನವರು ತಮ್ಮ ಕೀರ್ತನೆಗಳಲ್ಲಿ ಹರಿದಾಸರ ಭಕ್ತಿಯ ತಾತ್ವಿಕ ಹಿನ್ನಲೆಯಲ್ಲಿಯೇ ಸಾಮಾಜಿಕ ಮೌಲ್ಯಗಳನ್ನು ಹೇಳುವ ನೀತಿಯು ವಿಶಿಷ್ಟವಾಗಿವೆ. ಅವ್ವನವರ ಕೀರ್ತನೆಗಳನ್ನು ಪ್ರಧಾನವಾಗಿ ನಾವು ಮೂರು ವಿಧವಾಗಿ ವಿಂಗಡಿಸಿಕೊಳ್ಳಬಹುದು. ಪೌರಾಣಿಕ ಧಾರ್ಮಿಕ ಹಾಗೂ ಸಾಮಾಜಿಕ ಕೀರ್ತನೆಗಳೆಂದು ವಿಂಗಡಿಸಬಹುದು. ತಮ್ಮ ಕೀರ್ತನೆಗಳಲ್ಲಿ ಹರಿದಾಸ ಸಾಹಿತ್ಯದ ಹಿನ್ನಲೆಯಲ್ಲಿ ಪುರಾಣ ಸಂಗತಿಗಳನ್ನು, ಮಹಾಭಾರತ, ರಾಮಾಯಣ, ಭಾಗವತದ ಪಾತ್ರಗಳ ಮೂಲಕ ವಸ್ತು ವಿವರಣೆಯನ್ನು, ನೀಡಿದ್ದಾರೆ. ವಿಸ್ತಾರ ವರ್ಣನೆಯಿಂದಲೂ ಶೃಂಗಾರ, ಅಲಂಕಾರಗಳಿಂದಲೂ ತಮ್ಮ ಕಾವ್ಯಭಿವ್ಯಕ್ತಿಯನ್ನು ಉಪಮೆಗಳಿಂದಲೂ ಹೆಚ್ಚು ಹೆಚ್ಚು ಅರ್ಥಪೂರ್ಣವಾಗಿ ರಚಿಸಿದ್ದಾರೆ. ಅವ್ವ, ತನ್ನ ಕೀರ್ತನೆಗಳಲ್ಲಿ ಹೊರ ನೋಟಕ್ಕೆ ಅಲಂಕಾರ ಆಭರಣಗಳ ವರ್ಣನೆಯೆಂಬಂತೆ ತೋರಿದರೂ ಭಾವಾರ್ಥದಲ್ಲಿ ತಾನು ಕಂಡ ಲೋಕಾನುಭವವನ್ನು ಭಕ್ತಿಯ ನೆಲೆಯಲ್ಲಿ ಪ್ರಚುರ ಪಡಿಸಿದ್ದಾಳೆ.

ಅವ್ವನವರ ಕೀರ್ತನೆಗಳನ್ನು ಲೋಕಾನುಭವ ಹಾಗೂ ಸ್ವಾನುಭವಗಳ ಹಿನ್ನೆಲೆಯಲ್ಲಿ ಇನ್ನೂ ಸೂಕ್ಷ್ಮವಾಗಿ ಅಧ್ಯಯನಿಸಬೇಕಾದುದರಿಂದ ಆರು ವಿಧಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಅವುಗಳನ್ನು ಕ್ರಮವಾಗಿ ೧. ಸಮಾಜ ವಿಮರ್ಶೆ ೨. ಭಕ್ತಿ ಸ್ವರೂಪ ೩. ಸಮರ್ಪಣಾ ಮನೋಭಾವ ೪. ನೀತಿಬೋಧೆ ೫. ಆತ್ಮವಿಮರ್ಶೆ ಮತ್ತು ೬. ಮುಕ್ತಿ ಮಾರ್ಗ ಎಂಬುದಾಗಿ ಗುರುತಿಸಿಕೊಳ್ಳಲಾಗಿದೆ. ಅತ್ಯಂತ ಸಂಪ್ರದಾಯ ಮನೆತನದಲ್ಲಿನ ಮಹಿಳೆಯೊಬ್ಬರು ಅಂದು ವಿದ್ಯಾಭ್ಯಾಸ ನಡೆಸುವುದೇ ಕಷ್ಟ ಆದರೆ ಅವ್ವ, ತನ್ನ ಮಕ್ಕಳಿಂದಲೇ ಶಾಸ್ತ್ರಭ್ಯಾಸಗಳನ್ನು ಕಲಿತು ಕೀರ್ತನೆ ರಚನೆಗೆ ತೊಡಗಿರುವುದನ್ನು ಗಮನಿಸಿದಾಗ ಆಕೆಯ ಕಾವ್ಯ ನಿರ್ಮಿತಿಯ ಅಭೀಪ್ಸೆ ಹಾಗೂ ಆಸಕ್ತಿಗಳು ಗೋಚರಿಸುತ್ತವೆ. ತನ್ನ ರಚನೆಗಳಲ್ಲಿ ಹರಿಪಾರಮ್ಯತೆ ಸಾರಲು ಮುಂದಾಗಿರುವ ಇವರು ದಾಸಶ್ರೇಷ್ಠರಂತೆಯೇ ಸಾಮಾಜಿಕ ವಿಡಂಬನೆ ಹಾಗೂ ಆತ್ಮ ವಿಡಂಬನೆಗೆ ತೊಡಗಿರುವುದು ಸಹಜವಾಗಿದೆ. ತನ್ನ ಸುತ್ತಲಿನ ಸಾಂಪ್ರದಾಯಿಕ ವಾತಾವರಣದಲ್ಲಿಯೇ ಕಾವ್ಯ ನಿರ್ಮಿತಿಗೆ ತೊಡಗಿದ್ದುದು ವಿಶಿಷ್ಟವಾಗಿದೆ. ಅವ್ವನವರು ತಮ್ಮ ಕಾಲದಲ್ಲಿ ನಡೆಯುತ್ತಿರುವ ಸಾಮಾಜಿಕ ಜೀವನವನ್ನು ಬಹಳ ಸುಂದರವಾಗಿ ಕಟ್ಟಿಕೊಟ್ಟಿದ್ದಾರೆ.

## ೧. ಸಮಾಜ ವಿಮರ್ಶೆ

ಅವ್ವ, ತನ್ನ ಕೀರ್ತನೆಗಳಲ್ಲಿ ಸಮಾಜವನ್ನು ತೀಕ್ಷ್ಣವಾಗಿ, ನೇರವಾಗಿ ತಮ್ಮ ನಿಂದಾಸ್ತುತಿ ತಂತ್ರದಿಂದಲೇ ರಚಿಸಿದ್ದಾರೆ. ಕೀರ್ತನೆಗಳು ಹೊರರೂಪದಲ್ಲಿ ಪುರಾಣ, ಮಹಾಭಾರತ, ಭಾಗವತ ಪಾತ್ರಗಳಲ್ಲಿ ಕಂಡುಬಂದರೂ, ಅವುಗಳ ಭಾವಾರ್ಥವು ಉತ್ತಮವಾದ ವಸ್ತು ವಿಷಯಗಳ ಹರಹನ್ನು ಒಳಗೊಂಡಿವೆ. ಹರಿಪಾರಮ್ಯತೆಯು ದಾಸರ ಮೂಲ ಗುರಿಯಾಗಿದ್ದರೂ ಈ ಅಧ್ಯಾತ್ಮಿಕದ ಗುಂಗಿನಲ್ಲಿ ಅವರು ಅಲೌಕಿಕದ ಸ್ವೀಕರಣೆ ಮಾಡುತ್ತಾ ಲೌಕಿಕ ಬದುಕನ್ನು ನಿರಾಕರಣೆ ಮಾಡಲಿಲ್ಲ. ಅದರ ಬದಲಾಗಿ ಲೌಕಿಕದ ಬದುಕನ್ನು ಮತ್ತಷ್ಟು ಉತ್ತಮವಾಗಿಸಿಕೊಳ್ಳುವ ನಿಟ್ಟಿನಲ್ಲಿ ಜೀವನ ಮೌಲ್ಯವನ್ನು ರೂಢಿಸಿಕೊಳ್ಳುವಲ್ಲಿ ಶರೀರವೊಂದು ಸಾಧನವೆಂದಿದ್ದಾರೆ.ಮನುಷ್ಯ ಮನಷ್ಯರ ನಡುವೆ ಮಾನವ ಪ್ರೀತಿ, ಪರಸ್ಪರ ಅರಿವು ಮೂಡಿಸುವ ದಿಕ್ಕಿನಲ್ಲಿ ಹರಿದಾಸ ಆಂದೋಲನವು ಹೊಸ ಆಯಾಮವನ್ನು ತಂದುಕೊಟ್ಟಿತು. ಅನೇಕ ಸಾಮಾಜಿಕ ಧಾರ್ಮಿಕ ಅಂಧಶ್ರದ್ಧೆ ಮೂಢನಂಬಿಕೆಗಳನ್ನು ಪ್ರತಿಭಟಿಸುವಲ್ಲಿ ದಾಸರದು ಪ್ರಗತಿಪರ ಧೋರಣೆಯಾಗಿದೆ. ಪುರಂದರ ದಾಸರು ಹೇಳುವಂತೆ,

''ನೇಮವನು ತಾಳುವರು ದಾನವ ಮಾಡುವರು
ಕಾಮಕ್ರೋಧ ಮದಮತ್ಸರ ಬಿಡದೆ ಇಂಥಾ
ನಾಯಿ ಕುನ್ನಿಗಳ ಕಂಡೊಳಗಿಟ್ಟುಕೊಂಡರೆ
ಕಾಶಿಯಲಿ ಮುಳುಗಿದ ಫಲವೇನಯ್ಯ''

ಸಮಾಜ ಯಾವಾಗಲೂ ಬಾಹ್ಯ ನಡವಳಿಕೆಗಳನ್ನು ಗಮನಿಸುತ್ತಲೇ ಚಲಿಸುವಂತಹದು, ಅದ್ದರಿಂದ ಮನದಲ್ಲಿ ಸದಾ ಮದ, ಮಾತ್ಸರ್ಯಗಳನ್ನು ತುಂಬಿಕೊಂಡು ಅನೇಕ ನೇಮಗಳನ್ನು ದಾನ ಧರ್ಮಗಳನ್ನು ಮಾಡಿದರೂ ನಿಷ್ಫಲವಾಗುವುದು, ಮನದೊಳಗಿನ ಅಹಂಕಾರ, ಮಾತ್ಸರ್ಯಗಳನ್ನು 'ನಾಯಿಕುನ್ನಿ'ಗೆ ಹೋಲಿಸಿರುವುದು ಪ್ರಾಣಿ-ಸದೃಶ ಮನಸ್ಸು ಎಂಬುದಾಗಿರುವುದು.'' ಅವ್ವನವರು ಕೂಡ, ತಮ್ಮ ಸಮಾಜದ ರೀತಿ-ನೀತಿಗಳನ್ನು ಹೇಳುತ್ತಾ, ಅಲ್ಲಿನ ಆಚಾರ ವಿಚಾರಗಳು ನೀತಿಯುತವಾಗಿಲ್ಲದಾಗ ಎಚ್ಚರಿಸುವಂತೆ, ನಡವಳಿಕೆಯ ದಾರಿ ತಿದ್ದಿಕೊಳ್ಳಲಾಗದಿದ್ದರೆ ನರಕಕ್ಕೆ ದಾರಿಯಾಗುವುದು ಎಂಬುದನ್ನು ಬಹುತೀಕ್ಷ್ಣವಾಗಿ ಹೇಳಿರುವರು.

''ಕೇಳೆಲೊವಾದಿ ಕೇಳೆಲೊವಾದಿ
ಕೇಳದಿದ್ದರೆ ತಮಸಿಗೆ ಹೋದಿ ||ಪ||
ಅತ್ತೆಸೊಸೆ ಒಂದೆ ಮಕ್ಕಳುಮರಿಯೊಂದೆ
ಹೆತ್ತಮ್ಮನೊಂದೆ ಮಡದಿಯೊಂದೆ
ಹೆತ್ತಮ್ಮ ಒಂದೆ ಮಡದಿ ಒಂದೆಯಾದರೆ

ವಿತ್ತವೆಚ್ಚಾಗಿ ಮದುವೆಯಾಕೆ ||೧||
ಇಂತೆಂಬೊ ದೈತ್ಯರನ ನಿಂತ ಕ್ಷಣದಿ ಕೊಂದಿ
ಕುಂತಿ ಮಕ್ಕಳ ಸಲುಹಿದಿ
ಕುಂತಿ ಮಕ್ಕಳ ಸಲುಹಿದಿ ಲಕ್ಷ್ಮಿಕಾಂತ
ನೀನಮ್ಮ ಕರುಣಿಸೊ ||೪||
ಖೊಳ ದೈತ್ಯರ ಚರಿಯ ತಾಳಲಾರದೆ
ಭೂದೇವಿ ಹೇಳಿದಳಾಗ ಹರಿಗ್ಹೋಗಿ
ಹೇಳಿದಾಳಾಗ ಹರಿಗ್ಹೋಗಿ ರಮಿಯರಸು
ಕೇಳಿದ ಪರಮ ಹರುಷಾಗಿ''||೫||

ಹೀಗೆ ವಿಸ್ತರಿಸಿ ಹೇಳುವ ನುಡಿಗಳನ್ನು ಬಿಡಿಸಿಕೊಂಡು ಅವಲೋಕಿಸಬಹುದಾದರೆ, ಅಪ್ಪನವರು ಒಂದೇ ಸೂರಿನಡಿ ಕೂಡು ಕುಟುಂಬದಲ್ಲಿ ಬದುಕುವ ಚಿತ್ರಣವನ್ನು ಕೊಡುವುದರೊಟ್ಟಿಗೆ, ಕೌಟುಂಬಿಕವಾಗಿ ಸ್ತ್ರೀಯರ ಮೇಲೆ ನಡೆಯುತ್ತಿದ್ದ ಹೀನ ಮನಸ್ಥಿತಿಯನ್ನು ಚಿತ್ರಿಸುವರು. ಈ ಮೂಲಕ ಮನುಷ್ಯನ ಮನಸ್ಸು ಲೌಕಿಕದ ಲೋಭಕ್ಕಿಳಿದಾಗ ಮಾನವ ಸಂಬಂಧಗಳ ಪವಿತ್ರತೆಯನ್ನು ಕಾಣಲಾಗದೆ ತೊಳಲಾಡುವ ಮನಸ್ಸುಗಳಿಗೆ ಎಚ್ಚರಿಕೆ ನೀಡಿರುವರು. ಸಂಪ್ರದಾಯದ ಹೆಸರಿನಲ್ಲಿ ವಿವಾಹವೊಂದು ಪ್ರಚಾರ ಪಟ್ಟಿಕೆಯಾಗುವುದೇ ವಿನಃ ಮತ್ತೇನೂ ಸಾಧಿಸಿ ದಂತಾಗದು. ಆದ್ದರಿಂದ ಬರೀ ಗಳಿಸಿದ ತೌಕಿಕ ಸಂಪತ್ತು ಕಳೆದುಕೊಳ್ಳುವುದಾಗಿದೆ ಎಂಬ ಸಾಮಾಜಿಕ ಎಚ್ಚರಿಕೆಯನ್ನು ಮೂಡಿಸಿದ್ದಾರೆ.

ಅದ್ವೈತವಾದ ಇಂತಹ ಸಂಪ್ರದಾಯದ ಕಟ್ಟಳೆಗಳಿಂದ ಇನ್ನಷ್ಟು ಅನಾಚಾರಗಳೇ ನಡೆಯುವುವು ಎಂಬುದನ್ನು ವ್ಯಕ್ತಪಡಿಸುತ್ತಾರೆ. ''ಹರಿದಾಸರ ಅನೇಕ ಕೀರ್ತನೆಗಳು ಅಂದಿನ ಸಾಮಾಜಿಕ ವ್ಯವಸ್ಥೆಗೆ ಕನ್ನಡಿ ಹಿಡಿಯುತ್ತವೆ. ಹೆಣ್ಣಿನ ಶೀಲದ ಬಗೆಗೆ ದಾಸರು ಆಗಿಂದಾಗ್ಗೆ ಆಡುತ್ತಿರುವುದನ್ನು ಕಂಡರೆ ಮಧ್ಯಕಾಲೀನ ಸಮಾಜದಲ್ಲಿ ಹೆಣ್ಣಿಗೆ ಭಯಮುಕ್ತ ವಾತಾವರಣ ಇದ್ದಿಲ್ಲವೆಂದು ಕಾಣುತ್ತದೆ. ಅದಕ್ಕಾಗಿಯೇ ದಾಸರು ''ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ' ತನ್ನ ಪತಿಯರೊಲುಮೆಗೊಲಿದು ತಾನು ಸುಖಿಸಬಾರದೆ'', 'ನೋಡದಿರು ಪರಸ್ತ್ರೀಯರ' ಎಂದು ಪ್ರಶ್ನಿಸಿದ್ದಿರಬೇಕು. ಪುರಂದರ ಕೀರ್ತನೆಯೊಂದು.

''ಪರಧನ ಪರಸತಿ ಪರನಿಂದೆಗಳಿಗಳುಪುತ
ತೊರೆಯೊಳು ಮಿಂದರೆ ದುರಿತ ಪೋಗುವುದೆ
ಸರುವವ ತೊರೆದು ಹರಿಯಧ್ಯಾನ ಮಾಡಲು
ವರವ ಕೊಡುವ ನಮ್ಮ ಪುರಂದರ ವಿಠಲ''

ಎಂದು ಹೇಳುತ್ತಾ, ಸರ್ವ ದುರಿತಗಳನ್ನೆಲ್ಲಾ ತೊರೆದು ಹರಿಚರಣಕ್ಕೆ ಶರಣಾದರೆ ವರವ ಕೊಡುವ ನಮ್ಮ ಪುರಂದರ ವಿಠಲ ಎಂದು ಮಾನವ ಮನಸ್ಸನ್ನು ತಿದ್ದಲು ಪ್ರಯತ್ನಿಸಿರುವರು. ವಿಜಯನಗರ ಕಾಲದ

ಲೌಕಿಕ ಭೋಗದ ಸನ್ನಿವೇಶದಲ್ಲಿ ಬದುಕಿ ಬಾಳಿದ ಪುರಂದರದಾಸರು ಅದರ ನಶ್ವರತೆಯ ಕಡೆಗೆ ಎಚ್ಚರಿಸಿದ್ದಾರೆ. ಅದನ್ನೇ ಅವರು 'ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ'. ಆನೆ ಕುದುರೆ ಒಂಟೆ ಲೊಳಲೊಟ್ಟೆ ಎಂದಿದ್ದಾರೆ. ದುಡಿಮೆಯನ್ನು ಮರೆತು ಹೆಣ್ಣು ಕೊಟ್ಟ ಅತ್ತೆ ಮಾವಂದಿರ ಮನೆಯಲ್ಲಿ ಸೋಮಾರಿಯಾಗಿ ದಿನಕಳೆವ ಮಂದಿಯನ್ನು ದಾಸರು ಟೀಕಿಸುವಲ್ಲಿನ ಅವರ ನಾಟಕೀಯ ಪ್ರತಿಭೆಯನ್ನು ಗಮನಿಸಬೇಕು. ಮೊದಲ ದಿನ 'ಇತ್ತ ಬನ್ನಿ ಕುಳ್ಳಿರೆಂದು ಬಲು ಉಪಚರಿಸುವರು' ಎನ್ನುವ ಒಂದು ವಾಸ್ತವವನ್ನು ಹೇಳಿ ಕೆಲವು ದಿನಗಳ ಬಳಿಕ 'ಅಷ್ಟಮಶನಿಯಿದು ಬಿಟ್ಟು ಹೋಗದು ನಮಗೆ ಅಳವಿಲ್ಲ' ಎನ್ನುವ ಕಟುವಾಸ್ತವವನ್ನು ನುಡಿವರು. ಸಾಲ ಮಾಡಿ ಭೋಗ ಜೀವನವನ್ನು ಕೈಕೊಂಬವರಿಗೆ ದಾಸರು ಬಗೆಬಗೆಯ ನುಡಿಯೇಟನ್ನು ನೀಡುವರು.''[೩] ಈ ರೀತಿಯ ಬರಹಕ್ಕೆ ಅವ್ವ ಹೊರತಾಗಿಲ್ಲ. ತಮ್ಮ ಸಮಕಾಲೀನ ಸಮಾಜದ ಆಡಂಬರವನ್ನು ಎತ್ತಿ ಹೇಳುತ್ತಾ, ಎಲ್ಲಾ ರೀತಿಯ ಭೋಗ ಜೀವನವನ್ನು ನಡೆಸುತ್ತಾ ನಿಜದ ಬದುಕನ್ನು ನಿಭಾಯಿಸಲಾರದ ಸೋಮಾರಿಗಳನ್ನು ತೀಕ್ಷ್ಣವಾಗಿ ಹಂಗಿಸಿರುವಳು.

''ಎಷ್ಟು ಸುಖವ ಕೃಷ್ಣನ ನೋಡಿ
ನೋಡಿ ಸುಖಿಸುವ ಜನರು
ಎಷ್ಟು ಎಷ್ಟು ಭಾಗ್ಯದಿಂದ
ತುಷ್ಟರು ಉತ್ಕೃಷ್ಟರಿವರು''
ಬಾಜಾರದೊಳಗೆಲ್ಲಾ ತೇಜಿ ಆನೆಯ ಸಾಲು
ಕಾಜಿನ ಕಂಬ ಕಿಟಕಿ ಕಮಲಾಕ್ಷಿ
ಕಾಜಿನ ಕಂಬ ಕಿಟಕಿ ಮಹಲೊಳು
ಜೂಜಾಡುವರು ಕಡೆಯಿಲ್ಲ''[೪]

ಅಂದಿನ ಸಮಾಜದಲ್ಲಿ ಶ್ರೀಮಂತಿಕೆಯ ಜೀವನವು ಮೇರೆಮೀರಿದ್ದು, ಸಾಮಾಜಿಕರು ತಮ್ಮ ಸಿರಿವಂತಿಕೆಯಲ್ಲಿ ಓಲಾಡುತ್ತಾ, ಅನಂತ ವಿಷಯ ಸುಖಗಳಲ್ಲಿ ಮೈಮರೆತು ಉತ್ಕೃಷ್ಟರೆನಿಸಿಕೊಳ್ಳುವುದನ್ನು ಕಂಡು ಅವ್ವ 'ತುಷ್ಟರು ಉತ್ಕೃಷ್ಟರಿವರು' ಎಂದು ಹಂಗಿಸಿದ್ದಾಳೆ. ಬದುಕಿನಲ್ಲಿ ಲೋಲುಪ ಜೀವನವಷ್ಟೇ ಮುಖ್ಯವಲ್ಲವೆಂದಿದ್ದಾಳೆ. ಹೊಟ್ಟೆ ತುಂಬಿರುವ ಜನರಿಗೆ ಬದುಕಿನ ಬಗ್ಗೆ ವಾಸ್ತವದ ಅರಿವಿಲ್ಲದುದು ಕಂಡು ಖೇದಗೊಂಡಿದ್ದಾಳೆ. ಅವ್ವ ತಮ್ಮ ಸಮಕಾಲೀನ ಸಮಾಜದಲ್ಲಿ ಲೋಲುಪ ಜೀವನದ ಉತ್ತುಂಗ ಸ್ಥಿತಿಯನ್ನು ವರ್ಣಿಸುತ್ತಾ,

''ಬಟ್ಟ ಮುತ್ತಿನ ತೋರಣ ಕಟ್ಟಿದ ಮನೆಯೊಳು
ಅಟ್ಟಳ ಮ್ಯಾಲೆ ಧ್ವಜಗಳು
ಅಟ್ಟಳ ಮ್ಯಾಲೆ ಧ್ವಜಗಳು ಗಗನಕ್ಕೆ
ಮುಟ್ಟವೆಂಬಂತೆ ನಿಲ್ಲಿಸ್ಯಾವೆ

ಚದುರ ರಾಮೇಶನು ಕುದುರೆ ಏರಿಕೊಂಡು
ಮದನ ಜನಕನು ಸುಳಿಯೋನೆ
ಮದನ ಜನಕನು ಸುಳಿಯೋನೆ
ಒಮ್ಮೊಮ್ಮೆ ಮುದದಿ ಭಕ್ತರನ ಸಲುಹಲಿ"[೫]

ಎಂಬುದಾಗಿ ಹೇಳುತ್ತಾ, ಅವ್ವ ತನ್ನ ಕಾವ್ಯವನ್ನು ಅಷ್ಟಕ್ಕೆ ಸೀಮಿತವಾಗಿಸದೆ, ಅಂದು ಸಾಮಾಜಿಕರು ಸಿರಿವಂತಿಕೆಯ ಉತ್ಕೃಷ್ಟರೆಂದು ಬಾಳುವಾಗ, ಅವರ ಸುಖದ ಬದುಕು ಹೊನ್ನು, ಹೆಣ್ಣುಗಳಿಂದ ಸಂಭ್ರಮಿಸುವ ಪರಿಯನ್ನು ವಿಜಯನಗರ ಕಾಲದ ಪ್ರಜಾಹಿತ ರಾಜಾಳ್ವಿಕೆಯನ್ನು ವರ್ಣಿಸಿರುವಳು.

"ಕಂತುನಯ್ಯನ ಅರಮನೆಯೊಳಗೆ ಅನಂತ ಪ್ರಜೆ ಬರಲು ಉಂಟು", 'ಮಿಂಚಿನಂತೆ ಹೊಳೆಯೊ ಕೆಂಚೆಯರು ಮೈಬಣ್ಣ, ಸುಳಿದಾಡೊ ಚಂಚಲಾಕ್ಷಿಯರು ಕಡೆಯಿಲ್ಲ' ಎಂದು ಅವ್ವನವರು ಸಿರಿವಂತಿಕೆ ಹೆಚ್ಚಿದಂತೆಲ್ಲಾ, ವಿಷಯ ಲೋಲುಪತೆಯು ಹೆಚ್ಚಾದುದು ಮುಂದಿನ ದಿನಗಳಲ್ಲಿ ಕೌಟುಂಬಿಕ ವಾತಾವರಣವು ಹದಗೆಡಲು ಕಾರಣವಾಗಿರಬಹುದು. ಅಂದಿನ ಬಾಜಾರಾದ ವರ್ಣನೆಯನ್ನು ನೀಡುವುದರೊಂದಿಗೆ ಒಂದು ವ್ಯವಸ್ಥಿತ ಮಾರುಕಟ್ಟೆ ಚಿತ್ರಣವನ್ನು ಹೀಗೆ ನೀಡುತ್ತಾಳೆ.

"ದಟ್ಟಾದ ಬೀದಿಯಲಿ ಪಟ್ಟಾವಳಿಯ ಜವಳಿ
ಇಟ್ಟು ಮಾರುವರು ಕಡೆಯಿಲ್ಲ
..................
ದ್ವಾರಕಶೆಟ್ಟರ ಭಾಗ್ಯ ಸರಿಗಾಣೆ ||೧||
ಜವಳಿ ಅಂಗಡಿಯ ಮುಂದೆ ಹವಳಗಾರರು
ಅಲ್ಲಿ ಕೊಳ್ಳುವ ನಾರಿಯರ ಕಡೆಯಿಲ್ಲ
ಕಂಚು ಹಿತ್ತಾಳೆ ಮಾರುವ ಕಂಚುಗಾರರಂಗಡಿ
ಸಂಚಿತವಾದ ನವ ಧಾನ್ಯ
.................. ಅಲ್ಲಲ್ಲಿ ||೪||
ಹಚ್ಚಿ ಮಾರುವರು ಕಡೆಯಿಲ್ಲ...
ರಂಗ ರಾಮೇಶನ ನಗರೀಲೆ
ಬಂಗಾರ ಬೆಳ್ಳಿ ಬೆಲೆ ಮಾಡಿ ಮಾರುವ
ರಂಗದುಟಿಯವರು ಕಡೆಯಿಲ್ಲ ||೫||

ಬೀದಿಯಲಿ ಪಟ್ಟಾವಳಿ ಜವಳಿಯನ್ನು, ಹವಳಗಾರರು, ಕಂಚುಹಿತ್ತಾಳೆ ಮಾರುವ ಕಂಚುಗಾರರು, ರಂಗ ದುಟಿಯವರು ಸಾಲು ಸಾಲು ಕುಳಿತು ವ್ಯಾಪಾರ ಮಾಡುವ ಚಿತ್ರಣ ಕಟ್ಟಿಕೊಟ್ಟಿದ್ದಾರೆ. ಸಿರಿವಂತಿಕೆಯು ಅಂದಿನ ದಿನಗಳಲ್ಲಿ ಸಾಮಾನ್ಯವಾದುದಾಗಿದೆ. ಮುಂದುವರೆದು 'ಕಡಲಶಯನನ ಪುರದಿ ಬಡವ

ರೊಬ್ಬರಿಲ್ಲ', ಕೊಡುವ್ಹೋನು ದಾನ ಕಡೆಯಿಲ್ಲ', 'ಶ್ರೀಕಾಂತನ ಕೈದಾನಕ್ಕೊಳಗಾಗಿ ಸ್ವರ್ಗದ ಅಂತಃಪುರದಲ್ಲಿ ಅಡಗಿದವು ಕೋಲ', ಒಂದಕ್ಕೊಂದು ತಾವು ನಿಂತು ಮಾತನಾಡುತ ತಂದೆ ರಾಮೇಶನ ಅರಮನೆಗೆ ತಾವು ಹೋಗೋದು ಛಂದಲ್ಲವೆಂದು ಜರಿದಾವು' ಈ ಸಾಲುಗಳಿಂದ ಸಿರಿವಂತಿಕೆಯಷ್ಟೇ ಅಂದು ಸ್ವೇಚ್ಛೆಯು ಜನರಲ್ಲಿ ಮನೆಮಾಡಿತ್ತು. ಹಾಗೂ 'ಸ್ವರ್ಗದ ಅಂತಃಪುರದಲ್ಲಿ ಅಡಗಿದವು' ಎಂಬುವುದು ಅಂದು ಸಾಮಾನ್ಯರ್‍ಯಾರು ರಾಜರ ಅರಮನೆ ತನಕ ಹೋಗಿ ಸೇರುವುದು ಛಂದಲ್ಲವೆಂಬ ಅಭಿಪ್ರಾಯ ಮೂಡಿಬಂದಿರುವುದು. ದ್ವಾರಕೆಯ ಸಂಭ್ರಮವನ್ನು ಭೂವೈಕುಂಠವೆಂದು ವರ್ಣಿಸುತ್ತಾರೆ. ಮಹಾಲಕ್ಷ್ಮಿಯು ಭೂಲೋಕದ ಕರವೀರಪುರದಲ್ಲಿ ಬಂದು ನೆಲೆನಿಂತು, ದ್ವಾರಕೆಯ ಸಡಗರವನ್ನು, ಅಲ್ಲಿನ ಹದಿನಾರು ಸಾವಿರ ಹೆಂಗಳೆಯರ ಕಲರವವನ್ನು ಕಂಡು ಜರೆಯುತ್ತಾಳೆ.

"ಕರವೀರ ಪುರವ ಸೇರಿದಳು
ಹದಿನಾರು ಸಾವಿರ ನಾರಿಯರ
ಭಾಗ್ಯವ ನೋಡಿ ಸೇರಿದಳು.
ಲಕುಮಿ ಜರಿದಾಳು"

ಅವ್ವ, ತಾನು ಕಂಡುಕೊಂಡ ಹರಿಸಾನಿಧ್ಯವಾದ ದ್ವಾರಕೆಯನ್ನು ವೈಕುಂಠವೆಂದು ವರ್ಣಿಸುತ್ತಾಳೆ. ಧರೆಗಿಳಿದು ಬಂದ ದೇವತೆಗಳೆಲ್ಲರೂ, ಋಷಿ ಮುನಿಗಳು ದ್ವಾರಕೆಯ ರಾಮೇಶನರಮನೆಗೆ ಬಂದಿರುವರೆಂದು ಭೂವೈಕುಂಠವೇ ನಮ್ಮ ದ್ವಾರಕಾನಗರಿ ಎಂದು ಹಾಡಿ ಹೊಗಳಿರುವಳು. ದೇವರನ್ನು ಹುಡುಕುತ್ತಾ ಭಕ್ತರು ಹಲವಾರು ತೀರ್ಥಕ್ಷೇತ್ರಗಳಿಗೆ ಭೇಟಿ ನೀಡುತ್ತಾರೆ. ತಮ್ಮ ಮನದ ಆತಂಕ ನಿವಾರಣೆಗೆ ಹಾತೊರೆಯುವರು. ಆದರೆ ತೀರ್ಥಕ್ಷೇತ್ರ ದರ್ಶನದಿಂದಲೇ ಪಾಪ ವಿಮುಕ್ತನಾಗುತ್ತಾನೆಯೇ? ಇದು ಖಂಡಿತ ಸಾಧ್ಯವಿಲ್ಲವೆಂದಿದ್ದಾರೆ. ದಾಸರು ಹಲವಾರು ದೃಷ್ಟಾಂತಗಳ ಮೂಲಕ ವಿವರಿಸಿದ್ದಾರೆ. ವಿವಿಧ ಕ್ಷೇತ್ರಗಳಿಗೆ ತೆರಳಿ ಅಲ್ಲಿನ ದೇವತಾ ದರ್ಶನ ಮಾಡಿ ಬರುವ ಬದಲು ಅಂತರಂಗದ ದೈವವನ್ನು ಕಾಣುವ ಹಂಬಲವನ್ನು ಹೊಂದಿದ್ದರೆ ಮಾತ್ರ ಭಕ್ತಿಯ ಸಿದ್ಧಿಸಾಧ್ಯವಾಗುವುದು.

"ಎತ್ತ ಹೋದರೇನು ಎತ್ತ ನಿಂದರೇನು
ಚಿತ್ತ ಬಂದಂತೆ ಚಿಗಿದಾಡಿದರೇನು
ಚಿತ್ತದಲಿ ಹರಿಯು ಕಾಣುವ ಭಕ್ತರಿಗೆ
ಮತ್ತೆ ಇತರ ಜನರ ಪರಿವೆಯೇನೊ" - ಗೋಪಾಲದಾಸರು

ಅಂತರಂಗದಲ್ಲಿ ಹರಿಯನ್ನು ಕಾಣುವುದೇ ದಾಸರ ಪರಮಗುರಿಯಾಗಿತ್ತು. ಕನಕದಾಸರು ಹೇಳುವಂತೆ

ಕಾಶಿವಾರಣಾಸಿ ಕಂಚಿ ಕಾಳಹಸ್ತಿ ರಾಮೇಶ್ವರ
ಏಸುದೇಶ ತಿರುಗಿದರೆ ಬಾಹುದೇನೊ ಅಲ್ಲಿ ಆಹುದೇನೊ

ಎಂದವರೆ

ವಾಸುದೇವನೆಂಬ ಒಳಗಿದ್ದ ಹಂಸನ ಸೇರಿ

ಲೇಸನುಂಡು ಮೋಸಗೊಳದೆ ಮುಕ್ತನಾಗೊ ನೀ ಶಕ್ತನಾಗೊ

ಎಂದು ಸಾರಿದರು. ಪುರಂದರದಾಸರು 'ಹರಿಭಕುತಿ' ಉಳ್ಳವರ ಶರೀರವೆ ಕುರುಕ್ಷೇತ್ರ... ಪದುಮನಾಭನ ಪಾಧ್ಯ ವದನವೆ ವೈಕುಂಠ' ಎಂದರು. ಎಂದರೆ ವಿವಿಧ ಕ್ಷೇತ್ರಗಳನ್ನು ಸಂದರ್ಶಿಸುವುದಕ್ಕೂ, ದೈವವನ್ನು ಒಲಿಸಿಕೊಳ್ಳುವುನೆಂಬ ಭ್ರಮೆಯಿಂದ ಹೊರಡುವುದಕ್ಕೂ ನಾವು ಅಂತರವನ್ನು ಗುರುತಿಸಿಕೊಳ್ಳುವುದು ಉತ್ತಮವೆಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು''[೬] ಎಂಬ ಅಭಿಪ್ರಾಯವನ್ನು ಅವ್ವನವರು ತಮ್ಮ ಕಾವ್ಯದಲ್ಲಿ ವ್ಯಕ್ತಪಡಿಸುದವ್ರು. ಹೀಗೆ,

''ದೇಶ ದೇಶದ ಜನಕೆ ಲೇಸಾಗಿ ಸಲಹುವೆ

ಶ್ರೀ ಸತಿದೇವಿ ಅರಸನೆ

ಶ್ರೀ ಸತಿದೇವಿ ಅರಸನೆ ಕಾಶಿ

ವಿಶ್ವೇಶ್ವರನ ಮೊದಲೆ ಬಲಗೊಂಬೆ''

ಎಂದು ಪ್ರಾರ್ಥಿಸುವ, ಕಾವ್ಯವು ಮುಂದುವರಿದು ಎಲ್ಲ ತೀರ್ಥಕ್ಷೇತ್ರಗಳನ್ನು ಸುತ್ತಿ ಬಂದರೂ, ಸ್ತುತಿಸಿ ಬೇಡುತಲೆ, ಅವ್ವ ತಮ್ಮ ಇಷ್ಟದೈವದ ಮಹಿಮೆಯನ್ನು ಹೊಗಳುತ್ತಾ, ಸ್ತುತಿಸುತ್ತಾಳೆ.

''ಗಲಗಲಿ ನರಸಿಂಹ ಬಲುದಯವಂತ

ಸುಲಭದಿ ವರವ ಕೊಡುವವನು

ಸುಲಭದಿ ವರವ ಕೊಡುವ ರಾಮೇಶನ

ಚಲ್ವ ಮೂರ್ತಿಯ ಬಲಗೊಂಬೆ''

ಎಷ್ಟು ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ ಬಂದರೂ, ತಮ್ಮ ಮನದ ಆರಾಧ್ಯ ದೈವವನ್ನು ಮರೆಯದೆ ನೆನೆದರೆ ಸಾಕು ಕಾರ್ಯಸಿದ್ಧಿಯಾಗುವುದು ಎಂಬ ಅಭಿಪ್ರಾಯವು ಹರಿದಾಸರ ಅನಿಸಿಕೆಯನ್ನು ಅನುಮೋದಿಸುತ್ತದೆಂದು ತಿಳಿಯಬಹುದು. ಅಂದು ಮಹಿಳೆಯರು ತಮ್ಮ ಸಾಂಪ್ರದಾಯಿಕ ಕುಟುಂಬದ ಆವರಣದಿಂದ ಹೊರಬರಲಾಗದಿದ್ದರೂ ಅನೇಕ ತೀರ್ಥಕ್ಷೇತ್ರ ದರ್ಶನಾಕಾಂಕ್ಷಿಗಳಾಗಿದ್ದರು. ಅವರ ಮನದಾಳದ ತೀರ್ಥಕ್ಷೇತ್ರ ದರ್ಶನದ ಅಭಿಲಾಷೆಯನ್ನು ತಮ್ಮ ಕೀರ್ತನೆಯಲ್ಲಿ ''ಗಲಗಲಿ ನರಸಿಂಹ ಬಲುದಯವಂತ....'' ಎಂದು ಹೇಳುತ್ತಾ ಅಂತರಂಗದ ಭಕ್ತಿಗೆ ಪ್ರೇರಕವಾಗುವ ಇಷ್ಟದೈವವೇ ಸಕಲ ತೀರ್ಥಕ್ಷೇತ್ರ ದರ್ಶನದಷ್ಟು ಪುಣ್ಯವು, ಸಫಲವು ಎಂಬ ಅನಿಸಿಕೆ ವ್ಯಕ್ತಪಡಿಸುತ್ತಾರೆ. ಮಹಿಳೆಯರು ಅಂತರಂಗದ ಭಕ್ತಿಗೆ ಪೂರಕವಾಗಿರುವ ಅವರವರ ಸ್ಥಳೀಯ ದೇವರುಗಳ ನೆನೆಯುವಲ್ಲಿಯೇ ಇಷ್ಟಾರ್ಥ ಸಿದ್ಧಿ ಸಾಧ್ಯವೆಂದಿದ್ದಾರೆ. ಹೀಗೆ, ತಮ್ಮ ಕೀರ್ತನೆಗಳ ಮೂಲಕ ಅಂದಿನ ಭಕ್ತರಿಗೆ ತೀರ್ಥಯಾತ್ರೆ

ಎಂಬುದು ದೇವರ ದರ್ಶನವೆಂಬ ಗುರಿಯನ್ನಿಟ್ಟುಕೊಂಡಿದ್ದರೂ ಆ ಗುರಿಯನ್ನು ದೂರದ ಸೀಮೆಗೆ ಹೋಗಿಬಂದರೆಷ್ಟು ಪುಣ್ಯವೋ, ಸಫಲತೆಯೋ ಅಷ್ಟೇ ತಮ್ಮ ಹತ್ತಿರದಲ್ಲಿರುವ, ಎಲ್ಲರಿಗೂ ಸಾಧ್ಯವಾಗುವ, ಇಷ್ಟ ದೈವವು ಭಕ್ತರ ಮನದಿಚ್ಛೆಯನ್ನು ನೆರವೇರಿಸುವುದು ಎಂಬುದನ್ನು ಅವ್ವನವರು ಸರಳವಾಗಿ "ಸುಲಭದಿ ವರವ ಕೊಡುವ ರಾಮೇಶನು" ಎಂದು ಹೇಳುವರು. ಹರಿದಾಸರು ತೀರ್ಥಕ್ಷೇತ್ರ ದರ್ಶನ ಕುರಿತು ನೀಡಿದ ಹಿತವಚನವನ್ನು ಸರಳವಾಗಿಯೂ, ಅರ್ಥಪೂರ್ಣವಾಗಿಯೂ ಗೃಹಿಣಿಯರ ಸೀಮಿತ ವಲಯಕ್ಕೆ ಅನುಸಾರವಾಗಿ ಭಕ್ತರು ತಮಗೆ ಸಾಧ್ಯವಾಗುವ ದೇವರಲ್ಲಿಯೇ ಎಲ್ಲ ತೀರ್ಥಕ್ಷೇತ್ರಗಳ ದೇವರನ್ನು ಅಂದರೆ ವಿವಿಧ ತೀರ್ಥಕ್ಷೇತ್ರ ಮಹಿಮೆಯನ್ನು ಕಾಣುವ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಹರಿದಾಸರು ಸಾಂಪ್ರದಾಯಿಕ ವಾತಾವರಣದಲ್ಲಿರುವರು. ಸಾಮಾಜಿಕವಾದ ಅನೇಕ ಆಚರಣೆಗಳನ್ನು ವಿರೋಧಿಸಿದ್ದಾರೆ. ಜಪತಪಗಳು ದೈವವನ್ನು ಸಾಕ್ಷಾತ್ಕರಿಸಿಕೊಳ್ಳುವ ಪ್ರಯತ್ನದಲ್ಲಿದ್ದರೆ ಮಾನ್ಯವಾಗುವುದು. ಅಲ್ಲದೆ ಸಂಪ್ರದಾಯಯುಕ್ತಿಗಳಿಂದ ಕೂಡಿರುವುದು. ಲೌಕಿಕ ಆಸೆಆಮಿಷಕ್ಕಾಗಿ ಮಾಡುವಂತಹದು ಭಕ್ತಿಯಾಗಿರದೇ, ಅದು ತ್ಯಾಜ್ಯವಾಗುತ್ತದೆ. ಆದುದರಿಂದಲೇ ಕನಕದಾಸರು

''ಜಪವ ಮಾಡಿದರೇನು ತಪವ ಮಾಡಿದರೇನು
ವಿಪರೀತ ಕಪಟ ಗುಣ ಕಲ್ಮಷವಿದ್ದವರು"

ಎಂದು ಹೇಳಿದರೆ, ಪುರಂದರದಾಸರು

''ಶ್ವಾನ ಬೂದಿಯೊಳಿರಲು ಶಿವಭಕ್ತನೆನಬಹುದೆ
ಕಾನನದೊಳಿಹ ಕಾಗೆ ವನವಾಸಿಯೇ
ಗಾಣ ತಿರಗಲು ಎತ್ತು ದೇಶಯಾತ್ರಿ ಎನಬಹುದೆ
ಗಾಳಿಯುಂಬಾಭುಜಗ ಉಪವಾಸಿಯೆ''

ಮೊದಲಾದ ಹಲವಾರು ಉಪಮಾನಗಳಿಂದ ಯಾವ ರೀತಿಯಿಂದಿದ್ದರೂ ಕಲ್ಮಶ ಹೃದಯಿಯಾಗಿದ್ದರೆ ಎಲ್ಲಾ ವ್ಯರ್ಥವೆಂಬುದನ್ನು ಸಾಧಾರವಾಗಿ ನಿರೂಪಿಸಿದ್ದಾರೆ. ಆದರೆ ಉನ್ನತ ಆದರ್ಶದಿಂದ ಕೂಡಿದ ಧ್ಯಾನ ಮೌನ ಜಪತಪಾನುಷ್ಠಾನಗಳಿಗೆ ಸ್ಥಾನವಿರುವುದನ್ನು ನಾವು ಕಾಣಬಹುದು. ಅವ್ವನವರು ತಮ್ಮ ಕಾವ್ಯದಲ್ಲಿ ಡಂಭಾಚಾರದ ಭಕ್ತಿಯನ್ನು ಅರ್ಥವಿಲ್ಲದ ಆಚರಣೆಯೆಂದಿದ್ದಾರೆ. ಅದರಿಂದ ಯಾವುದೇ ಕಾರ್ಯಸಿದ್ಧಿಯಾಗುವುದಿಲ್ಲವೆಂಬುದನ್ನು ತಮ್ಮದೇ ಉಪಮಾನಗಳಿಂದ ವಿವರಿಸಿರುವುದು, ಅದ್ವೈತವಾದ ವನ್ನು ಖಂಡಿಸುತ್ತಾ,

''ಹಿಟ್ಟು ಬೂದಿಯೊಂದೆ, ರೊಟ್ಟಿ ಮುಚ್ಚಳವೊಂದೆ
ಕಟ್ಟಿಗೆಯೊಂದೆ ಕಬ್ಬೊಂದೆ ಎಂದರೆ
ದಿಟ್ಟ ರಾಮೇಶ ನಗುತಾನೆ ರನ್ನದ ಕೋಲ"

ಎಂದು ಹೇಳುವ, ಅವ್ವ, ರೂಪದಲ್ಲಿ ಎರಡೂ ರೀತಿಯೂ ಒಂದೇ ಆಗಿರಬಹುದು. ಆದರೆ, ಸ್ವಭಾವದಲ್ಲಿ ಎರಡೂ ಭಿನ್ನ ರೀತಿಯೂ, ಸ್ವರೂಪದಲ್ಲಿ ಒಂದೇ ಆಗಿರುವ ರೂಪಕಗಳು ಅರ್ಥಪೂರ್ಣವಾಗಿರುವುವು.

ದಾಸರು ಯಾವ ಜಾತಿ ಬೇಧವಿಲ್ಲದೆ ಎಲ್ಲ ಮಾನವರು ಉತ್ತಮ ನಡವಳಿಕೆಯಿಂದ ಮೋಕ್ಷ ಸಿದ್ಧಿಯನ್ನು ಪಡೆಯಬಹುದೆಂದು ನಿರೂಪಿಸಿದ್ದಾರೆ. ಅವ್ವ, ತಾನೂ ಕೂಡ ಈ ನಿಟ್ಟಿನಿಂದಲೇ ಕಾವ್ಯ ರಚನೆಗೆ ತೊಡಗಿಸಿಕೊಂಡಿದ್ದು, ಮುಯ್ಯ ಹಿಂತಿರುಗಿಸಲು ಕೃಷ್ಣ, ರುಕ್ಮಿಣಿ, ಸತ್ಯಭಾಮೆಯರು. ಪಾಂಡವರ ರಾಜಧಾನಿ ಹಸ್ತಿನಾವತಿಗೆ ಹೊರಡುವರು. ಶ್ರೀಕೃಷ್ಣ ಬಂದ ಸುದ್ದಿ ಕೇಳಿ ಸ್ವರ್ಗದಿಂದ ಇಂದ್ರ, ಚಂದ್ರ, ದೇವೇಂದ್ರರೂ ಭೂಲೋಕಕ್ಕೆ ಇಳಿದು ಬಂದು ಆಶ್ಚರ್ಯದಿ ನೋಡುತ್ತಾ ನಿಂತರು. ಪಾಂಡವರು ತಮ್ಮ ಇಷ್ಟ ದೈವ ಹರಿಯನ್ನು ಕಂಡು ಆಲಂಗಿಸಿ ಕುಶಲೋಪರಿ ವಿಚಾರಿಸುತ್ತಾ ತಮ್ಮ ಆಸ್ಥಾನಕ್ಕೆ ಕರೆತರುವರು, ರಾಮೇಶನಲ್ಲಿ ಬಂದು ನಮಸ್ಕರಿಸಿ ಹೋಗುವ ಭಕ್ತರೆಲ್ಲಾ 'ಆಶೇಷ ಜನರೆಲ್ಲ ಎರಗಿದರು"... ಎಂದು ಹಾಡುವ ಸಾಲು "ಆಶೇಷ" ಸಮಾಜದ ಎಲ್ಲಾ ವರ್ಗದ ಜನರು ಕೃಷ್ಣ ಭಕ್ತಿಯಲ್ಲಿ ಪಾಲ್ಗೊಂಡಿರುವುದನ್ನು ತಿಳಿಸುತ್ತಾರೆ. ಅದರೊಡನೆಯೇ, ಅವ್ವನವರು ಸಾಮಾಜಿಕವಾಗಿ ಅಂದು ಪಾಂಡವರ ಕುರಿತು ಉಂಟಾದ ಅಭಿಪ್ರಾಯವನ್ನು ತಮ್ಮದೇ ರೀತಿಯಲ್ಲಿ ಪ್ರಸ್ತುತ ಪಡಿಸುವುದು ಹೀಗೆ.

"ಬಲ್ಲೆ ಬಲ್ಲೆ ನಿಮ್ಮೆಲ್ಲರ ಗುಣವನು ಪಾರ್ಥ"
ಅವರ ಹೊಲ್ಲತನವ ಹೇಳಲು ಹೋಗುವಿ ಕೋಪಿಸಿ ನೀನು
ದೊರೆ ಧರ್ಮನೆಂಬೊ ಬರಿ ಬಿಂಕದ ಹೆಸರ್‍ಯಾಕೊ
.........
ಹಿರಿಯನೆಂಬೊ ಹರಲಿಗೆ ತಕ್ಕವನಲ್ಲ"

ಎಂದು ಹಾಡುತ್ತಾ, ಧರ್ಮರಾಯನೆಂಬ ಹೆಸರಿಗೆ ತಕ್ಕವನಲ್ಲವೆಂದೂ, ಆತನ ಗುಣವಿಶೇಷಗಳನ್ನು ಹೀಗೆಂದು ಪಟ್ಟಿ ಮಾಡುತ್ತಾರೆ." ಅನ್ಯ ಲೋಕದವರ ನ್ಯಾಯ ಕೇಳುವವನಿವನಲ್ಲ, ತನ್ನ ಬುದ್ಧಿಯನು ತಾ ಕಳೆದನು, ಎಲ್ಲ ಮಾನ್ಯ ಮಾನ್ಯರೊಳು, ಮಾನ ಭಂಗಿಸುವುದು..."

'ಮುಯ್ಯ' ಹಿಂತಿರುಗಿಸಲು ಬಂದ ಕೃಷ್ಣನನ್ನು ಕುರಿತು ಅಪಹಾಸ್ಯ ಮಾಡಿ ನಗುವರು. ಪಾಂಡವರ ಈ ಕುರಿತು ಕೃಷ್ಣನ ವ್ಯಾಖ್ಯಾನ ಹೀಗೆ ಒಬ್ಬೊಬ್ಬರ ಶೌರ್ಯ, ಸಾಹಸಗಳನ್ನು ನಿಂದಾಸ್ತುತಿ ತಂತ್ರದಿಂದ ರಚಿಸಿರುವುದು, ಅವರ ಕಾವ್ಯಶಕ್ತಿಯನ್ನು ಪ್ರಕಟಿಸುತ್ತವೆ. ಶ್ರೀಕೃಷ್ಣನನ್ನು 'ರಮಿಯರಸು' ಎಂದೇ ಕರೆದು, ಹಾಡಿ ಹೊಗಳಿರುವ ಅವ್ವ, ಇದೇ ನಿಟ್ಟಿನಲ್ಲಿ ಕೃಷ್ಣನನ್ನು ಕುರಿತ ಅಪವಾದಗಳನ್ನು ದಿಗ್ವಿಜಯಗಳನ್ನು ಹಾಡಿ ಹೊಗಳದೆ, 'ಸಾಕೊ ರಂಗ ಅರಸುತನ ಯಾಕೊ ಯಾಕೊ' ಎಂದು ಪ್ರಶ್ನಿಸುತ್ತಾ, ಕೃಷ್ಣನ ದಿಗ್ವಿಜಯಗಳನ್ನು ಅಪವಾದವೆಂಬಂತೆ ಹೀಗಳೆಯುವ ತಂತ್ರದಿಂದ ರಮಿಯರಸು ಬಲಾಢ್ಯನೆಂದೂ, ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುವನು. ತನ್ನ ಭಕ್ತರನ್ನು ಶೀಘ್ರದಲಿ ತನ್ನೆಡೆಗೆ ಸೆಳೆಯುವಲ್ಲಿ ಭಕ್ತ

ವಿರೋಧಿಗಳನ್ನು ಸಂಹರಿಸಿ ತನ್ನ ಕರುಣೆಗೆ ದೊರೆಯುವಂತೆ ಮಾಡಿಕೊಳ್ಳುವ ವಿಧಾನವೂ ಅಪರೂಪವಾದದ್ದು ಎನ್ನಬಹುದು.

ಅವ್ವ, ಹಾಡುವಂತೆ,

''ಮಾತೃದ್ರೋಹಿ ಶುಕ, ಪಿತೃದ್ರೋಹಿ ಪ್ರಲ್ಹಾದ
ಭಾತೃದ್ರೋಹಿ ವಿಭೀಷಣ
ಭಾತೃದ್ರೋಹಿ ವಿಭೀಷಣ ಇವರು ಮುಖ್ಯ
ಪಾತ್ರರೊ ನಿನ್ನ ಕರುಣಕೆ ಕರುಣಕೆ''

ಕಾರುಣ್ಯ ಮೂರುತಿ ಕೃಷ್ಣ ಪರಮಾತ್ಮನು ತನ್ನ ಭಕ್ತರನ್ನು ಬಹಳ ಕಾಲ ಬಿಟ್ಟಿರಲಾರದೆ ಭಕ್ತರನ್ನು ನಾನಾ ಪರೀಕ್ಷೆಗಳನ್ನೊಡ್ಡಿ ಕಥೆಯಲ್ಲಿ ಅವರನ್ನು ತನ್ನಲ್ಲಿ ಸೇರಿಸಿಕೊಳ್ಳುವುದು ಕೃಷ್ಣ ಕರುಣಾಗೆ ಪಾತ್ರರಾಗಲು, ಭಗವಂತನ ಸಾನಿಧ್ಯ ಪಡೆಯಲು ಭಕ್ತರು ಆತನವಿರೋಧಿಗಳಾಗಿ ಜನ್ಮತಳೆಯುವರು. ಪರಮಾತ್ಮನಿಂದ ಹತರಾಗುವ ಕಥೆಗಳು ಕೃಷ್ಣಕತೆಯನ್ನು ಶ್ರುತಪಡಿಸುವಷ್ಟೇ, ಸಾಮಾಜಿಕವಾಗಿ ಜನರ ತಪ್ಪುಗಳನ್ನು ಒಮ್ಮೆ ಕರುಣೆಯಿಂದ ಕ್ಷಮೆಗೆ ಒಡ್ಡಬೇಕೆಂಬುದು ದಾಸರ ಆಶಯವಾಗಿದೆ.

ಮುಯ್ಯ ಒಪ್ಪಿಸುವ ಅವ್ವನವರ ಕೀರ್ತನೆಗಳಲ್ಲಿ ಕೃಷ್ಣನನ್ನು ಕಂಡು ನಮಿಸುವ ಸಡಗರದ ಸಂದರ್ಭವಿದೆ. ರುಕ್ಮಿಣಿ, ಭಾಮೆಯರು ಸಾಮಾಜಿಕವಾದ ಅನೇಕ ವಿಷಯಗಳನ್ನು ಪ್ರಸ್ತುತ ಪಡಿಸುತ್ತಾರೆ. ಆ ಕೌಟುಂಬಿಕ ಚಿತ್ರಣವಿಲ್ಲಿದೆ. ಕೃಷ್ಣನು ತನ್ನ ಮಧುರವಾದ ಕೊಳಲನೂದಿ ನಳಿನಾಕ್ಷಿಯರ ಮನಸ್ಸನ್ನು ಸೂರೆಗೊಳ್ಳುವನು. ಆ ಮಧುರಾಲಾಪಕ್ಕೆ ಮನಸೋತು ಬರುವ ಮಹಿಳೆಯರು ತಮ್ಮ ಪುಟ್ಟ ಮಕ್ಕಳನ್ನು, ಗಂಡನನ್ನು ಬಿಟ್ಟು ಬರುವರು. 'ಅವರ ಒಗೆತನವನ್ನು ಅಳಿದಲ್ಲೋ' ಎಂದು ಅವ್ವ ಟೀಕಿಸುವರು. ಸ್ತ್ರೀಯರು ಮನೆಯಿಂದ ಹೊರಗಿರುವುದೇ ಅಪರಾಧ, ಅದರಲ್ಲೂ ಸಂಜೆಯ ಹೊತ್ತು ಮನೆಯಿಂದ ಹೊರಬರುವುದು ಕಷ್ಟಸಾಧ್ಯವಾದುದು. ಅವ್ವನವರು ಇಲ್ಲಿ ಅತ್ತೆ ಮಾವರಿಗೆ, ಭಾವ ಮೈದುನರಿಗೆ, ತಂದೆ ತಾಯಿ, ಬಂಧು ಬಳಗ ಎಲ್ಲರನ್ನು ತೊರೆದು ಬರುವ ಮಹಿಳಾ ಸಮೂಹದ ಸಮ್ಮೋಹಕತೆಯನ್ನು ಚಿತ್ರಿಸುತ್ತಾರೆ. ಕೌಟುಂಬಿಕ ಚಿತ್ರಣವನ್ನು ಅತ್ಯಂತ ಸುಂದರವಾಗಿ ಕಟ್ಟಿಕೊಟ್ಟಿದ್ದಾರೆ. ಅಷ್ಟಲ್ಲದೇ, ಅವ್ವನವರು ಕೃಷ್ಣನ ಕೃಪೆಗೆ ಪಾತ್ರರಾಗಲು ಹಾತೊರೆಯುವ ಮನಸ್ಸುಳ್ಳವಳಾಗಿದ್ದುದು ದಾಸರ ಮನೋಭಿಷ್ಠೆಗಳಲ್ಲಿ ಪ್ರಮುಖವಾದದ್ದು ಎಂದಿದ್ದಾರೆ.

''ನಳಿನಾಕ್ಷಿಯರ ಮನ ಕೊಳಲೂದಿ ರಾತ್ರಿಲೆ
ಸೆಳೆದೆಲ್ಲೋ ಕಪಟ ಭಾವದಲೆ ಕೃಷ್ಣ
ಸೆಳೆದೆಲ್ಲೋ ಕಪಟ ಭಾವದಲೆ
ಎಳೆಯ ಮಕ್ಕಳು ಗಂಡ ಉಳಿದ ಭಾಗ್ಯವ ಬಿಟ್ಟು

ಆಳಿದೆಲ್ಲೊ ಅವರ ಒಗೆತನ''

''ಕಂಜಾಕ್ಷ ಶ್ರೀಕೃಷ್ಣ ರಂಜಿಸಿ ಕೊಳಲೂದಿ
ಮಂಜುಳ ಸ್ವರಕೆ ಮೋಹಿಸುವ ಬಾಲೆ
ಮಂಜುಳ ಸ್ವರಕೆ ಮೋಹಿಸುವ
ಕುಂಜರಗಮನೆಯರು ಸಂಜಿಲೆ ಬಂದರು
ಅಂಜದೆ ಅತ್ತೆ ಮಾವರಿಗೆ
ಭಾವಮ್ಮೆದುನರನ್ನ ಕೇವಲ ತುಚ್ಛಿಸಿ
ಧಾವಿಸಿ ಬಂದ ಬಾಲೆಯರ ಕೃಷ್ಣ
ಧಾವಿಸಿ ಬಂದ ಬಾಲೆಯರ
ಪಾವನ ಮಾಡದೆ ದೇವ ರಾತ್ರಿಯೊಳು
ಯಾವ ಪಾಶವ ಬಿಡಿಸಿದಯೊ
ತಂದೆ ತಾಯಿ ಬಳಗ ಬಂದು ಜನರಬಿಟ್ಟು
ಹೊಂದಲು ನಿನ್ನಂಘ್ರಿಗಾಗಿ ಕೃಷ್ಣ
ಹೊಂದಲು ನಿನ್ನಂಘ್ರಿಗಾಗಿ
ಬಂದ ಕಾರಣವ ಒಂದೂ ಮಾತನಾಡದೆ
ಕಂದಿ ಕುಂದಿಸಿದೆಲ್ಲಾ ಅವರ''[೨]

ಎಂಬುದು, ಗೋಪಿಕಾ ಬಾಲೆಯರು ಕೃಷ್ಣನ ಕೊಳಲಿನ ಮಧುರಾಲಾಪಕ್ಕೆ ಸೋತು ಬರುವ ಸಡಗರದಲ್ಲಿ, ಅತ್ತೆ ಮಾವರಿಗೆ, ಭಾವ ಮೈದುನರಿಗೆ, ತಂದೆ ತಾಯಿ, ಬಂಧು ಬಳಗವನ್ನೆಲ್ಲಾ ಬಿಟ್ಟು ಕೃಷ್ಣನ ದರ್ಶನಕ್ಕೆ ಬರುವ ಧಾವಂತದಲ್ಲಿ, ಗೋಪಿಕಾ ಸ್ತ್ರೀಯರ ಕೌಟುಂಬಿಕ ಚಿತ್ರಣವು ಅನಾವರಣಗೊಳ್ಳುತ್ತದೆ. ಅವ್ವ, ಕಾವ್ಯಕ್ಕೆ ಕುಟುಂಬವನ್ನೇ ಮೂಲ ಆಕರವಾಗಿಸಿಕೊಂಡಿದ್ದಾಳೆ. ಕೌಟುಂಬಿಕ ಸಂಬಂಧಗಳನ್ನು ಚಾಚೂ ತಪ್ಪದೇ ಹೇಳುತ್ತಾರೆ. ಆ ಸಂಬಂಧಗಳಲ್ಲಿ ಅಡಗಿರುವ ದುರ್ಬಲವಾದ ಮನಸ್ಸನ್ನು, ಅಸ್ಥಿರವಾದ ಬಂಧಗಳನ್ನು ಬಿಡಿಸುತ್ತಾಳೆ. ಮತ್ತು ಸಂಬಂಧಗಳಲ್ಲಿಯೇ ಹೂತಿರುವ ಅನೇಕ ಆಘಾತಕಾರಿ ಕೌಟುಂಬಿಕ ವಿಘಟಿತ ಘಟನೆಗಳನ್ನು ಬಹಿರಂಗಗೊಳಿಸುವ ಶೈಲಿಯೂ ಅನನ್ಯವಾದದ್ದು. ಹರಿದಾಸರಲ್ಲಿ ಕೃಷ್ಣನು ಕೊಳಲೂದುತ್ತಾ, ಬಾಲೆಯರನ್ನು ಸೆಳೆಯುವುದು ಅತ್ಯಂತ ಮನೋಹರವಾಗಿ ವರ್ಣಿತವಾಗಿದೆ. ಶ್ರೀಪಾದರಾಜರು ತಮ್ಮ ಕೀರ್ತನೆಗಳಲ್ಲಿ ಇಂತಹ ಪ್ರಸಂಗವನ್ನು ಅತ್ಯಂತ ಸಂತೋಷದಿಂದ ವರ್ಣಿಸಿದ್ದಾರೆ.

''ಮುರಳಿಯ ಗಾನ ಕಿವಿಗೆ ಬಿದ್ದದ್ದೇ ತಡ ಮನೆಗೆಲಸಗಳಲ್ಲಿ ತೊಡಗಿದ್ದ ಗೋಪಿಯರು ಚುರುಕಾದರು. ಕೃಷ್ಣನಲ್ಲಿಗೆ ಧಾವಿಸುವ ಆತುರ ಕಾತುರಗಳು ಹೆಚ್ಚಿ ತಬ್ಬಿಬ್ಬುಗೊಂಡರು.

ತಂದೆಯ ಕಂದನೆಂದು ಕೊಂಕುಳೊಳಿಟ್ಟು
ಕಂದನ ಕೆಳಗಿಟ್ಟು
ಅಂದಿಗೆಗೆಜ್ಜೆ ಕಿವಿಗಳಿಗಿಟ್ಟು
ಮುತ್ತಿನ ಬಟ್ಟು
ಹೊಂದಿಸಿ ಗಲ್ಲದಲಿ ತಾನಿಟ್ಟು
ಕಸ್ತೂರಿಯ ಬಟ್ಟು
ಮುಂದಾಗಿ ಮೂಗಿನ ಮೇಲಳವಟ್ಟು
ಮನೆ ಬಾಗಿಲ ಬಿಟ್ಟು
ಕಂದರ್ಪನ ಶರದಿಂದ ನೊಂದ ಬಹು
ಕಂದಿ ಕುಂದುತಲಿಂದು ವದನೆಯರು
ಇಂದಿರೇಶನಾನಂದದ ಗಾನಕೆ
ಚಂದ್ರಮುಖಿಯರೊಂದಾಗುತ ಬರುತಿದೆ. ||೧||

ಗೋಪಿಯರ ಧಾವಂತದ ಬದುಕಿನ ಚಿತ್ರಣವಿದು. ಹಾಗೆ ಬಿಟ್ಟದ್ದು ಬಿಟ್ಟ ಹಾಗೆ ಬಿಸಿಲು, ಮಳೆ, ಚಳಿಯೆನ್ನದೆ ಧಾವಿಸಿ ತನ್ನಲ್ಲಿಗೆ ಬಂದ ಗೋಪಿಯರಿಗೆ ಕೃಷ್ಣ 'ಬಾಯಾರಿದಿರಿ ಬದಿಯಲ್ಲಿ ಬಂದು ಕುಳ್ಳಿರಿ ಅಧರಾಮೃತ ಪಾನ ಮಾಡಿರಿ'- ಎಂದು ಮುಂತಾಗಿ ಪ್ರೀತಿಯಿಂದ ಉಪಚರಿಸಿದ. ಈ ದಿವ್ಯ ಸಮಾಗಮವನ್ನು ಕಂಡ ರಂಭೆ ಊರ್ವಶಿ ಮೇನಕೆಯರು ನಾಟ್ಯವಾಡಿ ನರ್ತಿಸಿದರಂತೆ ಭಗವಂತನ ಈ ಲೀಲೆಗಳೆಲ್ಲ ಭಕ್ತರನ್ನು ರಕ್ಷಿಸುವುದಕ್ಕೆ ಎಂಬ ಆಶಯವೂ ಇಡೀ ಕೀರ್ತನೆಗೆ ಒಂದು ಹೊಸ ಆಯಾಮ ಕೊಟ್ಟಿದೆ.[೮]

ಕೃಷ್ಣಗೋಪಿಯರ ಮಧುರ ಪ್ರೇಮ ವಿರಹದ ನೆಲೆಯಲ್ಲಿ ಕಾವ್ಯ ಮತ್ತಷ್ಟು ಕಳೆಗಟ್ಟಿದೆ. ಶ್ರೀಕೃಷ್ಣ ಬಲರಾಮರು ಅಕ್ರೂರನೊಡನೆ ಬಿಲ್ಲು ಹಬ್ಬಕ್ಕೆಂದು ಮಧುರೆಗೆ ಹೊರಡುವ ವಿಚಾರ ಹಿಂದಿನ ದಿನವೇ ಕಿವಿಗೆ ಮುಟ್ಟಿ ಗೋಪಿಯರೆಲ್ಲರಿಗೂ ತಿಳಿದುಬಿಡುತ್ತದೆ. ತಮ್ಮ ಕೀರ್ತನೆಯಲ್ಲಿ ಕೃಷ್ಣನನ್ನು ಕಾಣಲು ಬೆರೆಯಲು ಬರುವ ಬಾಲೆಯರು ವಿರಹ ಮನಸ್ಥಿತಿಯಲ್ಲಿ ಮಾಡುವ ಮನೆಗೆಲಸ, ಅಲಂಕಾರಗಳೆಲ್ಲವೂ ತಲೆಕೆಳಗಾಗಿ ಮಾಡುವ ಡೋಲಾಯಮಾನ ವರ್ತನೆಗಳು ಅಪ್ಪನವರ ಭಾಷೆಯಲ್ಲಿ ಸೊಗಸಾಗಿ ಮೂಡಿಬಂದಿರುವುವು. ಬಾಲೆಯರು ತಮ್ಮ ಕೃಷ್ಣನ ನೋಡಲು, ಕೂಡಲು ಬರುವ ಆತುರದಲ್ಲಿ ಮನೆಯಲ್ಲಿ ಹಿರಿಯರನ್ನು, ಕಿರಿಯರನ್ನು ಬಿಟ್ಟು ಬರುವ ಧಾವಂತದಲ್ಲಿ ವಿರಹವೂ ಸೇರಿ ಅನೇಕ ರೀತಿಯ ಅವಘಡಗಳನ್ನು ಮಾಡುವುದು ಬಾಲೆಯರ ಮನಸ್ಥಿತಿಗೆ ಹಿಡಿದ ಕನ್ನಡಿಯಂತಿರುವುದು.

''ಚಿತ್ತ ಚಂಚಲವಾಗಿ ಎತ್ತಿಗೆ ಮುರವಿಟ್ಟು
ಮತ್ತೊಂದು ಹೋರಿಯ ತರಿಸೆ ಬಾಲೆ
ಮತ್ತೊಂದು ಹೋರಿಯ ತರಿಸೆ

ಹತ್ತಿರಿದ್ದವರೆಲ್ಲ ಅತ್ಯಂತ ನಗುವರು
ಬಂದು ಅರ್ಥಿಯಲು ಮಾಡಿಸಿದೆಲ್ಲೊ
ಮಂಗನ ಮರಿಯೆತ್ತಿ ಅಂಗಿಯ ತೊಡಿಸುತ
ಚೆಕ್ಕಿನ ಬಾಯೊಳಗೆ ಇಕ್ಕುತ ತುತ್ತನೆ
ಚಿಕ್ಕ ಕಂದಯ್ಯ ಉಣ್ಣೆನುತ ಬಾಲೆ
ಪಟ್ಟೆ ಮಂಚದ ಮೇಲೆ ಬಿಟ್ಟು ಕಂದನ ಬಾಲೆ
ತೊಟ್ಟಿಲ ತೂಗಲು ಭರದಿ ಬಾಲೆ
................
ಉಟ್ಟ ಪಿತಾಂಬರ ಬಿಟ್ಟು ಹಾಕಿಸಿ ಮ್ಯಾಲೆ
ಕೃಷ್ಣನ ಕೊಳಲು ಲಾಲಿಸುತ ಬಾಲೆ
ಶ್ರೀಕೃಷ್ಣ ಮಾಡಿದ ಕೌತುಕವ
ಕಾಲಿನ ಗೆಜ್ಜೆಯು ಮ್ಯಾಲೆ ಕೊರಳಿಗೆ ಕಟ್ಟಿ
ಮೇಲಾದ ಸರ ಕಾಲಿಗ್ಹಾಕಿ ಬಾಲೆ
ಮೇಲಾದ ಸರ ಕಾಲಿಗ್ಹಾಕಿ
ಹಣೆಗೆ ಕುಂಕುಮ ಗಲ್ಲಕ್ಕೆ ಕಾಡಿಗೆ
ಚಲ್ವ ಫಣೆಗೆ ಅರಿಷಿಣವು ಬಾಲೆ
.............
ನಲ್ಲೆಯರು ತಮ್ಮ ವಲ್ಲಭರನ ಬಿಟ್ಟು
ಅಲ್ಲೆ ರಾತ್ರಿಲೆ ಒರಗಿದರು''

ಹೀಗೆ ಧಾವಂತದಲ್ಲಿ ಕೃಷ್ಣನ ದರ್ಶನಾಪೇಕ್ಷೆಯಿಂದ ಬರುವ ಬಾಲೆಯರು ಮಾಡುವ ಅವಘಡಗಳು ಒಂದೆರಡಲ್ಲ. ಸಾಲು ಸಾಲು ನಿದರ್ಶನಗಳನ್ನು ನೀಡುವ ಅವ್ವ, ತನ್ನ ಚಮತ್ಕಾರಿ ವರ್ಣನೆಯಿಂದಲೂ, ಉಪಮೆಗಳಿಂದಲೂ ಓದುಗರ ಮನಸ್ಸಿಗೆ ಹಿತವುಂಟು ಮಾಡುವಳು. ಕೃಷ್ಣ ಪ್ರೀತಿಯು ಉಂಟುಮಾಡುವ ಅವಾಂತರವನ್ನು ಚಿತ್ರಿಸಿರುವ ಕಲೆಯು ಅತ್ಯಂತ ಹಾಸ್ಯಮಯವಾಗಿದೆ. ಅವ್ವನವರ ಹಾಸ್ಯ ಪ್ರವೃತ್ತಿಗೆ ಇದೊಂದು ತಕ್ಕುದಾದ ಉದಾಹರಣೆಯಾಗಿವೆ. ಕೃಷ್ಣನ ಕಾಣುವ ಆತುರದಲ್ಲಿ ಚಿತ್ತ ಚಂಚಲವಾಗಿ ಬಾಲೆಯರು ನಡೆಸುವ ಕೆಲಸಗಳೆಲ್ಲಾ ಅವಾಂತರವಾಗಿ, ಎತ್ತಿಗೆ ಮುರವಿಟ್ಟು ಹಸುವೆಂದು ಭಾವಿಸುವುದು, ಮಂಗನ ಮರಿಯೆತ್ತಿ ಅಂಗಿಯ ತೊಡಿಸುತ ರಂಗನ ಬಳಿಗೆ ಬಾರೆಂದು ಕಂದ, ಚೆಕ್ಕಿನ ಬಾಯೊಳಗೆ ಇಕ್ಕುತ ತುತ್ತನೆ ಚಿಕ್ಕ ಕಂದಯ್ಯ ಉಣ್ಣೆನುತ ಬಾಲೆ, ಕಾಲಿನ ಗೆಜ್ಜೆಯ ಕೊರಳಿಗೆ ಕಟ್ಟಿ, ಮೇಲಾದ ಸರ ಕಾಲಿಗ್ಹಾಕಿ

ಎಂಬುದು, ಹಣೆಗೆ ಕುಂಕುಮ, ಗಲ್ಲಕ್ಕೆ ಕಾಡಿಗೆ, ಚೆಲ್ವ ಫಣೆಗೆ ಅರಿಸಿಣವು, ನಲ್ಲೆಯರೆಲ್ಲರು ತಮ್ಮ ವಲ್ಲಭರನ ಬಿಟ್ಟು ಅಲ್ಲೆ ರಾತ್ರಿಲೆ ಒರಗಿದರು. ಹೀಗೆ ಕೃಷ್ಣ ಪ್ರೀತಿಗೆ ಮರುಳಾದ ಬಾಲೆಯರು ಬಿಟ್ಟು ಬರುವ ಕೌಟುಂಬಿಕ ಚಿತ್ರಣವಿದು. ಮುರಳಿ ಗಾನಕ್ಕೆ ಸೋತು ತಮ್ಮ ಕೆಲಸ ಕಾರ್ಯಗಳಲ್ಲಿ ನಡೆಸುವ ಅವಾಂತರಗಳು, ಮೇರೆ ಮೀರುತ್ತವೆ. ಕೃಷ್ಣನ ಕೊಳಲಿಗೆ ಮನಸೋತು ತಮ್ಮ ವಲ್ಲಭರನ ಬಿಟ್ಟು ಅಲ್ಲಿಯೇ ರಾತ್ರಿ ಒರಗಿದರು ಎಂಬಲ್ಲಿ ಶೃಂಗಾರ ರಸವು ಅತ್ಯಂತ ಸಮರ್ಥವಾಗಿ ಮೂಡಿಬಂದಿರುವುದು. ಹೀಗೆ ಪ್ರೀತಿಯ ಪತಿಯರನ್ನು ಲೆಕ್ಕಿಸದೆ, ಕೃಷ್ಣನ ಕಾಣಲು ಹಾತೊರೆದು ಬರುವ ಬಾಲೆಯರ ಕಂಡು ಅವರನ್ನು ಜರಿದು, ತಡವಾಗಿ ಬಂದರೆಂದು ಕೋಪಿಸುವ ಕೃಷ್ಣನು, 'ಕಾಳ ರಾತ್ರಿಲಿ ಬಂದರೇಕಿಂದು, ಮತ್ತೆ ಮನೆಗೆ ಪೋಗಿರೆಂದ, ಕೃಷ್ಣನ ನಡವಳಿಕೆಯನ್ನು ಕಂಡು ಅವ್ವನವರು ಬೆರಗಾಗಿ ಕೃಷ್ಣ ನೀನು ಜಾರ ರಾಜ, ನಿನಗೆ ತೋರದಿದ್ದ ಭಾವವೇನು ಯಾರ ಅಂಜಿಕೆ ನಿನಗಿಲ್ಲವೆಂದೂ ಹಂಗಿಸಿ, ಜರೆಯುವುದು ಅವ್ವನವರ ಸಹಜ ಸ್ವಭಾವದ ವರ್ಣನೆಯಂತಿರುವುದು. ಇಲ್ಲಿ ಕೃಷ್ಣನ ದೈವತ್ವ ಮಾನವೀಕರಣಗೊಂಡ ಪರಿಯನ್ನು ಗಮನಿಸಬಹುದಾಗಿದೆ. ಹಾಗೆಯೇ ಕೀರ್ತನೆಗಳಲ್ಲಿ ಗೋಪಿಯರ ವಿರಹದಿಂದ ಅವರ ನಡೆವಳಿಕೆಗಳಲ್ಲಿ ಕಾಣುವ ವಿಪರೀತಗಳನ್ನು ವರ್ಣಿಸುವ ಅವ್ವನವರ ಕಾವ್ಯಮಯತೆಯು ತಾನೇ ತಾನಾಗಿ ಅರ್ಥಭಾವಗಳನ್ನು ಸ್ಫುರಿಸುವಂತಿದೆ.

ಇಲ್ಲಿ ಶ್ರೀಕೃಷ್ಣನ ರಾಸಲೀಲೆಯು ಸಾಂದರ್ಭಿಕ ಸಂಗತಿಗಳಿಗೆ ಅನುಗುಣವಾಗಿ ಮೂಡಿಬಂದಿದೆ. ಕೃಷ್ಣ, ತನ್ನನ್ನು ಕಾಣಲು ಸರಿರಾತ್ರಿಯಲ್ಲಿ ಬರುವ ಗೋಪಿಯರನ್ನು ತಡವಾಗಿ ಬಂದದ್ದಕ್ಕೆ ಕೋಪಿಸುವನು. ಕಠಿಣ ಮಾತುಗಳಲ್ಲಿ 'ಯಾತಕಿಲ್ಲೆ ಬಂದಿರೆಂದಿ, ಮತ್ತೆ ಮನೆಗೆ ಪೋಗಿರೆಂದ' ನುಡಿಯುವ ಸಂಗತಿಯು ಗೋಪಿಯರ ವಿರಹ, ಅವರು ತಮ್ಮ ಕುಟುಂಬದವರನ್ನು ಬಿಟ್ಟು ಕೃಷ್ಣನ ದರ್ಶನಕ್ಕಾಗಿ ಬಂದಿರುವುದನ್ನು ಅವ್ವನವರು ಸೊಗಸಾಗಿ ವರ್ಣಿಸಿದ್ದಾರೆ. ಅದರೊಂದಿಗೆ, ಕೃಷ್ಣನು ರಾಸಲೀಲೆಯ ಸಂದರ್ಭದಲ್ಲಿ ನೀರಾಟವಾಡುವ ಮಾನಿನಿಯರನ್ನು ಮೋಸದಿಂದ ಕೂಡಿ, ಅವರಿಗೆ ಲಜ್ಜೆ ಪಡುವಂತೆ ಮಾಡಿ ಕೃಷ್ಣನು ಅವರಿಂದ ಅಪಾರವಾದ ಸಂತೋಷ ಸಂಭ್ರಮಪಡುತ್ತಾ ರಾಸ ಕ್ರೀಡೆಯಲ್ಲಿ ತೊಡಗಿರುವುದು. ಆ ಮಾನಿನಿಯರ ಗಂಡಂದಿರು ಬಂದರೆ ಅವರ ಬಾಯಿ ಮುಚ್ಚಿಸುವಂತೆ ಶ್ರೀಶನ ಪ್ರಾರ್ಥಿಸುವರು, 'ಅವರ ವಲ್ಲಭರೆಲ್ಲ ಸೊಲ್ಲುಗಳೆತ್ತದ್ಹಾಂಗೆ ಚೆಲ್ವನ ಪ್ರಾರ್ಥಿಸಿದರೆಲ್ಲ.' ಹೀಗೆ, ಅವ್ವ, ತನ್ನ ಕಾವ್ಯಕ್ಕೆ ಇಲ್ಲಿ ಹೊಸದಾದ ಆಯಾಮ ದೊರಕಿಸಿಕೊಂಡಿದ್ದಾಳೆ. ಗೋಪಿಯರು ರಾಸಕ್ರೀಡೆಯಲ್ಲಿ ವಸ್ತ್ರ ಕಳೆದುಕೊಂಡು ಕೃಷ್ಣನ ಪೀಡನೆಗೆ ಗುರಿಯಾದರೂ, ಕೃಷ್ಣನ ಚೇಷ್ಟೆಯಿಂದ ಸಂತೋಷಿಸುವರು. ಇದನ್ನು ಗಂಡಂದಿರು ಪ್ರಶ್ನಿಸದಂತೆ ಮಾಡು ಎಂಬ ಪ್ರಾರ್ಥನೆಯು ಅವರ ಭಕ್ತಿ ಮನೋಭಿಪ್ರಾಯವಾಗಿದೆ. ಕೃಷ್ಣಭಕ್ತಿಯು ಅತ್ಯಂತ ಶ್ರೇಷ್ಠವಾದದ್ದೆಂದು, ಅದರಿಂದ ಗೋಪಿಯರಿಗೆ ಕೃಷ್ಣನ ಈ ರಾಸಕ್ರೀಡೆಯ ಹುಡುಗಾಟವು ಅಪರಿಮಿತವಾದ ಸಂತಸಪೀಯುತ್ತಿತ್ತೆಂದು ತಿಳಿಯಬಹುದು.

ಕೃಷ್ಣನೊಡನೆ ರಾಸಕ್ರೀಡೆಯಲ್ಲಿ ಕಲೆತು, ಒಲಿದು, ಅವನಿಂದ ಸಂತುಷ್ಟರಾದ ಗೋಪಿಯರಿಗೆ ವಿರಹವೇದನೆಯು ತಪ್ಪಿದ್ದಲ್ಲ. ಕೃಷ್ಣನ ವಿರಹವನ್ನು ತೋಡಿಕೊಳ್ಳುವ ಗೋಪಿಯರ ಚಿತ್ರಣ ವಚನಗಾರ್ತಿ ಅಕ್ಕಮಹಾದೇವಿಯ ವಚನಗಳನ್ನು ನೆನಪಿಸುವಂತಿರುವುದು.

ಅಕ್ಕ, ತನ್ನ ವಚನಗಳಲ್ಲಿ ವೈರಾಗ್ಯವನ್ನು ಹೇಳುತ್ತಲೇ ತನ್ನ ಇಷ್ಟ ದೈವದೊಡನೆ ಬೆರೆಯುವ ಕ್ಷಣವನ್ನು ಅತ್ಯಂತ ಭಕ್ತಿಯಿಂದ ಸ್ಮರಿಸಿಕೊಳ್ಳುವುದು ಹೀಗೆ,

''ಒಂಭತ್ತು ಚೌಕದಲಿ ಉಂಬುಡುವ ಮನೆಯನು
ನಂಬದೆ ಕಡೆಗೆ ತೊಲಗಿಸಿ ಮುಂದಣ
ಸಂಭ್ರಮದ ಮನೆಗೆ ನಡೆದೆನು ||೩೮||
ಗುರುವೆನ್ನ ಕಾಯವು ಹರನೆನ್ನ ಮನವಯ್ಯ
ಪರಮ ಜಂಗಮವೆ ಅನುಭಾವ | ಮುಖವೆನ್ನ
ಇರವೆಲ್ಲ ಲಿಂಗಮಯವಯ್ಯ
ಉಟ್ಟ ಸೀರೆಯ ಸೀಳಿ ತೊಟ್ಟ ತೊಡುಗೆಯ ಮುಱಿದು
ಬಿಟ್ಟನು ನಾನು ಬಿಡುಮುಡಿಯ ಎಲೆ ದೇವ
ಕೊಟ್ಟೆನು ಎನ್ನ ತನುಮನವ''||೪೦||[೧೦]

ಎಂಬುವ ಅಕ್ಕನ ವಚನಗಳಲ್ಲಿ ಚೆನ್ನಮಲ್ಲಿಕಾರ್ಜುನನ ಕುರಿತ ಅಪಾರವಾದ ಭಕ್ತಿಭಾವ ಅನನ್ಯವಾದ ನಂಬಿಕೆ ಭರವಸೆಗಳೆಲ್ಲವನ್ನು ನಾವು ಅವ್ವನವರ ಕೀರ್ತನೆಗಳಲ್ಲೂ ಕಾಣಬಹುದಾಗಿದೆ. ಅವ್ವ ತನ್ನ ಕಾವ್ಯದಲ್ಲಿ ಕೃಷ್ಣನ ರಾಸಲೀಲೆಯ ಕುರಿತು ಹಾಡುತ್ತಾ, ಗಂಡನುಳ್ಳ ಗೃಹಿಣಿಯರು ಕೃಷ್ಣನೊಡನೆ ಕೂಡಿಹಾಡಿ ನಲಿದು ಸಂಭ್ರಮ ಪಡುತ್ತಿರುವರು. ಅವರ ಗಂಡಂದಿರು ತಡವಾಗಿ ಮನೆಗೆ ಹೋದದ್ದಕ್ಕೆ ಪ್ರಶ್ನಿಸದಂತೆ ಮಾಡು ಎಂದು ಕೃಷ್ಣನನ್ನು ಬೇಡಿಕೊಳ್ಳುತ್ತಾರೆ. ಗೋಪಿಯರು ಕೃಷ್ಣನೊಂದಿಗೆ, ಭಕ್ತಿ ಪರವಶರಾಗಿ ಕಳೆಯುವ ಕಾಲವನ್ನು ತಮ್ಮ ಸುಕೃತವೆಂತಲೇ ಭಾವಿಸಿರುವರು. ಕೃಷ್ಣನು ತಮ್ಮೆಲ್ಲರನ್ನು ಪ್ರತಿಹಂತದಲ್ಲೂ ಕಾಪಾಡುವನು ಎಂಬ ಭರವಸೆ ಇಲ್ಲಿ ಮೂಡಿಬಂದಿದೆ. ಗೋಪಿಯರ ಪ್ರಾರ್ಥನೆಯನ್ನು ತಮ್ಮ ಕಾವ್ಯದಲ್ಲಿ ಅವ್ವ ಸೊಗಸಾಗಿ ವರ್ಣಿಸಿದ್ದಾಳೆ. ಸಾಮಾಜಿಕ ನಂಬಿಕೆಗಳನ್ನು, ಜನರಲ್ಲಿ ಬಳಕೆಯಾಗುವ ಗಾದೆ ಮಾತುಗಳನ್ನು, ಶಕುನಗಳನ್ನು, ಸಹಜವಾಗಿ ಬಳಸಿದ್ದಾರೆ. ಸಾಮಾಜಿಕರಲ್ಲಿ ರೀತಿ ನೀತಿಯಾಗಿ ಆಚರಣೆಗೊಳ್ಳುವ ಪ್ರತಿಯೊಂದನ್ನೂ ಅತ್ಯಂತ ಸರಳ ರೀತಿಯಲ್ಲಿ ನಿರೂಪಿಸಿದ್ದಾರೆ. ಅವರ ಕಾವ್ಯಕ್ಕೆ ಮೆರುಗು ನೀಡುವಂತೆ ಶಕುನಗಳು ಸುಂದರ ಚಿತ್ರಣಗಳಂತೆ ಮೂಡಿಬಂದಿರುವುವು. ಮುತ್ತೈದೆಯರು ಹೊತ್ತು ತರುವ ನೀರಿನ ಕುಂಭ, ಸಾಲು ಸಾಲಾಗಿ ಬರುವ (ಕೆಲದೆಯರು)ಗೋಪಿಯರು ಹೀಗೆ, ಎಲ್ಲವೂ ವಾಸ್ತವತೆಯನ್ನು ಕಟ್ಟಿಕೊಡುವಂತಿವೆ.

"ಹರಿದಾಸರಾಗುವುದೆಂದರೆ ಸುಲಭವಲ್ಲ. ಇದು ಬಲು ಕಷ್ಟದ ದಾರಿ ಮನಸ್ಸು ತಾಳ್ಮೆಯಿಂದ ಕೂಡಿರಬೇಕು ನಿರ್ಲಿಪ್ತವಾಗಿದ್ದು, ಪವಿತ್ರ ವೈರಾಗ್ಯ ತಾಳುವ ಸೇವಾಭಾವವಿರಬೇಕು. ವಿನಮ್ರತೆ ವಿಧೇಯತೆಗಳು ಪ್ರೇಮ, ಭಾತೃತ್ವಗಳೂ ಒಡನಾಡಿಯಾಗಿರಬೇಕು. ಬಹುಮುಖ್ಯವಾಗಿ ಗುರುವಿನಾಜ್ಞೆಯಲ್ಲಿರಬೇಕು. ಜ್ಞಾನದಾಹಿಯಾಗಿ ಜ್ಞಾನ ಸಂಪಾದಿಸಬೇಕು. ಸದಾ ನಿರ್ಮಲಭಕ್ತಿ ಪ್ರೇಮಗಳಲ್ಲಿ ಮಗ್ನನಾಗಿರಬೇಕು. ಇಂತಹ ಹರಿದಾಸ ಪದವೇ ಅತ್ಯಂತ ಶ್ರೇಷ್ಠ. ಹರಿದಾಸ ಸಾಹಿತ್ಯಕ್ಕೆ ಜನಪದರ ಜೀವನವು ಬಹುಮುಖ್ಯವಾಗಿದೆ. ಯಾವುದೇ ಜಾತಿ ಭೇದ, ಅಂತಸ್ತುಗಳು ಪ್ರಮುಖವಾಗಿರದೆ, ಸಮಾಜದ ಎಲ್ಲ ವರ್ಗದವರೂ ದಾಸ ಸಾಹಿತ್ಯದಲ್ಲಿ ಭಾಗಿಯಾಗಿರುವುದನ್ನು ಗಮನಿಸಬಹುದು ಬದುಕನ್ನು ಬಿಂಬಿಸುವ ಅಂದಿನ ಜೀವನ ಮೌಲ್ಯಗಳನ್ನು ಚಿತ್ರಿಸುವ ಹರಿದಾಸರು ಕಂಡುಂಡ ಸಾಮಾಜಿಕ ಬದುಕನ್ನೇ ಸರಳ ಹಾಡುಗಳಲ್ಲಿ ಸಮಾಜಕ್ಕೆ ನೀಡಿರುವರು. ಹರಿದಾಸರಿಗೆ ಹರಿಯೇ ಸರ್ವಸ್ವ. ಅಂತೆಯೇ ಹರಿಸರ್ವೋತ್ತಮ, ವಾಯು ಜೀವೋತ್ತಮ, ನಂಬಿಕೆಯಾಗಿದೆ. ದ್ವೈತಮತ ತತ್ವಗಳನ್ನೇ ಪ್ರಧಾನವಾಗಿಟ್ಟುಕೊಂಡು ರಚಿಸಿದ ಕೀರ್ತನೆಗಳೇ ಹೆಚ್ಚಾಗಿರುತ್ತವೆ. ತಾರತಮ್ಯೋಕ್ತವಾಗಿವೆ. ಮಧ್ವಸಿದ್ಧಾಂತದ ಸಂಪೂರ್ಣ ಸಾರ ಒಂಭತ್ತು ಪ್ರಮೇಯಗಳಲ್ಲಿ ಅಡಕಗೊಂಡಿವೆ.

೧. ಶ್ರೀಹರಿ ವಾಯುಸರ್ವೋತ್ತಮ ೨. ಜಗತ್ತುಸತ್ಯ ೩. ಪಂಚಭೇದಗಳು ೪. ಜೀವರೆಲ್ಲ ಹರಿಯ ಅನುಚರರು ೫. ತಾರತಮ್ಯ ೬. ಮೋಕ್ಷ ೭. ಮೋಕ್ಷಸಾಧನೆಗೆ ಜ್ಞಾನ ಭಕ್ತಿ - ವೈರಾಗ್ಯಗಳು ೮. ಪ್ರತ್ಯಕ್ಷ, ಅನುಮಾನ, ಆಗಮಗಳೆಂದು ಮೂರು ಪ್ರಮಾಣಗಳು ೯. ಶ್ರೀಹರಿ ವೇದಗಳಿಂದ ಮಾತ್ರ ತಿಳಿಯಲ್ಪಡುವನು. ಹೀಗೆ ಹರಿದಾಸರು ತಮ್ಮ ಹಾಡುಗಳ ಮೂಲಕ ಸಮಾಜಕ್ಕೆ ಹರಸಿದ್ದಾರೆ."[೧೧]

ಸಾಹಿತ್ಯ ಸಮಾಜಮುಖಿಯಾಗಿ ಸಾಗಿದಾಗ ಮಾತ್ರ ಧರ್ಮವು ಕೂಡ ಅದರೊಡನೆಯೇ ಬೆಳೆದು ಬರುವುದು. ದಾಸತತ್ವದ ಮೂಲಆಶಯವು ಅದರಂತೆಯೇ ನಡೆದು ಜನಮುಖಿಯಾಗಿ ಸಾಗಲು ದ್ವೈತ ತತ್ವ ಮತಪ್ರಸಾರವೂ ಕೂಡ ದಾಸ ಸಾಹಿತ್ಯದ ಮೂಲಕ ಪುರಸ್ಕರಿಸಲ್ಪಟ್ಟಿತು. ಅಪ್ಪನವರ ಕಾವ್ಯವು ಈ ಬಗೆಯಲ್ಲಿ ಸಾಗಿಬಂದು ಅಂದಿನ ಸಾಮಾಜಿಕ ಜನಜೀವನವನ್ನು ಹರಿಪಾರಮ್ಯತೆಯ ಚೌಕಟ್ಟಿನಲ್ಲಿ ಚಿತ್ರಿಸಿರುವುದು ಹೀಗೆ,

"ಹಿಡಿಸುವೆ ಹುಚ್ಚನೆ ಹಿಡಿಸುವೆ
ರಂಗನರಸಿಯರ ಪಾಟ ಬಿಡಿಸುವೆ
ತಮವೆಂಬ ಭಂಗಿಯ ಕುಡಿಸುವೆ
ಬುದ್ಧಿಭ್ರಮೆಗೊಂಡ ಮಾತು ನುಡಿಸುವೆ
ಸುಮನಸರಿಗೆ ಹೆಂಡ ಕುಡಿಸುವೆ
ಯಾರೂ ನಮಿಸದಂತೆ ದೂರ ಇಡಿಸುವೆ"

ಅಪ್ಪನವರು ಸಾಮಾಜಿಕವಾಗಿ ರೂಢಿಯಲ್ಲಿದ್ದ ವಿಷಯಗಳಷ್ಟೇ, ಹರಿ ಸರ್ವೋತ್ತಮತೆಯೂ ಮನಸ್ಸಿಗೆ ಹಿತವಾಗಿರುವುದು ಎಂದು ಸಾಧಿಸಿದ್ದಾರೆ.

**ಭಕ್ತಿ ಸ್ವರೂಪ :** ಹರಿದಾಸ ಸಾಹಿತ್ಯದಲ್ಲಿ ಭಕ್ತಿಯು ವಿಷ್ಣುಪಾರಮ್ಯತೆಯ ಸ್ವರೂಪ ಪಡೆದಿದ್ದೆ. ಆಚರಣೆಗಳಿಂದ ದೂರಾಗಿದ್ದ ವೈಷ್ಣವ ಮತವು ಹರಿದಾಸರ ತತ್ತ್ವೋಪದೇಶಗಳ ಗೀತ ಗಾಯನಗಳಿಂದ ಸರಳ ಸರಾಗ ಹಾಡುಗಳ ರೂಪ ತಳೆದಿರುವುದು. ಜನ ಸಾಮಾನ್ಯರಲ್ಲಿ ಇದರಿಂದ ಅಪರೂಪವಾದ ಸಮಾಧಾನ, ನೆಮ್ಮದಿಗಳು ದೊರಕುವ ಭಕ್ತಿಯ ಸ್ವರೂಪವಾಗಿ, ಮೈದಳೆಯಿತು. 'ಭಕ್ತಿ' ಭಗವಂತನ ಸ್ಮರಣೆಯ ಸಾಧನವಾಗಿದೆ. ಭಕ್ತನ ಭಕ್ತಿ ಪ್ರಕಟವಾಗಲು, ಆರಾಧಿಸಲು ಪ್ರಮುಖ ಆಧಾರವಾಗಿದ್ದುದು. ಈ ಕೀರ್ತನೆಗಳು ಪುರಂದರ ದಾಸರೇ ಹೇಳುವ ಹಾಗೆ, 'ಹರಿಭಕ್ತಿ'ನಾರದ ಭಿತ್ತಿದ ಧರೆಯೊಳಗೆ ಎಂಬುದನ್ನು ನೋಡಿದರೆ, ಭಕ್ತಿಯ ಹುಟ್ಟು ಅತ್ಯಂತ ಪ್ರಾಚೀನವೆನಿಸುತ್ತದೆ. ಇದರಿಂದ 'ಹರಿಭಕ್ತಿ', ಹರಿದಾಸ ದೀಕ್ಷೆ ಇವುಗಳ ಕುರಿತ ಅಧ್ಯಯನವು ಕ್ರಮಬದ್ಧವಾದ ಸಂಶೋಧನೆಗಳ ಮೂಲಕ ಬೆರಗುಗೊಳಿಸುತ್ತಿರುವುದು. 'ಭಜ್' ಧಾತುವಿನಿಂದ ಹುಟ್ಟಿದ ಭಕ್ತಿ ಅಥವಾ ಭಜ ಎಂದರೆ ಆಶ್ರಯಿಸು ಎಂಬರ್ಥ ಬರುವ ಸ್ವರೂಪವೇ ದಾಸಕೂಟವೆಂದು ಕರೆಯಬಹುದು. ಭಕ್ತಿಯು ಜ್ಞಾನ ಮತ್ತು ಇಚ್ಛೆಗಳನ್ನೊಳಗೊಂಡ ಮನಸ್ಸಿನ ಒಂದು ವಿಶಿಷ್ಟಶಕ್ತಿ. ಚಿತ್ತ ಚಾಂಚಲ್ಯವನ್ನು ನಿಗ್ರಹಿಸುವುದು. ಏಕಮನಸ್ಸಿನಿಂದ ಇಂದ್ರಿಯಗಳನ್ನು ಹಿಡಿತದಲ್ಲಿಟ್ಟು ಕೊಳ್ಳುವ ಭಾವವೇ 'ಭಕ್ತಿ'ಯ ಸ್ವರೂಪವಾಗಿರುತ್ತದೆ.

ಹರಿದಾಸ ಮಹಿಳೆಯರಲ್ಲೂ ಭಕ್ತಿಯು ಲೌಕಿಕ ಬದುಕಿನ ಸಂಕಟಗಳಿಂದ ಪಾರಾಗಲು ಸಾಧನ ವಾಯಿತು. ಮಹಿಳೆಯರಿಗೆ ಪ್ರಪಂಚವೆಂದರೆ, ಕುಟುಂಬವಾಗಿದೆ. ತಮ್ಮ ಸಾಂಸಾರಿಕ ಬದುಕಿನಲ್ಲಿ ಎದು ರಾಗುವ ಅನೇಕಾನೇಕ ಸಮಸ್ಯೆ, ಸವಾಲುಗಳಿಗೆ ಉತ್ತರಗಳನ್ನು ಕಂಡುಕೊಂಡಿದ್ದೇ ಈ ಭಕ್ತಿಯ ಆಶ್ರಯದಲ್ಲಿ ಎನ್ನಬಹುದು. ಕೌಟುಂಬಿಕ ಪರಿಧಿಯಲ್ಲಿ ತನ್ನನ್ನು ತಾನು ಸುತ್ತುಗೊಳ್ಳುವ ಮಹಿಳೆಗೆ ಭಕ್ತಿಯ ಆಚರಣೆಗೆ ಸುಗಮ ಸರಳವಾದ ದಾರಿಯಾಯಿತು. ಹರಿನಾಮ ಸ್ಮರಣೆ, ಸಂಕೀರ್ತನೆಗಳ ಮೂಲಕ, ತಮ್ಮ ದುಃಖ ದುಮ್ಮಾನಗಳನ್ನು ಮರೆಯುತ್ತಾರೆ. ತಮ್ಮೊಳಗೆ ಅಡಗಿದ್ದ, ಸತ್ಯದ ಅನಾವರಣಕ್ಕೆ, ಕೌಟುಂಬಿಕ ಪರಿಸರದಲ್ಲಿ ಹರಿದಾಡುವ ಭಕ್ತಿಪರವಾದ ಹಾಡುಗಳಿವು ಎಂಬುದನ್ನು ಗಮನಿಸಿದಾಗ ಸೀಮಿತ ಅವಕಾಶಗಳಲ್ಲೇ ಮಹಿಳಾಹರಿದಾಸರು ಕಂಡುಂಡ ಅನುಭವಗಳನ್ನು ಹರಿಭಕ್ತಿಯಮೊರೆಯಲ್ಲಿ ಪ್ರಕಟಪಡಿಸಿದರು. ಹರಿದಾಸ ಸಾಹಿತ್ಯದಲ್ಲಿ ಭಕ್ತಿಯ ಪಂಚಭಾವಗಳನ್ನು ಆರಾಧನೆಗೆ, ಕೃಷ್ಣಭಕ್ತಿಗೆ, ಸಹಕಾರಿಯಾಗಿಸಿಕೊಂಡಿದ್ದಾರೆ. ಈ ಪಂಚಭಾವಗಳಲ್ಲಿ ದಾಸರು ಶ್ರೀಹರಿಯನ್ನು ಅನನ್ಯ ಪ್ರೀತಿ, ಭಕ್ತಿ, ಶ್ರದ್ಧೆಗಳಿಂದ ಧ್ಯಾನಿಸಿ ಪೂಜಿಸಿ ಆರಾಧಿಸುವಲ್ಲಿ ನಿಂದಾ ಸ್ತುತಿಯು ಒಂದಾಗಿದೆ. ಗಲಗಲಿ ಅವ್ವನವರು ತಮ್ಮ ಕೀರ್ತನೆಗಳಲ್ಲಿ ರಾಮೇಶನ ಕುರಿತು ಅಪಾರವಾದ ಭಕ್ತಿ ಭರವಸೆಗಳ ಪೂರವನ್ನೇ ತಮ್ಮ ಕೀರ್ತನೆಗಳಲ್ಲಿ ಹಾಡುತ್ತಾರೆ. ಶ್ರೀ ರಾಮೇಶನನ್ನು ಸ್ತುತಿಸುವ ಪರಿಯು ಅವ್ವನವರ ಭಕ್ತಿಯ ಮನಸ್ಸಿನ ಸ್ವರೂಪವಾಗಿದೆ. ಸಾಹಿತ್ಯದಲ್ಲಿ ಹರಿದಾಸ ಭಕ್ತಿ ಸ್ವರೂಪವು ಮೈವೆತ್ತಿರುವುದು ಅದರಂತೆಯೇ ಭಕ್ತ ಭಗವಂತರ ನಡುವಿನ ಪರಸ್ಪರ ಸಂಬಂಧಗಳನ್ನು ಮನುಷ್ಯರ ನಡುವಿನ ಸಂಬಂಧಂತೆಯೇ ಕಲ್ಪಿಸಿಕೊಂಡು ಭಗವಂತನನ್ನು ಆರಾಧಿಸುವುದು ಕಂಡುಬರುತ್ತದೆ.

''ಶ್ರೀಪಾದರಾಜರ ಆತ್ಮ ನಿವೇದಕ ಕೀರ್ತನೆಗಳೆಲ್ಲ ಭಗವಂತನನ್ನು ಒಡೆಯನೆಂದು ತಾವು ಅವನ ಸೇವಕನೆಂದು ಭಾವಿಸಿ ಹಾಡಿರುವುದು ಈ ಭಾವನೆಯಿಂದ ಭಕ್ತಿ ಸಾಧನೆ ಮಾಡುವುದು ಭಕ್ತಿ ಅಥವಾ ದಾಸ್ಯಭಾವವೆಂದು ಕರೆಯುವುದು ರೂಢಿ'' ಹರಿದಾಸರೆಂದು ತಮ್ಮನ್ನು ಕರೆದುಕೊಳ್ಳುವಲ್ಲಿಯೇ ಅವರ ದಾಸ್ಯಭಾವ ಪ್ರಕಟವಾಗಿದೆ. 'ವಾಸದೇವನೆ ನಿನ್ನ ದಾಸರ ದಾಸರ ದಾಸರ ದಾಸ್ಯವ ಕೊಡು'' ಎಂದು ಶ್ರೀಪಾದರಾಜರು ತಮ್ಮ ಇಷ್ಟದೈವವಾದ ರಂಗವಿಠಲನನ್ನು ಬೇಡಿಕೊಂಡಿರುವರು.

''ಒಡೆಯ ನಿನ್ನಡಿಗೆರಗುವ ಮನವನ್ನು ಕೊಡು', ನಿನ್ನ ಬಾಗಿಲ ಕಾಯುವ ಭಾಗ್ಯವನ್ನು ಕೊಡು' ಎಂಬುದೇ ದಾಸರ ಪ್ರಾರ್ಥನೆ. ಹರಿಯ ದಾಸರಾಗುವುದಕ್ಕಿಂತ ಅವನ ದಾಸರ ದಾಸರಾಗುವುದು ಹೆಚ್ಚಿನದು ಅವರ ದೃಷ್ಟಿಯಲ್ಲಿ''[೨]

ಅವ್ವನವರ ಕೀರ್ತನೆಗಳಲ್ಲಿ ನಾವು ಈ ದಾಸ್ಯಭಾವವನ್ನು ಕಾಣಬಹುದು. ಮುಯ್ಯ ಒಯ್ಯುವ ನೆಪದಿಂದ ಹೊರಡುವ ಪಾಂಡವರ ಪರಿವಾರವೆಲ್ಲ ಕೃಷ್ಣಭಕ್ತಿಯ ಸಮೂಹವಾಗಿ ಭಕ್ತಿಯ ಪೂರವಾಗಿ ದ್ವಾರಕೆಗೆ ಸಾಗಿಬರುವುದು. ದ್ವಾರಕೆಯ ವೈಭವವನ್ನು ವರ್ಣಿಸುವಲ್ಲಿ ಅವ್ವನ ಕಾವ್ಯಶಕ್ತಿ ಪದಪುಂಜಗಳ ಸಾಲುಸಾಲೇ ನಿರ್ಮಾಣವಾಗಿರುವುದು. ದ್ವಾರಕಾಪುರವನ್ನು ವರ್ಣಿಸುತ್ತಾ,

''ಅಪ್ಪರಾಮೇಶನು ಇಪ್ಪಂಥ ಅರಮನೆಯು
ಅಪ್ರಾಕೃತ ವೈಕುಂಠ
ಅಪ್ರಾಕೃತ ವೈಕುಂಠವೆಂಬೋದು
ಸುಪ್ರಕಾಶವಾಗಿ ಹೊಳೆದೀತು

ಕೃಷ್ಣನ ದ್ವಾರಕೆಯನ್ನು ವರ್ಣಿಸುತ್ತಲೇ ಸಿರಿಯರಸು ರಾಮೇಶನನ್ನು ಬೇಡಿಕೊಳ್ಳುವ ಪರಿಯಲಿ

''ಮುರಲೀಧರ ಮೋಹನಾಂಗ
ಕಾಯೋ ಕೃಪಾಂಗ
ದೇವ ನರಸಿಂಹ ಹೇಭವಭಂಗ''

ಎಂದು ಅನನ್ಯ ಭಕ್ತಿಯ ನಿವೇದನೆಯನ್ನು ಹಲವಾರು ಬಗೆಯಲಿ ಪ್ರಕಟಪಡಿಸುವರು.

''ಕಂಡು ಮನ ಹಿಗ್ಗೋದು
ರಂಗಯ್ಯನ ಕೊಂಡಾಡಿ
ಮನ ಉಬ್ಬೋದು''

''ಭಕ್ತ ಭಗವಂತರ ನಡುವೆ ತಾಯಿ ಮಗುವಿನ ಸಂಬಂಧವನ್ನು ಕಲ್ಪಿಸಿಕೊಂಡು ಆರಾಧಿಸುವುದು ವಾತ್ಸಲ್ಯಭಕ್ತಿ ಅಥವಾ ವಾತ್ಸಲ್ಯಭಾವ. ಕೃಷ್ಣನನ್ನು ಮಗುವಾಗಿ ಕಲ್ಪಿಸಿಕೊಂಡು ತಾವು ಯಶೋಧೆಯಾಗಿ, ಒಬ್ಬ ಗೋಪಿಯಾಗಿ ಮಗು ಕೃಷ್ಣನನ್ನು ಅಪ್ಪಿ ಮುದ್ದಾಡಿ ಹಾಡಿ ಊಡಿ ಅಲಂಕರಿಸಿ ಸಂಭ್ರಮಪಟ್ಟಿದ್ದಾರೆ.

ಶ್ರೀ ಪಾದರಾಜರು, ಭಾಗವತದ ದಶಮಸ್ಕಂದದಲ್ಲಿ ಬರುವ ಕೃಷ್ಣನ ಬಾಲ್ಯದ ವರ್ಣನೆ ಹರಿಭಕ್ತರೆಲ್ಲರಿಗೂ ರಸಗವಳ''[೧೩] ಹರಿದಾಸರೆಲ್ಲರೂ ಈ ವಾತ್ಸಲ್ಯಭಾವದಲ್ಲಿ ಕೃಷ್ಣನನ್ನು ತಮ್ಮ ಕಂದನನ್ನಾಗಿಸಿ ತಮ್ಮ ತಾಯಿ ಪ್ರೀತಿಯನ್ನು ಮೆರೆಸಿದ್ದಾರೆ. ಇದಕ್ಕೆ ಅವ್ವನವರು ಹೊರತಾಗಿಲ್ಲ. ಅವ್ವ ತಮ್ಮ ಕಾವ್ಯದಲ್ಲಿಯೂ ಮುದ್ದು ಕೃಷ್ಣನ ಸರಸ ಸಲ್ಲಾಪವನ್ನು ಗೋಪಿಯರ ಮಾತುಗಳಲ್ಲಿ ರಚಿಸಿದ್ದಾರೆ.

''ಬಾಲೆಯರು ಅಂಗಾಲು ಲಾಲಿಸಿ ಒರೆಸುತ
ಮ್ಯಾಲೆ ಪನ್ನೀರು ಎರೆಯುತ
............ ರಂಗಯ್ಯನ
ಕಾಲಿಗೆ ಎರಗುವರು ಐವರು''

ಕೃಷ್ಣನಿಗೆ ಪಾಂಡವರು ಅತ್ಯಂತ ಭಕ್ತಿಯಿಂದ ನಮಿಸುವುದನ್ನು ವರ್ಣಿಸುವ ಅವ್ವ, ತನ್ನ ವಿಶೇಷವಾದ ಕೃಷ್ಣಪ್ರೀತಿಯನ್ನು 'ಜೋಗಳದ ಕೀರ್ತನೆ'ಯ 'ಜಿಲ' ನುಡಿಗಳಲ್ಲಿ ರಚಿಸುವರು. ವಿಶೇಷವಾದ ಕೃಷ್ಣನ ಬಾಲ್ಯದ ಚಿತ್ರಣವನ್ನು ಅತ್ಯಂತ ಸುಂದರವಾದ ವರ್ಣನೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

**ಸಖ್ಯಭಾವ :** ಸಖತನ ಅಥವಾ ಗೆಳತನ ಎಂಬುದು ಹರಿದಾಸರಲ್ಲಿ ಭಕ್ತ-ಭಗವಂತನ ನಡುವಿನ ಅನ್ಯೋನ್ಯತೆಯನ್ನು ಸಾರುವಂತಹದ್ದು. ಭಕ್ತ-ಭಗವಂತರ ನಡುವೆ ಗೆಳೆತನದ ಸವಿಯನ್ನು ಸಲಿಗೆಯನ್ನು ಕಲ್ಪಿಸಿಕೊಂಡು ಪರಸ್ಪರ ಸ್ನೇಹಿತರೆಂಬ ಕಲ್ಪನೆಯಿಂದ ಭಕ್ತಿ ಸಾಧನೆ ಮಾಡುವುದು 'ಸಖ್ಯ ಭಕ್ತಿ' ಅಥವಾ 'ಸಖ್ಯಾಭಾವ' ಶ್ರೀಪಾದರಾಯರಲ್ಲಿ ಸಖ್ಯಭಕ್ತಿಯ ಕೀರ್ತನೆಗಳೂ ವಿಶೇಷ ಕಾವ್ಯ ಸೌಂದರ್ಯದಿಂದ ಕೂಡಿವೆ. ಶ್ರೀಹರಿ ತಮ್ಮ ಬಾಲ್ಯದಸ್ನೇಹಿತನೆಂದು ಪರಿಭಾವಿಸಿರುವ ಶ್ರೀಪಾದರಾಜರು ಅನೇಕ ವರ್ಷಗಳ ಬಳಿಕ ಅಗಲಿದ್ದ ಆ ಬಾಲ್ಯ ಸ್ನೇಹಿತನೆಂದು ತುರುಗಾಹಿ ಹರಿಯನ್ನು ಭೇಟಿಯಾದಂತೆ ಕಲ್ಪಿಸಿಕೊಂಡು ಒಂದು ಮೋಹಕ ಕೃತಿಯನ್ನು ರಚಿಸಿದ್ದಾರೆ.

''ಮರೆತೆಯೇನೊ ರಂಗ ಮಂಗಳಾಂಗ
ತುರುಕರು ಕಾಯ್ವಲ್ಲಿ ತೊಂಡನಾಗಿದ್ದೆನ್ನ ||ಪ||
ಕೋಲು ಕೈಯಲಿ ಕೊಳಲು ಜೋಲುಗಂಬಳಿ ಹೆಗಲ
ಮ್ಯಾಲೆ ಕಲ್ಲಿಬೀಲ ಕಂಕುಳಲ್ಲಿ''[೧೪]

ಎಂಬ ಶ್ರೀಪಾದರಾಜರ ಅನಿಸಿಕೆಯು ಭಗವಂತ ಆಪ್ತ ಗೆಳೆಯನೆಂದು ಅವನೊಡನಿರುವ ಸಲಿಗೆಯಿಂದ ಪ್ರಶ್ನಿಸುವ, ಕೃಷ್ಣನ ಬಾಲ್ಯದ ಚಿತ್ರಣವನ್ನು ನೆನಪಿಗೆ ತಂದುಕೊಡುವ ಸನ್ನಿವೇಶವು ಚೇತೋಹಾರಿಯಾದ ಕಲ್ಪನೆಯಾಗಿರುವುದು. ಅದರಂತೆಯೇ, ಅವ್ವನವರು ತಮ್ಮ ಕೀರ್ತನೆಯಲ್ಲಿ ಶ್ರೀಹರಿಯ ಸಖತನವನ್ನು ಕಲ್ಪಿಸಿರುವುದು ವಿಶಿಷ್ಟವಾಗಿದೆ.

''ಕೇಳೊ ಗೋವಿಂದ ಹೇಳಿದರಂತು ಬಲು ಚಂದ
ಇಂದಿರೇಶನ ಗುಣ ಚಂದಿಲ್ಲ

ಚಾರವಿಲ್ಲ ಅಂದರೆ
ಭಾಳ ಬಲು ಕೋಪ ಕೇಳೊ ಗೋವಿಂದ ||ಪ||
ಅಚ್ಯುತ ನೀನೊಬ್ಬ ಹುಚ್ಚಾಗೊ ಹುರುಳಾಗೊ
ಮೆಚ್ಚಿದವರೆಲ್ಲ ನಿನಗುಣ
ಮೆಚ್ಚಿದವರೆಲ್ಲ ನಿನಗುಣ ಕಲಿತಮ್ಯಾಲೆ
ಉಚ್ಚ ರಾಮೇಶನ ಒಗೆತನ ಕೇಳೊ ಗೋವಿಂದ||೭||"

ಅವ್ವನವರು, ತಮ್ಮ ಕಾವ್ಯದಲ್ಲಿ ಕೃಷ್ಣಭಕ್ತಿಯ ಸಖ್ಯಭಾವವನ್ನು ತಮ್ಮದೇ ರೀತಿಯ ನಿಂದಾಸ್ತುತಿ ತಂತ್ರದಿಂದ ಬಳಸಿಕೊಂಡಿದ್ದಾರೆ. ಕೃಷ್ಣನ ರಮ್ಯ ಜೀವನವನ್ನು ಕುರಿತಂತೆ ಆಡಿರುವ ಮಾತುಗಳು ಇಂದಿರೇಶನ ಗುಣ ಚಂದಿಲ್ಲ, ಚಾರವಿಲ್ಲ' ಎಂದರೆ ಬಹುಕೋಪ ತಾಳುವನು ಎಂಬುದಾಗಿ ಅವ್ವ, ತನ್ನ ಇಷ್ಟದೈವವನ್ನು ಅತ್ಯಂತ ತೀಕ್ಷ್ಣವಾಗಿ ಜರೆದಿದ್ದಾರೆ. ಗುಣಗಳ ಗಣಿಯೆಂದು ವರ್ಣಿಸಲಾದ ಗೋವಿಂದನ ಗುಣ ಚಂದಿಲ್ಲ ಚಾರವಿಲ್ಲ ಎಂಬಲ್ಲಿ ಆಕೆಯ ನೇರ ನಿಷ್ಠೂರವು ಹರಿಸ್ಮರಣೆಯ ರೂಪದಲ್ಲಿ ವ್ಯಕ್ತವಾಗಿರುವುದು.

"ಸಾಕೊ ರಂಗ ಅರಸುತನ ಯಾಕೊ ಯಾಕೊ
ಗೋಕುಲದ ಗೊಲ್ಲರು ನಗಿಸಿಗಲ್ಲವ ಹಿಂಡಿ
ಕಾಕು ಮಾಡಿದ್ದು ನಿನಗೆ ಬೇಕೊ ಬೇಕೊ
ಅರಿಯದಲೆ ನಿನ್ನ ಎದೆಯಲ್ಲೊದ್ದ ಭೃಗು ಋಷಿ
ದುರಳ ಶಿಶುಪಾಲನ ಸಭೆಯೊಳು
ದುರಳ ಶಿಶುಪಾಲನ ಸಭೆಯೊಳು ಬೈದದ್ದು
ಸರಿಬಂತೆ ರಾಮೇಶನ ಮನಸಿಗೆ ಮನಸಿಗೆ"

ಅವ್ವ, ತಾನು ರಚಿಸಿರುವ ಹಾಡುಗಳಲ್ಲಿ ರಾಮೇಶನೊಡನಿರುವ ಸಖ್ಯಭಾವಕ್ಕೆ ಅತ್ಯಂತ ಸಲಿಗೆಯಿಂದ ಪ್ರಶ್ನಿಸುವ ಧಾಟಿಯಿದು. ಕೃಷ್ಣನ ಮಹಿಮೆಯ ತಿಳಿದು ಲೋಕವೆಲ್ಲ ಆತನಿಗೆ ಅರಸುತನ ಕೊಟ್ಟು ಗೌರವಿಸಿದ್ದನ್ನು ಪ್ರಶ್ನಿಸುತ್ತಾ, ಗೋಕುಲದೊಳಗೆ ಕೃಷ್ಣನು ಬಾಲ್ಯದಲ್ಲಿ ನಡೆಸಿದ ತುಂಟಾಟಗಳಿಂದ ಗೊಲ್ಲರು ಮಾಡುವ ಆರೋಪ, ಅಪವಾದಗಳೆಲ್ಲಕ್ಕೂ ಕೃಷ್ಣನ ತುಂಡುತನವು ಕಾರಣವಾಗಿದೆ. ಅವರಿಂದ ಬೈಯಿಸಿ ಕೊಳ್ಳುವ ಚಿತ್ರಣ ಕೃಷ್ಣನ ದೈವತ್ವಕ್ಕಿಂತಲೂ ಒಂದು ಹೆಜ್ಜೆ ಮುಂದೆ ಹೋಗಿ. ಆಪ್ತಭಾವ ಮೂಡಿರುವುದು ಗೊಲ್ಲರ ಕಾಕುವಿಗೆ ಗುರಿಯಾದ ಕೃಷ್ಣನ ಬಾಲ್ಯದ ನೆನಪು ಮೂಡಿಸುವಂತಿದೆ. ಅದರೊಡನೆಯೇ ಶ್ರೀಕೃಷ್ಣನು ತನ್ನ ಭಕ್ತರ ಸಕಲ ತಪ್ಪುಗಳನ್ನು ಮನ್ನಿಸಿಬಿಡುವ ಮನ್ನಾರಿ ಮುರಾರಿ ಎಂದಿದ್ದಾರೆ. ಹರಿದಾಸರು. ಅದಕ್ಕೆ ಅವ್ವ ಹೊರತಲ್ಲ, ಅರಿಯದಲೆ ಎದೆಯಲೊದ್ದ ಭೃಗು ಮಹರ್ಷಿಯನ್ನು ಕ್ಷಮಿಸಿಬಿಡುವ, ದುರಳ ಶಿಶುಪಾಲನ ನೂರೊಂದು ತಪ್ಪುಗಳನ್ನು ಸಹಿಸಿಕೊಂಡು ಕ್ಷಮೆ ನೀಡುವ ಗುಣವು ರಾಮೇಶನ ಮನಸಿಗೆ ಸರಿ ಬಂದರೂ, ರಾಮೇಶನ ಭಕ್ತರಿಗದು ಅತಿ ಕ್ಷಮಾಗುಣ ಸಹಿಸಲಸಾಧ್ಯವಾದುದು. ರಾಮೇಶನನ್ನು

ಭಕ್ತರು ಪರಿಭಾವಿಸುವುದು ತಮ್ಮ ಸ್ವಂತ, ವೈಯುಕ್ತಿಕ ಬದುಕಿಗೆ ಆದ ಅಪಮಾನವೆಂಬಂತೆ, ಅದರಿಂದಲೇ ಭಗವಂತ ಭಕ್ತರ ಕಟುನುಡಿಗಳನ್ನು ಹಲವು ಅಪವಾದಗಳನ್ನು ಸಹಿಸಿದರೂ ಆತನ ಭಕ್ತರಿಗದು ಸರಿಬರದೇ ಭಗವಂತನ ನಡವಳಿಕೆಯನ್ನೇ 'ನಿನಗಿದು ಸರಿಬಂತೆ' ಎಂಬ ಆಕ್ಷೇಪ ವ್ಯಕ್ತಪಡಿಸಿ ತಮ್ಮ ಅಸಮಧಾನವನ್ನು ಹೊರಗೆಡಹಿದ್ದಾರೆ. ಅವ್ವ, ತನ್ನ ಇಷ್ಟದೈವ ರಾಮೇಶನ ಭಕ್ತಿಗೆ ಚ್ಯುತಿ ಬಂತೇನೋ ಎಂಬಷ್ಟು ವ್ಯಗ್ರರಾಗಿದ್ದಾರೆ.

**ಮಧುರಭಾವ :** ''ಭಕ್ತ-ಭಗವಂತರ ನಡುವೆ ಸತಿ-ಪತಿಯರ ಸಂಬಂಧವನ್ನು ಕಲ್ಪಿಸಿ ಆರಾಧಿಸುವುದು 'ಮಧುರ ಭಕ್ತಿ' ಅಥವಾ ಮಧುರ ಭಾವ. ಶ್ರೀಪಾದರಾಜರ ವೇಣುಗೀತೆ, ಗೋಪಿಗೀತೆ ಹಾಗೂ ಭ್ರಮರ ಗೀತೆಗಳಲ್ಲಿ ಕೃಷ್ಣಗೋಪಿಯರ ದೈವಿಕ ಪ್ರೇಮ, ಮಧುರ ಬಾಂಧವ್ಯಗಳು ಓದುಗರ ಅನುಭವಕ್ಕೆ ಬರುತ್ತವೆ. ಕೃಷ್ಣನ ಮೋಹಕ ಮುರಳೀಗಾನದ ಚಿತ್ರಣವೇ ಸಾಕು, ಎಂಥವರಿಗೂ ಮತ್ತೇರಿಸುತ್ತದೆ. ಪ್ರಕೃತಿಯ ಪ್ರಶಾಂತ ಪರಿಸರದಲ್ಲಿ ಅಲೆ ಅಲೆಯಾಗಿ ತೇಲಿ ಬರುವ ವೇಣುಗಾನಕ್ಕೆ ಮನಸೋಲದವರಾರು? ರಂಗ ಕೊಳಲನ್ನೂದುತ್ತ ಬಂದರೆ 'ಹಂಗ ವಿಹಂಗ ಭುಜಂಗ ನವಿಲು ಸಾರಂಗ ಗಿಣಿಯು ಮಾತಂಗ ಮರಿಯು ಕುರಂಗ'ವೇ ಮೊದಲಾದ ಪಶುಪಕ್ಷಿಗಳು ಬಂದು ಅವನ ಪಾದಗಳಿಗೆರಗುವುದು. ಗೋಪಿಯರ ಪ್ರೀತಿಯಿಂದ

ಬಂಗಾರ ಬಟ್ಟಲೊಳಗೆ ಅಂದು ಕ್ಷೀರವ ತಂದು
ರಂಗಗರ್ಪಿಸುವೆವು ನಾವೆಂದು ಹರುಷದೊಳಂದು
ಅಂಗನೆಯರು ಮೈಮರೆತು ನಿಂದು ಒಲಿಯಬೇಕೆಂದು
ಮಂಗಳ ಮಹಿಮನು ನೀನೆಂದು ಅತಿ ಭಕುತಿಯೊಳಂದು
ತುಂಗವಿಕ್ರಮನ ಪಾದಂಗಳಿಗೆರಗಲು

ಅವರ ಅಭಿಮಾನಕ್ಕೆ ಮನಸೋತ ಶ್ರೀಕೃಷ್ಣನು ತಲೆತಗ್ಗಿಸಿ ನಿಂತಿದ್ದವರನ್ನು 'ಮಂದರೋದ್ಧರನಲ್ಲೆ ಮನವಿಟ್ಟ' ಅವರನ್ನು ಕೈಹಿಡಿದು ಮೇಲೆತ್ತಿದನು. ಕೃಷ್ಣನ ಆಸ್ಪರ್ಶ ಪ್ರೀತಿಗಳಿಂದ ಗೋಪಿಯರ ಮನಸ್ಸು ಬೆಳದಿಂಗಳಿನಲ್ಲಿ ಮಿಂದಂತೆ ಹಿತವನ್ನನುಭವಿಸಿತು. ಕೃಷ್ಣ ಗೋಪಿಯರ ಈ ಮಧುರ ಮಿಲನವನ್ನು ಕಂಡ ದೇವಾನುದೇವತೆಗಳು ಪುಷ್ಪ ವೃಷ್ಟಿಗರೆದರಂತೆ.''[೧೫] ಇದು ಅವ್ವನವರ ಕೀರ್ತನೆಗಳಲ್ಲಿಯೂ ಈ ಮಧುರ ಭಾವವನ್ನು ಕಾಣಬಹುದಾಗಿದೆ. ಅವ್ವ, ತನ್ನ ವಿಶೇಷ ಹಾಸ್ಯಮಯ ಗುಣವನ್ನು ಸೇರಿಸಿ ಈ ಮಧುರ ಭಾವಕ್ಕೆ ಹಾಸ್ಯ ಹೊದಿಕೆ ಹೊದಿಸಿದ್ದಾಳೆ.

'ನಳಿನಾಕ್ಷಿಯರ ಮನ ಕೊಳಲೂದಿ ರಾತ್ರಿಲೆ
ಸೆಳೆದೆಲ್ಲೊ ಕಪಟ ಭಾವದಲೆ ಕೃಷ್ಣ
..............
ಎಳೆಯ ಮಕ್ಕಳು ಗಂಡ ಉಳಿದ ಭಾಗ್ಯವ ಬಿಟ್ಟು
ಅಳಿದೆಲ್ಲೊ ಅವರ ಒಗೆತನವ

ಕೃಷ್ಣ ನಿನ್ನ ಮೋಹಕ ಕೊಳಲಿನ ದನಿಯಿಂದ ಗರತಿಯರ ಮಾನಕ್ಕೆ ಧಕ್ಕೆ ಬಂದಿತ್ತಲ್ಲೋ ಎಂಬುದಾಗಿ ನುಡಿಯುತ್ತಾರೆ. ಕೃಷ್ಣನ ಕೊಳಲಿನ ದನಿಗೇಳಿ ಬರುವ ಗೋಪಿಯರ ಮನಸ್ಸು ಅಲ್ಲೋಲ ಕಲ್ಲೋಲವಾದ ದ್ದನ್ನು ಚಿತ್ರಿಸಿರುವುದು ಹೀಗೆ.

"ಕಂಜಾಕ್ಷ ಶ್ರೀಕೃಷ್ಣ ರಂಜಿಸಿ ಕೊಳಲೂದಿ
ಮಂಜುಳ ಸ್ವರಕೆ ಮೋಹಿಸುತ ಬಾಲೆ
..................
ಕುಂಜರಗಮನೆಯರು ಸಂಜಿಲೆ ಬಂದರು
ಅಂಜದೆ ಅತ್ತೆಮಾವರಿಗೆ
ಭಾವ ಮೈದುನರನ್ನ ಕೇವಲ ತುಚ್ಛಿಸಿ
ಧಾವಿಸಿ ಬಂದ ಬಾಲೆಯರ ಪಾವನ
ಮಾಡದೆ ದೇವ ರಾತ್ರಿಯೊಳು

ತಂದೆ ತಾಯಿ ಬಂಧುಬಳಗ ಬಿಟ್ಟು ಕೃಷ್ಣ ನಿನ್ನಂಘ್ರಿಗಾಗಿ ಹಾತೊರೆದು ಬರುವ ಗೋಪಿಯರನ್ನು ಒಂದೂ ಮಾತನಾಡದೆ ಕಂದಿಸಿ ಕುಂದಿಸಿದೆಯಲ್ಲ ಸರಿಯೇನು ಎಂದು ಪ್ರಶ್ನಿಸುತ್ತಾರೆ. ಗೋಪಿಯರು ಕೃಷ್ಣನನ್ನು ಕಾಣುವ, ಸೇರುವ ಕಾತುರಾತುರಗಳಿಂದ ಮನೆ ಬಿಟ್ಟು ಸರಿ ರಾತ್ರಿಯಲಿ ಬರುವ ಧಾವಂತದಲಿ, ಚಿತ್ತ ಚಂಚಲವಾಗಿ ಎತ್ತಿಗೆ ಮುರವಿಟ್ಟು, ಮತ್ತೊಂದು ಹೋರಿಯ ತರಿಸೆ ಬಾಲೆ, ಹತ್ತಿರಿದ್ದವರೆಲ್ಲ ಅತ್ಯಂತ ನಗುವರು, ಮಂಗನ ಮರಿಯೆತ್ತಿ ಅಂಗಿಯ ತೊಡಿಸುತ ರಂಗನ ಬಳಿಗೆ ಬಾರೆಂದು ಅಕ್ಕತಂಗಿಯರು ಕಂಡು ಹಂಗಿಸಿ ನಗುವರು.

ಬೆಕ್ಕಿನ ಬಾಯೊಳಗೆ ಇಕ್ಕುತ ತುತ್ತನೆ, ಚಿಕ್ಕ ಕಂದಯ್ಯ ಉಣ್ಣೆನುತ ಬಾಲೆ, ಗೆಳತಿಯರು ಚಕ್ಕನೆ ಜರಿದರು, ಚಕ್ಕಂದವನೋ ಮಾಡಿದೆಯೊ ಎಂದು ಕೃಷ್ಣನನ್ನು ಕಾಣಲು ಆತುರ ಕಾತುರಗಳಿಂದ ಹೊರಡುವ ಗೋಪಿಯರ ಧಾವಂತದ ಚಿತ್ರಣವು ಅಪ್ಪನವರ ಕಾವ್ಯ ಹಾಸ್ಯಮಯವಾಗಿರುವುದು ಹಾಗೂ ತಮ್ಮ ಕಾವ್ಯಕ್ಕೆ ಹಾಸ್ಯವನ್ನು ರಸಮಯ ಸನ್ನಿವೇಶಗಳನ್ನು ಭಕ್ತಿ ಹೆಸರಿನಲ್ಲಿಯೇ ನೀಡುತ್ತಾರೆ. ಇಲ್ಲಿ ಕೀರ್ತನೆಗಳು ಭಕ್ತಿಯ ಸ್ವರೂಪದ ನವಭಾವಗಳನ್ನು, ಸಂಪ್ರದಾಯದ ಆಚರಣೆಗಳಲ್ಲಿ ರಚಿಸಿದ್ದಾರೆ. ಕಾವ್ಯವಿಲ್ಲಿ ಭಕ್ತಿ,ಭಾವಗಳ ಸಮ್ಮಿಲತೆಯಿಂದ ರಸಗಟ್ಟಿ ಹರಿದಿರುವುದು.

ಮತದೊಳು ಮಧ್ವಮತ, ವ್ರತದೊಳು ಹರಿದಿನ

"ಕಥೆಯೊಳು ಭಾಗವತವೆನ್ನಿಕೋಲ
ಕಥೆಯೊಳು ಭಾಗವತವೆನ್ನಿ ರಾಮೇಶನ
ಅತಿಭಕ್ತರ ನಡುವೆ ಪಥವೆನ್ನಿ ಕೋಲ"

ಹರಿಯ ಭಕ್ತರ ಅತಿಭಕ್ತಿಯು ತನ್ನದೇ ಪಥ ನಿರ್ಮಿಸಿಕೊಂಡು ಸಾಗುತ್ತಿದೆ, ಹರಿಕಥೆಯು ಭಾಗವತರ ಪ್ರೀತಿಯ ಕಾರ್ಯವಾಗಿರುವುದು.

"ಪಾದವ ತೊಳೆದು ಪಾವನರಾಗಿ
ಹರುಷದಿ ತಲೆದೂಗಿ
ಪಾದವ ತೊಳೆದು ಪಾವನರಾಗಿ
ಭಾವೆ ವಿನೋದದಿ ಕೃಷ್ಣ ನಗುತಲಿ"

ಎಂದು ಆಚರಿಸುವ ಸಂಪ್ರದಾಯದ ನಿಯಮದಲ್ಲಿ ಕೃಷ್ಣನನ್ನು ಭಕ್ತಿಯಿಂದ ನಮಿಸುವುದು. "ವಿಷ್ಣು ಸರ್ವೋತ್ತಮ, ವಿಷ್ಣುಪರದೈವ ವಿಷ್ಣುದಾಸರೆಂಬೊ ಬಿರುದಿನ ಕೋಲ. ವಿಷ್ಣುದಾಸರೆಂಬ ಬಿದುರಿನ ಢಕ್ಕಿಯ ಘುಟ್ಯಾಗಿ ತಾವು ಹೊಯಿಸುತ ಕೋಲ" ಎಂದು ಸಂತೋಷದಿಂದ ಹಾಡಿ ಹೊಗಳಿದ್ದಾರೆ. ಹರಿಭಕ್ತಿಯಲ್ಲಿ ಮೈಮರೆಯುವರು. ತಮ್ಮ ಭಕ್ತಿಯ ಅನನ್ಯತೆಯಲ್ಲಿ ಸೇರಿಕೊಳ್ಳುವ ಪರಿ, ಅವರ ಮಧುರಭಾವದ ಉತ್ಕಟತೆಯನ್ನು ನಿರೂಪಿಸುತ್ತವೆ.

**ಸಮರ್ಪಣಾ ಮನೋಭಾವ:** ಭಕ್ತ ಭಗವಂತರ ನಡುವಿನ ಸಾಮರಸ್ಯವನ್ನು 'ಭಕ್ತಿ' ಎಂದು ಗುರುತಿಸುತ್ತೇವೆ. ಭಕ್ತನು ತನ್ನ ಅನನ್ಯ ಭಕ್ತಿಯಿಂದ ಭಗವಂತನ ಕರುಣೆಯನ್ನು, ಕೃಪೆಯನ್ನು ಪಡೆಯಲು ತನಗೆ ಗೊತ್ತಿರುವ ಹಲವಾರು ರೀತಿಯ ವ್ರತ ಪೂಜೆಗಳನ್ನು, ನೇಮರೀತಿಗಳನ್ನು ಮಾಡುತ್ತಾನೆ. ಮನಸ್ಸಂತೋಷ ಪಡುತ್ತಲೂ, ಭಗವಂತನ ಸಾನಿಧ್ಯಕ್ಕೆ ಹಾತೊರೆಯುವ ಭಕ್ತನು ತನ್ನನು ಮರೆತು ದೇವ ದರ್ಶನಕ್ಕೆ ಹಾತೊರೆಯುವುದು. ತನ್ನತನವನ್ನೇ ದೇವರ ಕೃಪೆಗಾಗಿ ಮುಡುಪಾಗಿಡಲು ಹವಣಿಸುವುದೇ ಸಮರ್ಪಣೆ ಎಂದು ಕರೆಯಬಹುದು.

ಹರಿದಾಸರು ತಮ್ಮ ಕೀರ್ತನೆಗಳ ಮೂಲಕ ಹರಿಸರ್ವೋತ್ತಮತೆಯನ್ನು ಸಾರುತ್ತಾರೆ. ಜನರ ಮನಸ್ಸಿನಲ್ಲಿ ಹರಿಭಕ್ತಿಯನ್ನು ಪ್ರವಹಿಸುವಂತೆ ಮಾಡಿದವರು. "ಶ್ರೀಪಾದರಾಜಾದಿ ಹರಿದಾಸರು ಹರಿಪರವಾದ ಕೀರ್ತನೆಗಳನ್ನು ರಚಿಸಿ ಹಾಡುವ ಮೂಲಕ ತಮ್ಮ ಸಾಧನೆಯ ಮಾರ್ಗವನ್ನು ಕ್ರಮಿಸಿದ್ದಾರೆ. ಅವರ ಭಕ್ತಿ, ನಿಷ್ಠೆ, ಭಕ್ತಿಯ ವೈವಿಧ್ಯ, ಗಹನವಾದ ತತ್ವವಿಚಾರಗಳನ್ನೇ ಸರಳ ಭಾಷೆಯ ಮೂಲಕ ಹೇಳುವ ರೀತಿ, ಹಾಗೆ ಹೇಳುವ ಸಂದರ್ಭದ ತೀವ್ರತೆ, ಒತ್ತಡ ಭಾವವೇಶಗಳಿಗೆ ತಕ್ಕ ಭಾಷೆಯ ಬಳಕೆ, ಅದರ ಬೆಡಗು, ಬಳುಕು, ಬಾಗುಗಳು ಅಂತಹ ಕಾವ್ಯಗಳ ರಚನೆಗೆ ಕಾರಣವಾಗಿವೆ. ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಅವರು ಮಾನವ ಸಮುದಾಯದ ಉತ್ತಮಿಕೆಯನ್ನು ಕುರಿತು ಚಿಂತಿಸಿದವರು. ಹಾಗಾಗಿ ಸಮಾಜದ ಬಗೆಗಿನ ಅವರ ಕಳಕಳಿ ಅವರ ಕೃತಿಗಳನ್ನು ಓದಿದ, ಕೇಳಿದ, ಎಲ್ಲರಿಗೂ ಅಪ್ಯಾಯಮಾನವಾಗುತ್ತದೆ. ಹರಿದಾಸರು ಭಗವಂತನಲ್ಲಿ ತಮ್ಮ ಅಂತರಂಗವನ್ನು ತೋಡಿಕೊಂಡು ಪಶ್ಚಾತ್ತಾಪದ ಮೂಸೆಯಲ್ಲಿ ಬೆಂದು ಪರಿಶುದ್ಧರಾಗಿ ಆ ಮೂಲಕ ಲೋಕವನ್ನು ತಿದ್ದಲು ಅಧಿಕಾರ ಗಳಿಸುತ್ತಾರೆ."[೨]

ಈ ರೀತಿಯಲ್ಲಿ ಭಕ್ತರು ತಮ್ಮೊಳಗೆ ನಡೆಯುವ ಅಂತರಂಗಿಕವಾದ ಕಳಕಳಿಗಳು, ಕಳವಳಗಳು ಹೇಗಿದ್ದವು, ಎಂಬುದನ್ನು ತಿಳಿಯಲು ಆಯಾಯ ಸಂತರ ಕೃತಿಗಳ ಆತ್ಮ ನಿವೇದನೆಯ ಕೀರ್ತನೆಗಳ ಅಭ್ಯಾಸದಿಂದ ತಿಳಿಯಬಹುದು.

''ಪುರಂದರ ದಾಸರು ಹಿಂದೊಮ್ಮೆ ಅತ್ಯಂತ ಜಿಪುಣರಾಗಿದ್ದು, ಚಿನಿವಾರ ವೃತ್ತಿಯನ್ನು ಕೈಕೊಂಡಿದ್ದರು. ಒಮ್ಮಿಂದೊಮ್ಮೆಲೆ ಅವರಿಗೆ ಹರಿದಾಸರಾಗಲು ಪ್ರೇರಣೆ ದೊರೆತದ್ದು ಅವರ ಹೆಂಡತಿಯ ಔದಾರ್ಯದಿಂದ ಅವರ ಎಲ್ಲಾ ಆಸ್ತಿಪಾಸ್ತಿಗಳನ್ನು ಶ್ರೀಕೃಷ್ಣಾರ್ಪಣವೆಂದು ದೇವರಿಗೆ ಸಮರ್ಪಿಸಿದರೆಂದು ಅನಂತರ ಅವರು ಹರಿದಾಸರಾದರೆಂದು ವಿಜಯದಾಸರು ಅವರ ಕಾಲದಲ್ಲಿದ್ದ ಪ್ರಚಲಿತ ಸಂಗತಿಯ ಆಧರಿಸಿ ಹೇಳುತ್ತಾರೆ.''[೧೭]

ಪುರಂದರ ದಾಸರು ತಮ್ಮ ಅಂತರಂಗಿಕ ಭಾವನೆಗಳನ್ನು ಪರಮಾತ್ಮನ ಸೇವೆಗೆ ಮೀಸಲಿಟ್ಟು ಸಂಭ್ರಮಿಸುವುದು ಹೀಗೆ,

''ಮಧುರಕರ ವೃತ್ತಿ ಎನ್ನದು, ಅದು ಬಲು ಚೆನ್ನದು ||ಪ||
ಪದುಮನಾಭನ ಪಾದ ಪದುಮ ಮಧುಪವೆಂಬ ||ಅ.ಪ||
ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ
ಆಲಾಪಿಸುತ್ತಾ ಬಲು ಓಲಗ ಮಾಡುವಂಥ ||೧||
ರಂಗನ ಗುಣ ಹಿಂಗದೆ ಪಾಡುತ್ತ
ಶೃಂಗಾರ ನೋಡುತ್ತಾ ಕಂಗಳಾನಂದವೆಂಬ ||೨||
ಇಂದಿರಾಪತಿ ಪುರಂದರ ವಿಠಲನಲ್ಲಿ
ಚಂದದ ಭಕ್ತಿಯಿಂದಾನಂದವ ಪಡುವಂತೆ ||೩||

ಹರಿದಾಸ ಕೈಂಕರ್ಯದ ಬಗ್ಗೆ ಪುರಂದರದಾಸರಿಗಿರುವ ಸಂತೃಪ್ತಿಯನ್ನು ಈ ರಚನೆಯಲ್ಲಿ ಕಾಣಬಹುದು. ಪುರಂದರ ದಾಸರು ತಮ್ಮ ಜೀವನಾನುಭವದಲ್ಲಿ ಕಂಡುಕೊಂಡ ಹರಿಸರ್ವೋತ್ತಮತೆಯನ್ನು ಅತ್ಯಂತ ಭಕ್ತಿಯಿಂದ ಹೃದಯ ಸ್ಪರ್ಶಿಯಾಗಿ ವರ್ಣಿಸಿರುವುದು ಹೀಗೆ,

"ಕಂಡೆ ನಾ ಕನಸಿನಲಿ ಗೋವಿಂದನ, ಕಂಡೆ ನಾ ಕನಸಿನಲಿ ಕನಕರತ್ನದ ಖಣಿಯ" ಎಂದು ಹಾಡತೊಡಗಿ ಕಟ್ಟಕಡೆಗೆ ''ಶೃಂಗಾರ ಮೂರುತಿ ಪುರಂದರ ವಿಠ್ಠಲನ ಕಂಗಳಿಂದಲಿ ಕಂಡೆ ಹಿಂಗಿತು ಭವ ಭಯ" ಎಂದು ಹಿಗ್ಗುವರು"[೧೮]

ಹರಿದಾಸರೆಲ್ಲರೂ ಒಂದಿಲ್ಲೊಂದು ರೀತಿಯಲ್ಲಿ ಸಮರ್ಪಣಾಭಾವದಿಂದ ತಮ್ಮ ಇಷ್ಟದೈವದ ಮೊರೆ ಹೊಕ್ಕು ಹರಿಪಾರಮ್ಯತೆಯನ್ನು ಕಂಡುಕೊಂಡವರು. ಅಂತೆಯೇ, ಅಪ್ಪನವರು ಸಹ ತಮ್ಮ

ಕೀರ್ತನೆಗಳಲ್ಲಿ ಸಮರ್ಪಣ ಮನೋಭಾವವನ್ನು ವ್ಯಕ್ತಪಡಿಸುತ್ತಾರೆ. ತಮ್ಮ ಹಾಡುಗಳಲ್ಲಿ ಶ್ರೀಹರಿಯನ್ನು ಭಕ್ತಿಯಿಂದ ಕೊಂಡಾಡುವರು, ಅವರು ರಚಿಸುವ ಹಾಡುಗಳನ್ನು ತಮ್ಮ ಇಷ್ಟ ದೈವ ಮುದ್ಗಲವಾಸನಿಗೆ ಅರ್ಪಿಸುತ್ತಾ,

"ಮೊಥಳು ನಾನೊಂದು ಬೇಡಿ ಬಯಸಿಕೊಂಡೆ
ಮಾಡಿದೆ ರಚನಿ ಮನ ಉಬ್ಬಿ"

ಎಂದು ವಿನಯದಿಂದ ನುಡಿದಿರುವರು. ಕೊಂಗಬುದ್ಧಿಯನ್ನು ಅಷ್ಟಮದಗಳನ್ನು ತಂದೆ ರಾಮೇಶನ ಪಾದಕ್ಕೆ ಅರ್ಪಿಸಿ ಜ್ಞಾನ ಸೂರ್ಯನ ಪ್ರಶಸ್ತ ಉದಯ ಮಾಡಿಸಬೇಕೆಂದು ಕೇಳುವ ಪರಿ ಹೀಗಿದೆ.

"ಅಷ್ಟಮದವು ತಮವು ಎಂಬೊ
ಕುಟ್ಟಿ ಹಿಟ್ಟು ಮಾಡಿಸಿ
ಸಿಟ್ಟು ಕೋಪವೆಂಬೊ ಬಣವಿ
ಒಟ್ಟಿ ಕೆಂಡ ಹೇರಿಸಿ
ಸತ್ವ ರಜವು ತಮವು ಎಂಬೊ
ಕತ್ತಲೆಯ ಅಡಗಿಸಿ
ಮತ್ತೆ ಜ್ಞಾನ ಸೂರ್ಯನ ಪ್ರ
ಶಸ್ತ ಉದಯ ಮಾಡಿಸಿ...."[೯]

ಎಂದು ಹಾಡುವರು. ತಮ್ಮ ರಚನೆಗೆ ಶ್ರೀ ರಾಮೇಶನೇ ಕಾರಣನೆಂದೂ ಅವರಿಗೆ ಪ್ರೇರಣೆಯುಂಟು ಮಾಡಿದ ದೈವಕ್ಕೆ ಮನ ತುಂಬಿ ಮಣಿದಿದ್ದಾರೆ.

"ಮಾರಜನಕನ ಮಾರಿ ನೋಡುತ
ಸುಖವ ಸೂರೆಗೊಂಡರೆ
ನೀರೆ ದ್ವಾರಕಾಪುರದವರು"
ಈ ಭಾಗ್ಯ ನೋಡಿ ಒಯ್ಯಾರಿ
ನಮ್ಮ ಸೌಭಾಗ್ಯ ಶ್ರೀಕೃಷ್ಣ ಕೈ ಸೇರ ಶೌರಿ"

ಎಂದು ಅಪ್ಪನವರು ತಮ್ಮಲ್ಲಿಯೇ ಶ್ರೀಹರಿಯ ಸ್ತುತಿಸುತ, ಹರಿ ಧ್ಯಾನವನ್ನು ಅತ್ಯಂತ ಅರ್ಪಣಭಾವದಿಂದ ಒಪ್ಪಿಸುವರು. ಹೀಗೆನ್ನುವರು,

"ಮುರಲೀಧರ ಮೋಹನಾಂಗ
ಕಾಯೋ ಕೃಪಾಂಗ
ದೇವ ನರಸಿಂಹ ಹೇ ಭವಭಂಗ"

ಕಂಡು ಮನ ಹಿಗ್ಗೋದು
ರಂಗಯ್ಯನ ಕೊಂಡಾಡಿ
ಮನ ಉಬ್ಬೋದು"

ರಂಗಯ್ಯನನ್ನು ಹಾಡುತ್ತಾ, ಪಾಡುತ್ತಾ, ಮನದಾನಂದವನ್ನು ತಮ್ಮ ಅನುಭವದಲ್ಲಿ ಭಾವಿಸಿಕೊಂಡು ಭಕ್ತಿಯಿಂದ ತಣಿಯುವರು,

"ರಂಗನಂಗದ ಸಂಗ ಸುಖ ನೋಡ ಅಂಗನೆ
ಲಕುಮಿಯ ಸಂಗ ದುಲರ್ಭವೇ
ಈ ಅಂಗನೆಯರು ಮಾಡಿದ ಸುಕೃತವಂತೆ"

ಶ್ರೀಹರಿಯನ್ನು ಸ್ತುತಿಸುವ ಪ್ರತಿಯೊಬ್ಬರು ಭಕ್ತಿಯ ಪರವಶತೆಯಿಂದ ತನ್ಮಯರಾಗುವರು. ಅದರಂತೆಯೇ ಅವ್ವನವರು ಸಹ

"ಆವ ಸುಕೃತವು ಈ ನಾರಿಯರು ಈ ಪರಿ ಸುಖಿಸುವುದು"

ಕೃಷ್ಣನ ಸಹವಾಸದಿಂದ ಸುಖಿಸುವ ನಾರಿಸಮೂಹದ ಸುಕೃತವೆಂದೇ ಭಾವಿಸುವ ಅವ್ವ, ರಂಗನಂಘ್ರಿಗೆರುವ ದುಂಬಿಗಳಂತೆ ಎಂದು ವರ್ಣಿಸಿರುವರು.

"ದಯ ಮಾಡೊ ರಂಗ ದಯ ಮಾಡೊ,
ಕೈವಲ್ಯಪತಿ ನಮಗೆ ಕರುಣೆ ಮಾಡೊ ಕೃಷ್ಣ"
ಮಾತನ್ನಾಡೊ ಮನ್ನಾರಿ ಕೃಷ್ಣ ಮಾತನ್ನಾಡೊ
ಧಾತನ ಪಿತ ಸಂಪ್ರೀತಿಲಿ ಮುದ್ದು ಮಾತನ್ನಾಡೊ

ಎಂಬುದು ಮುನ್ನಾರಿ ಕೃಷ್ಣನನ್ನು ಸಂದರ್ಶಿಸುವುದೇ ಸುಖ, ಆತನ ದಯೆ, ಕರುಣೆಗಳು ಭಕ್ತರಿಗೆ ಲಭಿಸಿದಲ್ಲಿ ಮಾಧವನ ಮುದ್ದು ಮಾತುಗಳನ್ನು ಕೇಳೋ ತಾಯಿ ಬಯಕೆಯನ್ನಿಲ್ಲಿ ಕಾಣಬಹುದು.

"ಬಾಗುವ ತೆಂಗಿನ ಮರನೋಡ
ರಂಗನ ಅಂಘ್ರಿಗೆರಗುವಂತೆ ಸಖಿಯೆ||ಪ||
ಶೃಂಗಾರದ ವನ ನೋಡ ಪಂಚರಂಗದ ಗಿಳಿ ನೋಡ
ಮಂಗಳ ಸ್ವರ ನೋಡ ಕೋಕಿಲ ರಂಗನ ಪಾಡುತಲಿವೆ||೧||"

ಎಂದು ಅವರು ಕಾಣುವ ಪ್ರಕೃತಿಯೆಲ್ಲಾ ರಂಗನನ್ನು ಹಾಡಿ, ಹೊಗಳುತ್ತಲೂ, ಹರಿಗುಣ ಸಾರುತ್ತಾರೆ. ಹರಿಪಾದ ಪಲ್ಲವಕೆ ಎರಗುವ, ರಂಗನ ಪೂಜೆಗೆ ಒದಗುವಂತೆ, ಲೋಕ ನಾಯಕ ಹರಿಗೆ, ಚಿಮ್ಮುತ ಹಾರುವ ಪರಿಯಂತೆ, ರಾಮೇಶನನ್ನು ವಾಲ್ಯೆಸಿ ಕರೆಯುವಂತಿರುವುದನ್ನು ಕಾಣಬಹುದು. ಹರಿಗುಣಗಳ

ಸಾರುವ, ಹರಿಪಾದ ದರ್ಶಿಸುವ, ಹರಿನಾಮ ಕೀರ್ತಿಸುವ ಪುಣ್ಯವನ್ನು, ಸುಕೃತವನ್ನು ಅತ್ಯಂತ ಸಂತಸದಿಂದಲೂ ಬೀಗುವರು. ಹೀಗೆ,

"ಎಂಥ ದಯವ ಮಾಡಿ ಕಾಂತೆಯರು ಬಂದಾರೆ
ಎಂತು ನಮ್ಮ ಪುಣ್ಯ ಫಲಿಸಿತು
ಎಂತೆಮ್ಮ ಪುಣ್ಯ ಫಲಿಸಿತು
ಲಕ್ಷ್ಮಿಕಾಂತನೆ ಬಂದ ಮನೆತನಕ"

ಕೃಷ್ಣನ ಆಗಮನವನ್ನು ಕಂಡು ಹಸ್ತಿನಾಪುರದಲ್ಲಿ ಪಾಂಡವರೊಡನೆ, ಅಲ್ಲಿನ ಭಕ್ತಜನರೆಲ್ಲರೂ ಲಕ್ಷ್ಮೀಕಾಂತನೇ ಮನೆತನಕ ಬಂದುದು ತಮ್ಮ ಸುಕೃತವೆಂದು, ಬಂದೆರೆಗುವರು.

ಹೀಗೆ, ಸರ್ಮಪಣಾ ಮನೋಭಾವನೆಯು ಮುಂದುವರಿದು,

"ಧನ್ಯ ಧನ್ಯ ರಾಯ ಮಾನ್ಯ ಮಾನ್ಯವೀತ ಮುನ್ನಾರು ಸರಿಯಿಲ್ಲ
ಮುನ್ನೆಲ್ಲ ಕೆಲದಿ ಕೃಷ್ಣನ ಪ್ರಿಯ ||ಪ||
ಕಾಮ ಕ್ರೋಧಗಳೆಲ್ಲ ಸೀಮೆಯ ದಾಟಿಸಿ
ಭೂಮಿಯನಾಳುವನೆ ಪ್ರೇಮದಿ ರಾಯ ||೧||
ಚೆಲ್ವನರಾಜ್ಯದಿ ಇಲಿಗೆ ಬೆಕ್ಕಿಗೆ ಹಿತ
ಹುಲಿಗೆ ಮೊಲಕೆ ಹಿತ ಬಲು ಕೌತುಕವ ||೨||
ಅಪ್ಪನ ರಾಜ್ಯದಿ ಸರ್ಪಕಪ್ಪೆಗೆ ಹಿತ
ತಪ್ಪು ಗುಣಗಳೆಲ್ಲ ಒಪ್ಪರು ಕೆಲದಿ ||೩||
ಮಾನ್ಯನ ರಾಜ್ಯದಿ ಆನೆ ಸಿಂಹಕೆ ಹಿತ
ಏನೆಂಬ ಸವತಿಯರ ಹೀನತೆ ಇಲ್ಲ ||೪||
ಮುನ್ನ ಕಲಿಯ ಕಟ್ಟಿ ಚನ್ನರಾಮೇಶನ
ಅನಂತ ದಯ ಪಡೆದ ಉನ್ನತಿ ನೋಡ"||೫||

ರಾಮೇಶನ ದಯ ಪಡೆದ ಸಕಲ ಜೀವರಾಶಿಯೂ ಒಂದಕ್ಕೊಂದು ಹಿತವಾಗಿರುವುವು. ಬೆಕ್ಕು, ಇಲಿ ಮತ್ತು ಸರ್ಪ, ಕಪ್ಪೆ, ಆನೆ, ಸಿಂಹ ಮುಂತಾದವುಗಳು ಸ್ವಭಾವಗಳಲ್ಲಿಯೇ ಭಿನ್ನವಾದವಾಗಿದ್ದು, ಪರಸ್ಪರ ಅನ್ಯೋನ್ಯತೆಯನ್ನು ಮೆರೆಯುತ್ತಿರುವುದು ರಾಮೇಶನ ದಯೆಯನ್ನು ಪಡೆದಾಗಲಷ್ಟೇ, ಆದ್ದರಿಂದ ಅಪ್ಪನರು 'ಧನ್ಯ ಧನ್ಯ ರಾಯ ಮಾನ್ಯ ಮಾನ್ಯವೀತ ಮುನ್ನಾರು ಸರಿಯಿಲ್ಲ' ರಾಮೇಶನ ದಯೆಗೆ ಮತ್ತಿನ್ನಾರು ಸರಿಸಾಟಿಯಾಗಲಾರರು. ಹೀಗೆ ರಾಮೇಶನಿಂದ ದಯೆಯನ್ನು ಪಡೆದು ಅನಂತವಾದ ಉನ್ನತಿಯನ್ನು ಪಡೆಯಬಹುದು ಎಂದಿದ್ದಾರೆ.

## ನೀತಿಬೋಧೆ

'' 'ನೀತಿಬೋಧೆ' ಎಂಬುದು ಎಲ್ಲ ಧರ್ಮಶಾಸ್ತ್ರಗಳಲ್ಲೂ ಉಲ್ಲೇಖವಾಗಿರುವುದು. 'ನೀತಿ' ಎಂಬುದು ಸಮಗ್ರ ಸಮಾಜದ ಒಳಿತಿಗಾಗಿ ಮಾನವರು ರೂಢಿಸಿಕೊಂಡಿರುವ ಕಟ್ಟಳೆಗಳು ''ಸಾಮಾನ್ಯ ಅರ್ಥದಲ್ಲಿ ನೀತಿಯ ಅರ್ಥ - ಒಳ್ಳೆಯ ಬಗೆ, ಒಳ್ಳೆಯ ಅಚರಣೆ, ನಡವಳಿಕೆ, ನ್ಯಾಯ, ಮಾರ್ಗದರ್ಶನ, ಜಾಣ್ಮೆ ಒಯ್ಯುವಿಕೆ, ತತ್ತ್ವಜ್ಞಾನ, ಧರ್ಮಶಾಸ್ತ್ರ, ರಾಜಕಾರಣ, ಆಡಳಿತ ಧೋರಣೆ''[೨೦] 'ನೀತಿ' ಎಂಬುದು ಸಾಮಾಜಿಕ ಮೌಲ್ಯವಾಗಿದ್ದು, ಪೌರಾಣಿಕ ಹಿನ್ನಲೆಯಿಂದ ಹೆಚ್ಚು ಆಚರಣೆಯಲ್ಲಿದ್ದಿತು. ಬಹುತೇಕ ಎಲ್ಲ ಕೃತಿ, ಕಾವ್ಯಗಳು ನೀತಿಯ ಆಶಯವನ್ನೇ ಒಳಗೊಂಡಿರುತ್ತಿರುವುದನ್ನು ಕಾಣುತ್ತೇವೆ. ಹರಿದಾಸ ಸಾಹಿತ್ಯದಲ್ಲಿಯೂ ಹರಿದಾಸರೆಲ್ಲರೂ ಹರಿಭಕ್ತಿಯನ್ನು ಸಾಧಿಸುವತ್ತ ತಮ್ಮ ಶ್ರದ್ಧೆ ಭಕ್ತಿಗಳನ್ನು ರೂಢಿಸಿಕೊಳ್ಳಲು ನೀತಿಯನ್ನು ಬೆಂಬಲಿಸುತ್ತಾರೆ. ಹರಿಭಕ್ತಿಯಲ್ಲಿ ಜನರು ಪರಸ್ಪರ ಮಾನವ ಸಂಬಂಧಗಳ ಕುರಿತು ಹೊಂದಿದ್ದ ಮನೋಭಾವನೆಗಳು ತಾರುಮೇರಾದಾಗ ಹರಿದಾಸರು ತಮ್ಮ ಹಾಡುಗಳಲ್ಲಿ ಕಠಿಣ ವ್ಯಂಗ್ಯೋಕ್ತಿಗಳಿಂದ ಕುಟುಕಿದ್ದಾರೆ.

ಇದಕ್ಕೆ ಗಲಗಲಿ ಅವ್ವನವರು ಹೊರತಾಗಿಲ್ಲ. ಅವರು ವಿಶೇಷವಾಗಿ ತಮ್ಮ ಕೀರ್ತನೆಗಳನ್ನು ನಿಂದಾಸ್ತುತಿ ತಂತ್ರದಿಂದ ರಚಿಸಿದ್ದಾರೆ. ಇದರಲ್ಲಿ ಅವ್ವ, ಬಹಳ ಸೂಕ್ಷ್ಮವಾಗಿ ಸಮಾಜವನ್ನು ನಿರೀಕ್ಷಿಸಿರುವಳು. ಹಾಗೆಯೇ ಎಲ್ಲಿಯೂ ಸಂಪ್ರದಾಯ, ಆಚರಣೆಗಳ ವಿರೋಧಿಯಾಗದೆ, ಧಾರ್ಮಿಕ ಆಚರಣೆಗಳಲ್ಲಿಯೇ ನಡೆಯುತ್ತಿರುವ ಅನೇಕ ಸಂಗತಿಗಳತ್ತ ದೃಷ್ಟಿ ಹಾಯಿಸುತ್ತಾಳೆ.

ಅಂದಿನ ಸಾಮಾಜಿಕರಲ್ಲಿ ನಡೆಯುತ್ತಿದ್ದ ದಾಯಾದಿ ಮತ್ಸರ, ಸವತಿ ಮತ್ಸರ, ಸರಸ-ವಿರಸಗಳನ್ನು ವಿವರಿಸುವಳು. ಜನಸಾಮಾನ್ಯರಲ್ಲಿ ಹೆಚ್ಚುತ್ತಿದ್ದ ದುಂದುಗಾರಿಕೆ, ಅದರಿಂದ ಉಂಟಾಗುವ ವಿಷಯ ಲೋಲುಪತೆ ಬದುಕು ಅಸಹನೀಯವಾಗುವುದನ್ನು ತಮ್ಮ ಕೀರ್ತನೆಗಳಲ್ಲಿ ಬಹಳ ಸ್ಪಷ್ಟವಾಗಿ ತಿಳಿಸಿದ್ದಾಳೆ. ತನ್ನ ಧಾರ್ಮಿಕ ಆಚರಣೆಗಳೊಂದಿಗೇ ಇಂತಹ ಕೀರ್ತನೆಗಳನ್ನು ರಚಿಸಿದ್ದಾಳೆ. ದ್ವೈತ ಸಿದ್ಧಾಂತವನ್ನು ಪ್ರತಿಪಾದಿಸುವ ಅವ್ವನವರು ಅದ್ವೈತವಾದಿಯ ಬುದ್ಧಿ ಕೌಶಲ್ಯವನ್ನು ಹಲವಾರು ಉದಾಹರಣೆಗಳಲ್ಲಿ ಜರೆದಿದ್ದಾರೆ. ಅವರು ಹೇಳುವಂತೆ,

''ಈಚಲ ಗಿಡದಲಿ ಗೋಕ್ಷೀರ ಕರೆದಂತೆ
ನೀಚರ ಸಂಗ ಸುಜನರು ರನ್ನದ
ನೀಚರ ಸಂಗ ಮಾಡಲು ಆಚೆಲಿದ್ದವರಿಗೆ
ಅನುಮಾನ ರನ್ನದ ಕೋಲ
ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ
ಕ್ಷುಲ್ಲಕುಮತರ ಸಹವಾಸ

.............ವೆಂಬೋದು

ನೀರುಳ್ಳಿ ತಿಂದ ಪರಿಯಂತೆ ರನ್ನದಕೋಲ

ಭಾವಜ್ವರ ಸಂಗ ಶಾವಿಗೆ ಉಂಡಂತೆ

ಭಾವನರಿಯದ ಪಾಮರರ

ಭಾವನರಿಯದ ಪಾಮರರ ಸಹವಾಸ

ಬೇವಿನ ಹಾಲು ಕುಡಿದಂತೆ ರನ್ನದ ಕೋಲ

ಇಲ್ಲಿ ವರ್ಣಿಸಿರುವ ಈ ಸಾದೃಶ್ಯಗಳು ನೀತಿ ಬೋಧೆಯಾಗಿವೆ. ಅವರು ರಚನೆ ಮಾಡಿರುವ ಹಾಡುಗಳಲ್ಲಿ, ದ್ವೈತ ತತ್ವವನ್ನು ಬಲವಾಗಿ ಪ್ರತಿಪಾದಿಸುವರು. ಅದಕ್ಕೆ ಅದ್ವೈತ ವಾದಿಗಳನ್ನು ಕುರಿತು ಹೀಗೆ ವ್ಯಂಗವಾಡಿದ್ದಾರೆ.

‘‘ಕೇಳೆಲೊವಾದಿ ಕೇಳೊಲೊವಾದಿ

ಕೇಳದಿದ್ದರೆ ತಮಸಿಗೆ ಹೋದಿ ||ಪ||

ಅತ್ತೆ ಸೊಸೆ ಒಂದೆ ಮಕ್ಕಳು ಮರಿಯೊಂದೆ

ಹೆತ್ತಮ್ಮನೊಂದೆ ಮಡದಿಯೊಂದೆ

ಹೆತ್ತಮ್ಮ ಒಂದೆ ಮಡದಿಯೊಂದೆಯಾದರೆ

ವಿತ್ತವೆಚ್ಚಾಗಿ ಮದುವೆಯಾಕೆ ||೧||

ಅಕ್ಕ ತಂಗಿಯೊಂದೆ ಮಕ್ಕಳು ಸೊಸೆಯೊಂದೆ

ಚಿಕ್ಕಮ್ಮನೊಂದೆ ಮಡದಿಯೊಂದೆ

............ಯಾದರೆ

ವಿತ್ತ ವೆಚ್ಚಾಗಿ ಮದುವೆಯಾಕೆ ||೨||

ಇಲ್ಲಿ, ಅವ್ವನವರು ಸಾಮಾಜಿಕ ಸಂಗತಿಗಳಲ್ಲಿ ಕಾಣುವ ಮಾನವ ಸಂಬಂಧವನ್ನು ತಪ್ಪಾಗಿ ಅರ್ಥೈಸಬಾರದು. ಹಾಗೇನಾದರೂ ಆದರೆ ನಾವು ನಡೆಸುವ ಪ್ರತಿಯೊಂದು ಕಾರ್ಯಗಳಲ್ಲೂ ಪ್ರಯೋಜನ ಕ್ಕಿಂತಲೂ ಸಾಮಾಜಿಕ ಅನಾಹುತಗಳೇ ಹೆಚ್ಚು ಎಂದಿರುವರು. ಹಾಗೆಯೇ, ‘ಅದ್ವೈತ’ ತತ್ತ್ವವನ್ನು ಅವ್ವ ಸರಳೀಕರಿಸಿ ಹೇಳಿರುವುದು ಇಲ್ಲಿ ಕಂಡುಬರುತ್ತದೆ.

‘‘ಪುರಂದರದಾಸರು ದ್ವೈತ ಸಿದ್ಧಾಂತದಲ್ಲಿ ಪ್ರತಿಪಾದಿತರಾಗಿರುವ ಪರಮಾತ್ಮ ಮತ್ತು ಜೀವಾತ್ಮಗಳ ಈಶ-ದಾಸ್ಯಭಾವವನ್ನು ನಿದರ್ಶನ ಪೂರ್ವಕವಾಗಿ ಒಂದು ಸಣ್ಣ ಕೀರ್ತನೆಯಲ್ಲಿ ಉದಾಹರಿಸಿರುವುದು ಹೀಗೆ,

ಎರಡೂ ಒಂದಾಗದು, ರಂಗ

ಎರಡು ಒಂದಾಗದು ಎಂದೆಂದಿಗೋ ರಂಗ

ಒಂದು ವೃಕ್ಷದಲ್ಲಿ ಎರಡು ಪಕ್ಷಿಗಳೇ
ಒಂದೇ ಗೂಡಿನಲ್ಲಿ ಇರುತಿಹವು
ಒಂದು ಪಕ್ಷಿ ಫಲಗಳನುಂಬುದು ರಂಗ
ಒಂದು ಪಕ್ಷಿ ಫಲಗಳನುಣ್ಣದು ರಂಗ"

ಇಲ್ಲಿ ಹೇಳಲಾಗಿರುವಂತೆ ಒಂದು ಪರಮಾತ್ಮ, ಇನ್ನೊಂದು ಜೀವಾತ್ಮ. ಪರಮಾತ್ಮನಾದರೋ ಸಾಕ್ಷಿಭೂತನಾಗಿರುವನೇ ಹೊರತು ಲೋಕಾಸಕ್ತನಲ್ಲ. ಜೀವಾತ್ಮವಾದರೋ ತನಗೆ ಬೇಕಾದುದನ್ನು ಸವಿದು, ಕಡೆಗೆ ಜ್ಞಾನೋದಯವಾಗಲು ದೇವರ ಸಾನಿಧ್ಯ ಸೇರುವುದು."[೨೦]

ಅವ್ವನವರು ತಮ್ಮ ಕೀರ್ತನೆಗಳಲ್ಲಿ ಇದನ್ನು ಸಾಧಿಸಿದ್ದಾರೆ. ಅದ್ವೈತ ತತ್ವವನ್ನು ಅಲ್ಲಗಳೆದು, ದ್ವೈತ ಸಿದ್ಧಾಂತವನ್ನು ಅತ್ಯಂತ ಶ್ರದ್ಧೆಯಿಂದ ಬೆಂಬಲಿಸಿರುವರು. ಅದನ್ನು ಅವ್ವನವರು ಹಾಡುವುದು,

"ಅದ್ವೈತವಾದಿ ನಿನ್ನ ಬುದ್ಧಿ ಕೌಶಲ್ಯ
ನೋಡಿ ವಿದ್ವಾಂಸರೆಲ್ಲ ನಗತಾರೆ"

ಎಂಬುದು ಅವ್ವ ದ್ವೈತಸಿದ್ಧಾಂತದ ಪರವಾಗಿರುವುದನ್ನು ಸೂಚಿಸುತ್ತದೆ. ಪೌರಾಣಿಕ ಸಂಗತಿಗಳಲ್ಲಿ ವಿವರಿಸುವ ಪಾತ್ರಗಳಲ್ಲಿಯೂ ನೀತಿಬೋಧೆಯನ್ನು ವಿವರಿಸುವರು. ಕೃಷ್ಣನೊಡನೆ ಬಾಳುವೆ ಮಾಡುವ ರುಕ್ಮಿಣಿ, ಭಾಮೆಯರಲ್ಲಿ ಉಂಟಾದ ವೈಮನಸ್ಸು, ವಿರಸಗಳನ್ನೇ ಅತ್ಯಂತ ಚುರುಕಾದ ಲಯದೊಡನೆ ರಚಿಸಿರುವರು. ಸವತಿಯರಿಬ್ಬರೂ ನಾ ಮುಂದು, ತಾ ಮುಂದು ಎಂದು ಕೃಷ್ಣನ ಸೇವೆಗೆ ಹಾತೊರೆಯುವಾಗ ಪರಸ್ಪರ ದೂಷಿಸುವುದು. ಕಡೆಯಲ್ಲಿ ಅವ್ವನವರು ಸಮಧಾನಿಸುವುದು.

"ಸಿರಿರಮಿ ಅರಸಗೆ ಸರಿಯಿಬ್ಬರು ನೀವವ್ವ
ನೀವು ಸರಿಯಿಬ್ಬರವ್ವ
ಬರಿಯೆ ಕರಕರೆಯ
ಹಿರಿಯರಲ್ಲವ್ವ"

ಎಂದು ಸಿರಿರಮಿ ಅರಸನನ್ನು ಸೇರಿದ ಬಳಿ ಹಿರಿತನವನ್ನು ಕಾಪಾಡಿಕೊಳ್ಳಬೇಕವ್ವ ಎಂದಿರುವರು. ರುಕ್ಮಿಣಿ, ಸತ್ಯಭಾಮೆಯರು ಕೃಷ್ಣನ ಮಡದಿಯರೆಂದು ಅಹಂಕಾರ ಪಡುವಾಗ, 'ಧಿಟ್ಟೆಯರಿಬ್ಬರು ಕೋಪ ಬಿಟ್ಟರೆ ಇವರಿಗೆ ಎಷ್ಟು ಒಲುಮೆ ನೋಡಮ್ಮಯ್ಯ', ಅಹಂಕಾರದಿಂದ ಕೃಷ್ಣ ಪ್ರೀತಿಗೆ ದೂರವಾಗದೆ, ಹತ್ತಿರಿದ್ದು ಕೃಷ್ಣಭಕ್ತಿಗೆ ತಕ್ಕಂತೆ ಎಲ್ಲರೊಳಗಿರುವ ಹರಿಯನ್ನು ಕಾಣಿರೆಂದು ಅವ್ವನವರು ಸೂಚಿಸುತ್ತಾರೆ.

ರುಕ್ಮಿಣಿ ಸತ್ಯಭಾಮೆಯರ ಸವತಿ ಮತ್ಸರವು ತಾರಕಕ್ಕೇರಿ ಅವರಿಬ್ಬರೂ ಪರಸ್ಪರ 'ಕೃಷ್ಣ' ತಮ್ಮವನೆಂದು ಅವನನ್ನು ಬಿಟ್ಟು ಕ್ಷಣವೂ ಇರಲಾರೆವೆಂಬುದನ್ನು ಸಾಧಿಸುತ್ತಿದ್ದಾಗ, ಅವ್ವ, ಹೊರಗಿನ ಜನರೆದುರು ನಿಮ್ಮ ಹಠಮಾರಿತನದಿಂದ ನಗೆ ಪಾಟಲೀಗೀಡಾಗಿರುವರೆಂದು ಎಚ್ಚರಿಸಿದ್ದಾರೆ. ಹೊರಗೆ ನಿಂತು ಅತ್ತಿಗೆಯರು

ಸ್ವಾಗತಿಸುವರೆಂದು ಕಾಯುತ್ತಿರುವ ನಾದಿನಿಯರಾದ ಸುಭದ್ರೆ, ದ್ರೌಪದಿಯರು ನಿಮ್ಮ ಸಂಕುಚಿತಬುದ್ಧಿ ತಿಳಿದು ಅಪಹಾಸ್ಯ ಮಾಡಿಯಾರು. ಬೇಗ ಬಂದು ಮುಯ್ಯ ತಂದ ಸುಭದ್ರೆ, ದ್ರೌಪದಿಯರನ್ನು ಸ್ವಾಗತಿಸಿರಿ ಇಲ್ಲದಿದ್ದರೆ ಅವರಿಗೆ ಹೆದರಿಕೊಂಡು ಮುಖ ತೋರಿಸಲಾಗದೆ ಒಳಗೆ ಸೇರಿರುವಿರಿ ಎಂದು ಅಪಹಾಸ್ಯ ಮಾಡುವರು.

ಪಂಚ ಮಹಾ ಪತಿವ್ರತೆಯರಲ್ಲಿ 'ದ್ರೌಪದಿ'ಯು ಒಬ್ಬಳು. ದ್ರೌಪದಿಯನ್ನು ಅವ್ವ, ಬಳಸಿಕೊಂಡು ನೀತಿಯುತ ಬಾಳುವೆಯನ್ನು ಅಚ್ಚರಿಯಿಂದ ನೋಡಿದ್ದಾರೆ. ಪಂಚ ಪತಿಯರನ್ನು ಹೊಂದಿದ ದ್ರೌಪದಿಯು 'ಮುಯ್ಯ ತಂದು ಬಹಳ ಹೊತ್ತು ಬಾಗಿಲಲ್ಲಿ ಕಾಯಿಸುವ' ಅತ್ತಿಗೆಯರನ್ನು ಜರೆಯುತ್ತಾಳೆ. ಅತ್ತಿಗೆಯರಾದ ರುಕ್ಮಿಣಿ, ಸತ್ಯಭಾಮೆಯರ ಮಾತುಗಳಲ್ಲಿ ವ್ಯಕ್ತವಾಗುವುದು. ದ್ರೌಪದಿಯ ನಡೆವಳಿಕೆಯನ್ನು ಜರೆದಿರುವರು,

''ಭಯವುಳ್ಳ ಬಾಲೇ ನೀ ಐವರಿಗೆ ಇಂತಿಪ್ಪೆ
ಸೈವಲ್ಲದ ಮಾತು ಜಗಕಿದು
ಸೈವಲ್ಲದ ಮಾತು ಜಗಕಿದು ಈ ನಡತೆ
ನಯವಲ್ಲವೆಂದು ನಗುತಾರೆ
ಲೋಕದೊಳೊಬ್ಬಳಿಗೆ ಏಕ ಪತಿಯುಂಟು
ಏಕಕಾಲದೆ ಐವರ
ಏಕಕಾಲದಲೆ ಐವರನ ಕೂಡೋದು
ನಾ ಕಾಣೆನಲ್ಲೊ ಕೌತುಕವ''

ಕೌತುಕ ತುಂಬಿದ ಮಾತುಗಳಿಂದ ದ್ರೌಪದಿಯ ಬದುಕನ್ನು ವೀಕ್ಷಿಸುವರು ಅತ್ತಿಗೆಯರಾದ ರುಕ್ಮಿಣಿ, ಸತ್ಯಭಾಮೆಯರಿಬ್ಬರೂ ದ್ರೌಪದಿಯನ್ನು ಹಂಗಿಸುವ ಮೂಲಕ ಬಹುಪತಿಯರನ್ನು ಹೊಂದಿದವರ ಬಾಳುವೆಯು ಅನುಕರಣ ಯೋಗ್ಯವಲ್ಲವೆಂದು ಸೂಚಿಸಿರುವರು. ಅಷ್ಟಲ್ಲದೆಯೇ ಅವ್ವನವರು ಅಂದಿನ ಸಮಾಜವು ಬಾಹ್ಯ ಭಕ್ತಿಗೆ ನೀಡುವ ಪ್ರಾಮುಖ್ಯತೆಯನ್ನು ತಿಳಿದು 'ಸರಿಯೆ' ನೀವು ನಡೆಯುವುದು ನೀತಿಯುತವೆ? ಎಂದು ಪ್ರಶ್ನಿಸುತ್ತಾರೆ. ಪ್ರಶ್ನೆಗಳಲ್ಲಿಯೇ ಹಂಗಿಸುವ ರೀತಿಯೂ ಚಮತ್ಕಾರವಾಗಿದೆ.

''ಸೈಯೆ ಸೈಯೆ ಸೈಯೆ ಸೈಯೆ ರುಕ್ಮಿಣಿ
ಕೈ ಹೊಯಿದು ಇದಕೆ ನಗವರೊ
ಸೈಯೆ ಸೈಯೆ ಸತ್ಯಭಾಮೆ ಧನ್ಯ ನೀತಿ ನೀತಿ ಸೈಯೆ
ಎಷ್ಟು ಉಪವಾಸ ಮಾಡಿ ಇಷ್ಟು ಸಿದ್ಧಿ ಪಡೆದೆ
ಕಷ್ಟಬಟ್ಟಿದ್ದೆ ಬಹುಕಾಲ
ಕಷ್ಟಬಟ್ಟಿದ್ದೆ ಬಹುಕಾಲ ಭೀಷ್ಮನ ಹೊಟ್ಟೆಯ
ಪುಣ್ಯ ಒದಗಿತು ಸೈಯೆ ಸೈಯೆ

ಬಾಹ್ಯ ಆಚರಣೆಗಳಿಂದ ಬಸವಳಿದ ಭಕ್ತವರ್ಗಕ್ಕೆ ಅವ್ವನವರು ಪ್ರಶ್ನಿಸುವುದು ನಗೆಪಾಟಲಾಗುವುದನ್ನು ಸೂಚಿಸುತ್ತದೆ. ಸಭೆಯೊಳಗೆ ಅತಿಯಾಗಿ ಮಾತನಾಡುವ ಅತ್ತಿಗೆಯರ ಮಾತಿನಿಂದ ಸುಭದ್ರೆಯು ಕುಂದಿದ ಮುಖದವಳಾದಾಗ, ಶ್ರೀಹರಿ ಬಂದು ತಂಗಿಯತ್ತ ವಿಚಾರಿಸುವನು, ತವರಿಗೆ ಬಂದ 'ಮಾನುಳ್ಳ ಮಗಳಿಗೆ ನಾನಾ ಮಾತುಗಳಂದಿ ಏನೆಂಬೋರಿದಕೆ ಜನರೆಲ್ಲ, ಸತ್ಯಭಾಮೆ ಮಾನಾಪಮಾನ ನಿನಗಿಲ್ಲ' ಎಂದು ಜರೆಯುವನು. ಅತ್ತಿಗೆಯರನ್ನು ಕಡೆಯಲ್ಲಿ ಸುಭದ್ರೆಯು 'ಅತ್ತಿಗೆ ನೀನಮ್ಮ ಹೆತ್ತ ತಾಯಿ ಸರಿಯಮ್ಮ', 'ವಿಗಡ ಬುದ್ಧಿಯಿಂದ ನುಡಿದೆವ ಅತ್ತಿಗೆ' ಎಂದು ನಡೆದ ವಾಗ್ವಾದಗಳೆಲ್ಲವೂ ಪಂಥಕ್ಕಾಗಿಯಷ್ಟೇ ಎಂದು ತಮ್ಮ ಹೆಚ್ಚುಗಾರಿಕೆಯನ್ನು ಮರೆತು ಅತ್ತಿಗೆಯರಲ್ಲಿ ತಾಯಿಯನ್ನು ಕಾಣಬೇಕೆಂಬ ನೀತಿಯನ್ನು ಹೇಳಿರುವಳು.

''ಕಾತಿಲೆ ಐವರ ನೀತಿ ನೋಡಲು
ಪ್ರೀತನಾಗುವೆನೆಂದನು
ಭೂತಳದಿ ಕುಂತಿ ಜಾತರನ ನೋಡೋ ಆತುರದಿ
ಒಂದೂ ಮಾತು ಸೊಗಸದು
ಎನ್ನ ಭಕ್ತರಿಗಿನ್ನು ಸರಿಗಾಣೆ
ಧನ್ಯ ಧನ್ಯರೆಂದನು
ಚನ್ನ ಪಾಂಡವರನ್ನು ನೋಡದೆ
ಅನ್ನ ಸೊಗಸದು ಮುನ್ನೆ ಮಾನಿನಿ''

ಭಕ್ತರು ಭಗವಂತನನ್ನು ಕಾಣಲು, ಆಚರಿಸುವ ರೀತಿಯೇ ನೀತಿಯಾಗಿರುವುದು. ಅದರಂತೆಯೇ ಈ ಭಗವಂತನು ಭಕ್ತರನ್ನು ಕಾಣುವ ತವಕದಿ 'ಅನ್ನ ಸೊಗಸದು' ಎಂಬ ಪ್ರೀತಿಯ ನೀತಿಯನ್ನು ತಿಳಿಯುವಂತೆ ಪರಮಾತ್ಮನನ್ನು ಸ್ಮರಿಸಿರುವರು.

**ಆತ್ಮವಿಮರ್ಶೆ :** ಹರಿದಾಸರು ಭಗವಂತನನ್ನು ಆರಾಧಿಸುವಲ್ಲಿ ತಮ್ಮನ್ನೇ ವಿಮರ್ಶಿಸಿಕೊಳ್ಳುವರು. ಮಾನವರು ಅಜ್ಞಾನ, ಅಹಂಕಾರಗಳಿಂದ ಹರಿಭಕ್ತಿಯನ್ನು ಮರೆತರೆ ಒದಗುವ ಸ್ಥಿತಿಯನ್ನು ಹೇಳಿದ್ದಾರೆ. ಆತ್ಮ ಪರಮಾತ್ಮನಲ್ಲಿ ಸೇರಿಕೊಳ್ಳುವ ತವಕದಿ ನಡೆಸುವ ಅನೇಕ ರೀತಿಗಳನ್ನು ಉದಾಹರಣೆಗಳಲ್ಲಿ ವಿವರಿಸಿರುತ್ತಾರೆ.

''ಶ್ರೀ ಪಾದರಾಜಾದಿ ಹರಿದಾಸರು ಸಂಗೀತ ಹಾಡುತ್ತಲೋ ರಚಿಸುತ್ತಲೋ ಮೈಮರೆಯಬಹುದು. ಹರಿಪರವಾದ ಕೀರ್ತನೆಗಳನ್ನು ರಚಿಸಿ ಹಾಡುತ್ತಾ ತಮ್ಮ ಜೀವಿತಾವಧಿಯಲ್ಲಿ ಅನೇಕ ವಿಚಾರಗಳನ್ನು ಜನರಿಗೆ ತಿಳಿಸುತ್ತಾ, ಸಾಧನೆಯನ್ನು ಮಾಡಿದ್ದಾರೆ. ಅವರ ಭಕ್ತಿ, ನಿಷ್ಠೆ, ತತ್ವ ವಿಚಾರಗಳನ್ನು ಸರಳವಾಗಿ ಹೇಳುವ ರೀತಿಯಾಗಿದೆ. ಉಪದೇಶಿಸುವಾಗಿನ, ಅವರು ಭಾವದ ಒತ್ತಡಗಳಿಂದ ಬಳಸುವ ಭಾಷೆಯು ಬಳಕೆಯು ಕೀರ್ತನೆಗಳಿಗೆ ಕಾವ್ಯದ ರೂಪ ತಂದಿದೆ. ಎಲ್ಲಕ್ಕಿಂತ ಹೆಚ್ಚಾಗಿ ಮಾನವ ಸಮುದಾಯದ

ಉತ್ತಮಿಕೆಗಾಗಿ ಚಿಂತಿಸುತ್ತಾ, ಸಮಾಜದ ಬಗೆಗಿನ ಅವರ ಕಳಕಳಿಯನ್ನು ವ್ಯಕ್ತಪಡಿಸುತ್ತಾರೆ. ಸಂತರೆಲ್ಲರೂ ಮೊದಲು ತಮ್ಮ ಅಂತರಂಗವನ್ನು ತೋಡಿಕೊಂಡು ಪಶ್ಚಾತ್ತಾಪದ ಮೂಸೆಯಲ್ಲಿ ಬೆಂದು ಪರಿಶುದ್ಧರಾಗಿ ಆ ಮೂಲಕ ಲೋಕೋದ್ಧಾರದತ್ತ ಕಾವ್ಯವನ್ನು ರಚಿಸಿರುವರು."೨೨

ಹರಿದಾಸರೆಲ್ಲರೂ ಭಕ್ತಿಯ ತಿಳುವಳಿಕೆಯಿಂದಲೂ, ಹರಿಭಕ್ತರಾಗುವಲ್ಲಿ ತಮನ್ನೇ ಮರೆಯುವ ಉತ್ಕಟತೆಯಿಂದ, ಮರೆತು ನಡೆಸುವ ಅನೇಕ ರೀತಿಯ ನಡವಳಿಕೆಗಳಲ್ಲಿ ಭಕ್ತಿಯ ಪರವಶತೆಯನ್ನು ಕಾಣಬಹುದಾಗಿದೆ. ಅವ್ವನವರು ತಮ್ಮ ಕೀರ್ತನೆಗಳಲ್ಲಿ ಈ ಬಗೆಯನ್ನು ಕಾಣುವುದು ಹೀಗೆ,

"ನಗುವರಲ್ಲವೊ ರಂಗ ನಾಚಿಕೆ ಇಲ್ಲವೊ
ನಿನಗೆ ಹಗೆಯ ಮಾಡಿದವಳ ಬಗೆಯ ಕಾಣೆರಂಗ ||ಪ||
ಅನ್ಯಾಯ ನ್ಯಾಯವೆಂಬುದಿನ್ನು ನೀ ಅರಿಯಲೊ
ಮನ್ನೆಯಳ ವೀಳ್ಯ ಹಿಡಿದೆಯಲ್ಲೊ
ನೀ ಹಿಡಿದೆಯಲ್ಲೊ ರಂಗ ||೧||
ಭರದಿ ಕೋಪಿಸಿ ಭೀಷ್ಮೆ ತಿಳುವಳಿಕೆ ನಿನಗಿಲ್ಲ
ಹರದೆಯರಿಬ್ಬರು ಎನಗೆ ಸರಿಯರಲ್ಲ
ಎನಗೆ ಸರಿಯರಲ್ಲ ಭೀಷ್ಮೆ ದೂರುವರೇನೆ ||೨||
ಹೀಂಗೆ ಯಾರೂ ನಗರೇನ ಭೀಷ್ಮೆ
ಇರುವೆಗಿಂತ ಕಡಿ ಮಾಡಿದೆಲ್ಲ
ಎನ್ನ ಕಡಿ ಮಾಡಿದೆಲ್ಲ ||೩||
ಅತಿ ಕೋಪದಿಂದ ಭೀಷ್ಮೆ ಸ್ಮೃತಿಯಿಲ್ಲ ನಿನಗಿನ್ನು
ಸತಿಯರಿಬ್ಬರು ಎನಗೆ ಸರಿಯರಲ್ಲ
ಎನಗೆ ಸಮರಲ್ಲ ||೪||
ಅಕ್ಕ ತಂಗಿಯರೆಂಬೊ ದಿಕ್ಕಿನ ಮೂತಿಗೆ
ಬೆಕ್ಕಿನಕ್ಕಿಂತ ಕಡಿ ಮಾಡಿದೆಲ್ಲೊ
ಎನ್ನ ಮಾಡಿದೆಲ್ಲೊ ರಂಗ" ||೫||

ಆತ್ಮವಿಮರ್ಶೆ ಎಂಬುದು ಅವ್ವನವರ ಕೀರ್ತನೆಗಳಲ್ಲಿ ರುಕ್ಮಿಣಿ-ಸತ್ಯಭಾಮೆಯರ ಮಾತಿನಲ್ಲೂ, ದ್ರೌಪದಿ, ಸುಭದ್ರೆಯರ ನುಡಿಗಳಲ್ಲೂ ವ್ಯಕ್ತವಾಗಿರುವುದು. ಅವ್ವ, ತನ್ನ ಕಾವ್ಯದಲ್ಲಿ ಹೆಂಗಳೆಯರ ಮಾತಿನ ಜಾಡನ್ನು ಹಿಡಿದು ಸಾಗುತ್ತಿದ್ದು ಅವರಲ್ಲಿ ನಡೆಯುವ ವಾಗ್ವಾದಗಳನ್ನು ಬಿಚ್ಚಿಟ್ಟಿದ್ದಾಳೆ. ಅಣ್ಣನ ಮಡದಿಯರೆಂದು, ಬಹಳ ಪ್ರೀತಿಯಿಂದ ತಂದ ಮುಯ್ಯ ಸ್ವೀಕರಿಸಲು ತಡರಾತ್ರಿಯಾದರೂ ಬರಲಿಲ್ಲವೆಂದು ಅತ್ಯಂತ ಕೋಪದಿಂದ ಅಣ್ಣನಾದ ಕೃಷ್ಣನ ಬಾಳುವೆಯ ಕಂಡು ತಂಗಿಯರು ಪರಿತಪಿಸುವರು.

ಅಪ್ಪನವರ ಭಕ್ತಿಯ ತೀವ್ರತೆಯು ತುಂಬಿ ಬರುವುದು ಹೀಗೆ, ಕೃಷ್ಣನ ದಯೆ ಬೇಡಿ ಹಸ್ತಿನಾಪುರಕ್ಕೆ ಬಂದ ಕೃಷ್ಣನನ್ನು ಸುತ್ತುವರಿದು ಹಾಡುತ್ತ ಸ್ವಾಗತಿಸುವರು. ಗೆಜ್ಜೆಕಾಲಿನ ಸದ್ದು ಮಾಡುತಾ ರಾಮೇಶನ ದಯೆ ಬೇಡಿಕೊಳ್ಳುತ್ತ ಹಾಡುವ ಮೈಮರೆಯುವ ಗೋಪಿಯರ ಚಿತ್ರಣವನ್ನು ಕಟ್ಟಿಕೊಡುವರು.

''ಚಿತ್ರ ಚಕೋರದಂತೆ ನಲಿದು ನರ್ತವಾಡುತ
ನಲಿದು ನರ್ತವಾಡುತ ಹಸ್ತವೆಂಬೊ ಕಮಲ
ಮುದದಿ ಎತ್ತಿ ಮುಗಿಯುತ
ರಂಗಗೆ ಎತ್ತಿ ಮುಗಿಯುತ ||೨||
ಲಕುಮೇಶನಲ್ಲೆ ಸ್ನೇಹ ಉಕ್ಕಿ ಚೆಲ್ಲುತ
ಶರದಿ ಉಕ್ಕಿ ಚೆಲ್ಲುತ ಅಕ್ಕ
ನೇತ್ರವೆಂಬೊ ಕುಮುದ
ಚಕ್ಕನೆ ಅರಳುತ ಚಕ್ಕನರಳುತ ||೩||
ರಂಗನಂಘ್ರಿಗೆರಗುವಂತೆ ಭೃಂಗವಾಗುತ
ಎರಗಿ ಭೃಂಗವಾಗುತ ತಮ್ಮ
ಅಂಗ ಮರೆದು ಮುದದಿ
ಉತ್ತುಂಗರಾಗುತ ಉತ್ತುಂಗರಾಗುತ'' ||೪||

ಎಂದು ತಮ್ಮೊಳಗೆ ಅಡಗಿರುವ ಭಕ್ತಿಯ ಭಾವವನ್ನು ಪ್ರಚುರಪಡಿಸಿದ್ದಾರೆ. ತಮಗೆ ಗೊತ್ತಿಲ್ಲದಂತೆಯೇ ಕೃಷ್ಣನ ಬರವು ತಿಳಿದು ಕುಣಿದು ಸಂಭ್ರಮಿಸುತ್ತಾ, ಕೈಯೆತ್ತಿ ಮುಗಿಯುವರು. ತಮ್ಮ ಸ್ನೇಹ, ಪ್ರೀತಿಗಳೆಲ್ಲ ಭಕ್ತಿಯಲ್ಲಿ ಲೀನವಾಗಿ ಲಕುಮೇಶನಲ್ಲಿ ತೋರುವ ಭಕ್ತಿಯು ಕಣ್ಣುಗಳಲ್ಲಿ ಕಾಂತಿಯನ್ನು ತುಂಬಿ ಅರಳುವಂತಿವೆ. ರಂಗನಂಘ್ರಿಗೆ ಎರಗುವ ಭೃಂಗದಂತೆ ತಮ್ಮ ಅಂಗವನ್ನು ಮರೆತು ಅತ್ಯಂತ ಭಕ್ತಿಯಿಂದ ಕೈಮುಗಿದು ಉತ್ತುಂಗರಾಗುವೆವು, ಶ್ರೇಷ್ಠರಾಗುವೆವು ಎಂದಿದ್ದಾರೆ.

ಹಸ್ತಿನಾವತಿಯಲ್ಲಿ ಕೃಷ್ಣನು ಮಡದಿಯರೊಡಗೂಡಿ ಬರುವ ಸುದ್ದಿ ಕೇಳೀ ಪಾಂಡವರು ಅತ್ಯಂತ ಸಂಭ್ರಮದಿಂದ ಸ್ವಾಗತಿಸುವಲ್ಲಿ ಅಪ್ಪನವರ ಭಕ್ತಿಯು ಪೂರ್ಣವಾಗಿ ರೂಪುಪಡೆದಿರುವುದು.

''ಚಂದ್ರ ಉದಿಸಿದಂತೆ ಬಂದರೆ ಐವರು
ಇಂದೆಮ್ಮ ಪುಣ್ಯ ಫಲಿಸಿತೆ
............ಐವರು
ಬಂದೆರಗೋರಮ್ಮ ಕ್ಷಣದೊಳು''

ಹೀಗೆ, ತಮ್ಮನ್ನೇ ಮರೆತು ಕೃಷ್ಣನ ಅಡಿಗೆರಗುವರು. ಕೃಷ್ಣ ದಯೆಯನ್ನು ಪಡೆದು 'ಧನ್ಯ ಧನ್ಯರಾಯ ಮಾನ್ಯ ಮಾನ್ಯವೀತ ಮುನ್ನಾರು ಸರಿಯಿಲ್ಲ.

"ಮುನ್ನೆಲ್ಲ ಕೆಲದಿ ಕೃಷ್ಣನ ಪ್ರಿಯ
ಕಾಮ ಕ್ರೋಧಗಳೆಲ್ಲ ಸೀಮೆಯ ದಾಟಿಸಿ
ಭೂಮಿಯನಾಳುವನೆ ಪ್ರೇಮದಿರಾಯ"

ಬದುಕಿನಲ್ಲಿ ಪಡೆದ ಕಾಮಕ್ರೋಧಗಳನ್ನೆಲ್ಲ ಸೀಮೆಯ ದಾಟಿಸಿದನು ಎಂದು ಕೃಷ್ಣನ ರಾಜ್ಯದಿ ಇಲಿ, ಬೆಕ್ಕು, ಹುಲಿ, ಮೊಲಗಳನ್ನೆಲ್ಲ ಪರಸ್ಪರ ಹಿತವಾಗಿ ಕಾಣುವುದು ಕಾರಣ, ಕೃಷ್ಣನ ದಯೆಯಿಂದ ಪರಸ್ಪರ ದ್ವೇಷಾಸೂಯೆಗಳು ಸೂರಾಗಿ ಕಾದಾಡುವ ಪ್ರಾಣಿಗಳು ಸ್ನೇಹದಿಂದಿರುವುದು.

"ಎಲ್ಲರ ನಡೆ ಒಂದೆ ಎಲ್ಲರ ನುಡಿ ಒಂದೆ
ದೇಹ ನಿಂದೆ ಎಲ್ಲರ
ಹೃದಯದಲಿ ನಿಂತ
ಎಲ್ಲರೊಲ್ಲಭನ ಹೊಂದು"

ಅವ್ವನವರು ಭಕ್ತರೆಲ್ಲರ ನಡೆನುಡಿಗಳಲ್ಲಿ ಬೆರೆತಿರುವ, ಹೃದಯದಲಿ ನೆಲೆ ನಿಂತಿರುವ ಹರಿಯನ್ನು ಸ್ಮರಿಸುತ್ತಾರೆ. ಎಲ್ಲರೊಲ್ಲಭನಾಗಿರುವ ದೈವಕ್ಕೆ ಮೊರೆ ಹೋಗಿದ್ದಾರೆ. ರಾಮೇಶನನ್ನು ಹಾಡಿ, ಹೊಗಳುತ್ತಾ, ಆತನಿಗೆ ನಮಿಸುತ್ತಾ, ಕೃಷ್ಣ ಭಕ್ತಿಯನ್ನು ಭಕ್ತರಲ್ಲಿ ಮೂಡಿಸುವ ಭಾವ ತೀವ್ರತೆಯನ್ನು ವಿವರಿಸಿರುವರು.

"ಹಿಡಿಸುವೆ ಹುಚ್ಚನೆ ಹಿಡಿಸುವೆ
ರಂಗನರಸಿಯರ ಪಾಟ ಬಡಿಸುವೆ" ||ಪ||
ತಮವೆಂಬ ಭಂಗಿಯ ಕುಡಿಸುವೆ
ಬುದ್ಧಿಭ್ರಮೆಗೊಂಡ ಮಾತು ನುಡಿಸುವೆ
ಸುಮನಸರಿಗೆ ಹೆಂಡ ಕುಡಿಸುವೆ
ಯಾರು ನಮಿಸದಂತೆ ದೂರ ಇಡಿಸುವೆ ||೧||
ರಜವೆಂಬೊ ದ್ರವ್ಯ ಬಚ್ಚಿಡುಸುವೆ
ಇವರ ರಾಜ ಲಕ್ಷಣ ಕಟ್ಟಿ ಇಡಿಸುವೆ
ಗಜಗಮನೆಯರ ಗರ್ವ ಮುರಿಸುವೆ
ನಮ್ಮ ತ್ರಿಜಗ ವಂದನ ಹಾಸ್ಯ ಮಾಡಿಸುವೆ ||೨||
ಸತ್ಯ ಸಾಮಿತ್ಯವೆ ತೆಗೆಸುವೆ
ಉನ್ಮತ್ತೆಯರ ಮಾಡಿ ಮೆರೆಸುವೆ
ಕತ್ತಲೆ ಮನೆಯೊಳಗೆ ಹೊಗಿಸುವೆ
ಇನ್ನೆತ್ತ ಹೋಗಲೆಂದು ಎನಿಸುವೆ ||೩||
ಯಾರೂ ಇಲ್ಲದಲಿ ಇಡಿಸುವೆ

ಇವರ ನೀರು ಕಂಡು ಭಯಪಡಿಸುವೆ
ಓರೆಂದು ಗಾಬರಿಗೆಡಿಸುವೆ
ಕಾಯೋ ಶ್ರೀನಿವಾಸನೆಂದೆನಿಸುವೆ ||೪||
ಒಬ್ಬರೆಲ್ಲದಲಿ ಇಡಿಸುವೆ
ಇವರನು ಗುಬ್ಬಿಯ ಹಾಂಗೆ ಭಯಪಡಿಸುವೆ
ತಬ್ಬಿಬ್ಬು ಗೊಂಡು ತಳವೆಳಸುವೆ
ಅರ್ಥಿಲೊಬ್ಬ ರಾಮೇಶನ ನೋಡಿಸುವೆ ||೫||

ಭಕ್ತರ ಹೃದಯದ ಅನಿಸಿಕೆಗಳು ವ್ಯಕ್ತವಾಗಿರುವುದು ಹೀಗೆ. ರಂಗನರಸಿಯರನ್ನು ಕಾಡಿಸುವ ನೆವದಿ ಅವ್ವನವರು ತಮ್ಮ ಹೃದಯದಲಿ ರಾಮೇಶನ ಭಕ್ತಿಯು ಮೂಡಿರುವುದನ್ನು ತಿಳಿಸಿರುವರು. ಅಹಂಕಾರದ ತಮವೆಂಬ ಭಂಗಿಯ ಕುಡಿದ ಅಮಲಿನಲ್ಲಿ ಬುದ್ಧಿಭ್ರಮೆಗೊಂಡು ನುಡಿಯುವ ಮಾತುಗಳು ಸುಮನಸರಲ್ಲಿಯೂ ಅಮಲು ಉಂಟು ಮಾಡುವಂತಹದ್ದು ಎಂದಿದ್ದಾರೆ.

ರಾಜರೆಂದೂ, ಅರಸಿಯರೆಂದು, ಉನ್ಮತ್ತಭಾವದಲಿ ಮೆರೆಯುವವರ ಅಹಂಕಾರವನ್ನು ಮುರಿಯುವೆನು, ಎಲ್ಲರೊಳಗು ರಮಿಯರಸು ಭಕ್ತರನ್ನು ಕಂಡು ಅರ್ಥಿಯಲೊಬ್ಬ ರಾಮೇಶನ ನೋಡಿಸಿದೆ. ಎಂಬಲ್ಲಿ ಅವ್ವನವರು ತಮ್ಮೊಳಗೆ ಅಡಗಿದ್ದ ಉತ್ಕೃಷ್ಟ ಎಂಬ ಅಹಂಕಾರವನ್ನು ಕತ್ತಲೆಯೊಳಗೆ ಹೊಗಿಸುವಂತೆ ಎಂದಿದ್ದಾರೆ, ಭಕ್ತರೆಂದು ಹಮ್ಮಿನಿಂದ ನಡೆಯಲು ಅವರ ಭಕ್ತಿಯ 'ಗುಬ್ಬಿಯ ಹಾಂಗೆ' ಎಂದು ಸಾದೃಶ್ಯ ನೀಡುವ ಮೂಲಕ ಭಕ್ತರ ಮನಸ್ಸಿನ ಅಹಂಕಾರ, ಶ್ರೇಷ್ಠತೆಗಳನ್ನು ಅಲ್ಲಗಳೆದು, ರಾಮೇಶನು ಎಲ್ಲರೊಳಗು ಕಾಣಿಸುವ 'ಒಬ್ಬರೆಲ್ಲದಲಿ ಇಡಿಸುವೆ' ಎಂಬ ಭಾವವನ್ನು ವ್ಯಕ್ತಪಡಿಸಿದ್ದಾರೆ.

**ಆತ್ಮವಿಮರ್ಶೆ ಮತ್ತು ಮುಕ್ತಿಮಾರ್ಗ**

ಆತ್ಮವಿಮರ್ಶೆ ಎಂಬುದು ಅವ್ವನವರ ಕೀರ್ತನೆಗಳಲ್ಲಿ ಸಹಜವಾಗಿ ಮೂಡಿಬಂದಿರುವುದು. ಹರಿದಾಸರೆಲ್ಲರೂ ಸಮಾಜದ ಅಂಕುಡೊಂಕು ತಿದ್ದಲು ತಮ್ಮನ್ನು ತಾವೇ ವಿಮರ್ಶಿಸಿಕೊಳ್ಳುತ್ತಾ ಜನಸಾಮಾನ್ಯರಲ್ಲಿ ಒಬ್ಬರೆಂದು ನಡೆದುಕೊಂಡಿರುವರು.

ಸಾಮಾಜಿಕವಾಗಿ ಮನುಷ್ಯರ ದುಷ್ಟಸ್ವಭಾವಗಳನ್ನು ಕಂಡು ತಿರಸ್ಕರಿಸಬೇಕೆಂದು, ಅವರಲ್ಲಿ ಮನೆಮಾಡಿರುವ ವಂಚಕಬುದ್ಧಿ, ಬೂಟಕತನ, ಗರ್ವಗಳನ್ನು ಜರೆದು ಅವರು ನಡೆದುಕೊಳ್ಳುವ ಬೂಟಕ ಗುಣದವ ಪಾಟಬಡಿಸುವಿ, ಗರುವಿನ ಗೊಂಬೆಯರ ಹಿರಿಮತನ್ನಾಂಗಿರಲಿ, ನಿಂದಕರನ ತಾಸುನಿಂದಿ ಸೋದುಚಿತ' ಎಂಬುದಾಗಿ ಸಾಮಾಜಿಕ ಡಂಭಾಚಾರವನ್ನು ತೆಗಳಿದ್ದಾರೆ.

''ವಂಚಕ ಗುಣದವರ ಮುಂಚೆ ನಿಲ್ಲಿಸಬೇಕು
ಪಾಂಚಲಿ ಬೇಡಿಕೊಂಬೆ ಅಕ್ಕಯ್ಯ
ಬೂಟಕ ಗುಣದವರ ಪಾಟಬಡಿಸುವಿತಾಸು

ಕೋಟಿ ಜನರು ನೋಡ ಅಕ್ಕಯ್ಯ

............

...............

ನಿಂದಕರನ ತಾಸು ನಿಂದಿಸೋದುಚಿತ

ವಂದಿಸುವೆನು ನಿನಗೆ ಅಕ್ಕಯ್ಯ"

ನಿಂದಕರನ ತಾಸು ನಿಂದಿಸೋದುಚಿತ

ವಂದಿಸುವೆನು ನಿನಗೆ ಅಕ್ಕಯ್ಯ"

ಎಂಬುದು ಅವ್ವನವರು, ಸಾಮಾಜಿಕರಲ್ಲಿ ಮನೆಮಾಡಿರುವ ಅಹಂಕಾರ, ಡಂಭಾಚಾರ ಬೂಟಕತನಗಳೆಲ್ಲಾ ಕಂಡು ಕೈ ಮುಗಿಯಬೇಕೇನು? ಅಂತಹವರಿಗೆ, 'ನಿಂದಕರನ ತಾಸು ನಿಂದಿಸೋದುಚಿತ' ಎಂಬುದು ಅವರ ಅಭಿಪ್ರಾಯವಾಗಿದೆ.

ಸಮಾಜದಲ್ಲಿ ಹಿರಿಯರು ಎನಿಸಿಕೊಂಡು ತಮ್ಮಲ್ಲಿದ್ದ ಹಿರಿತನಕ್ಕೆ ಒಗ್ಗದ ಗುಣ, ಬೇರೆಯವರನ್ನು ತುಚ್ಛವಾಗಿ ಕಾಣುವ, ಅವಮಾನಿಸುವವರಿಗೆ ಅತಿಯಾದ ವಂಚಕತನ, ಬೂಟಕತನಗಳನ್ನೆಲ್ಲ ಒಂದೇ ಬಾರಿಗೆ ಅಲ್ಲಗಳೆಯುತ್ತಾರೆ. ಬದುಕಿನಲ್ಲಿ ಹಿರಿಯತನವೆಂಬುದು, ಶ್ರೇಷ್ಠವೆಂಬುದಾಗಿರದೆ, ಗರುವಿನ ನಡವಳಿಕೆಯನ್ನು ಕಂಡು ನಿಂದಿಸೋದುಚಿತ ಎಂದಿದ್ದಾರೆ. ದ್ರೌಪದಿಯನ್ನು ಕಂಡು ಕೃಷ್ಣನ ಮಡದಿಯರು ಅಹಂಕಾರದಿಂದ ವರ್ತಿಸುವಾಗ, ಕೃಷ್ಣನ ಮಡದಿಯರು ಎಂಬ ಹಿರಿಯತನವನ್ನು ಪಕ್ಕಕ್ಕಿರಿಸಿ, ಅವರು ನಡೆಯುವ ರೀತಿಯು ಸರಿಯಲ್ಲ ಎಂದಿದ್ದಾರೆ. ಹಾಗೂ ರಮಿಅರಸುವಿನ ಭಕ್ತಿಗೆ ಇಂತಹ ಗರ್ವದ, ಬೂಟಕತನಗಳು ಸಹಕಾರಿಯಾಗಲಾರವು ಎಂದು ಅವ್ವನವರು ತಾಮಸ ಗುಣಗಳ ಕಳೆದು, ಕೃಷ್ಣ ಭಕ್ತಿಯು ಸತ್ವವನ್ನು ಸಮೀಪಗೊಳಿಸುವುದು ಎಂದು ನುಡಿಯುತ್ತಾರೆ. ಹೀಗೆ ಕೊಡುವ ಸಾದೃಶ್ಯಗಳ ಚಿತ್ರಣವು

''ಹಿಡಿಸುವೆ ಹುಚ್ಚವೆ ಹಿಡಿಸುವೆ

ರಂಗನರಸಿಯರ ಪಾಟ ಬಡಿಸುವೆ

ತಮವೆಂಬ ಭಂಗಿಯ ಕುಡಿಸುವೆ

.................

...............

ರಜವೆಂಬೋದ್ರವ್ಯ ಬಚ್ಚಿಡಿಸುವೆ

...............

ಸತ್ವ ಸಾಮಿತ್ವವ ತೆಗೆಸುವೆ"

ಎಂದು ತಮ, ರಜ, ಸತ್ವ ಗುಣಗಳಿಂದ ಮನುಷ್ಯರ ಗುಣಸ್ವಭಾವಗಳಿಗೆ ಒದಗುವ ಸ್ಥಿತಿಯನ್ನು ತಿಳಿಸಿರುವರು. ಇಲ್ಲಿ ದ್ರೌಪದಿ, ರುಕ್ಮಿಣಿಯರ ಪಾತ್ರಕ್ಕೆ ಪೂರಕವಾಗಿ ಹೇಳುತ್ತಾ, ಜನಸಾಮಾನ್ಯರಿಗೆ ಒಪ್ಪಿಗೆಯಾಗುವ ರೀತಿಯಲ್ಲಿ ಗುಣ ಸ್ವಭಾವಗಳನ್ನು ಸಾರ್ವತ್ರಿಕವಾಗಿಸಿದ್ದಾರೆ.

ooo

**ಮುಕ್ತಿಮಾರ್ಗ :** ಹರಿದಾಸ ಸಾಹಿತ್ಯವು ಭಕ್ತಿಯ ಪೂರವಾಗಿ ಜನ ಸಾಮಾನ್ಯರಲ್ಲಿ ನೆಲೆಯಾಗಿರುವುದು. ಭಕ್ತಿಗೆ ಭಗವಂತನ ಕರುಣೆಯು ಮುಖ್ಯವಾದುದು. ಭಕ್ತರ ಮನಸ್ಸಿನ ತಲ್ಲಣ, ಆತಂಕಗಳಿಗೆ ಹರಿದಾಸರು ತಾವು ಕಂಡುಕೊಂಡ ಬದುಕಿನ ಅನುಭವಗಳನ್ನು, ಹರಿ ಸಾನಿಧ್ಯದಲ್ಲಿ ಒಳಿತನ್ನು ಪಡೆಯಬಹುದೆಂದಿದ್ದಾರೆ. 'ಮುಕ್ತಿ' ಎಂಬುದು ಮನುಷ್ಯರು ಬದುಕಿನಲ್ಲಿ ಅನುಭವಿಸುತ್ತಿರುವ ಸಾಂಸಾರಿಕ ಸಂಕಟಗಳಿಂದ ಪಾರು ಮಾಡುವುದಾಗಿದೆ. ಸಾಂಸಾರಿಕ ಭವಗಳಿಂದ ಮುಕ್ತರಾಗಿಸಲು ಹರಿಭಕ್ತಿಯು ತುಂಬಿರಬೇಕು. ಅದರಿಂದಲೇ ಹರಿದಾಸರಲ್ಲಿ ಪ್ರಥಮರೆನ್ನಿಸಿದ 'ಶ್ರೀಪಾದರಾಜರು' ಹೇಳುವಂತೆ,

''ಭಕ್ತಿ ಬೇಕು, ವಿರಕ್ತಿಬೇಕು
ಶಕ್ತಿ ಬೇಕು ಮುಂದೆ
ಮುಕ್ತಿಯ ಬಯಸುವಗೆ''

ಎಂಬುದು ಮುಂದಿನ ಜನ್ಮದಲ್ಲಿ ಭವ ಬಂಧನಗಳಿಂದ ಮುಕ್ತರಾಗಲು ಹರಿಭಕ್ತಿಯು ಮುಖ್ಯವೆಂದಿದ್ದಾರೆ. 'ಮುಕ್ತಿ'ಯ ಬಗ್ಗೆ ಪುರಂದರದಾಸರು ಭಕ್ತಿ-ಸಾಧನೆಯಿಂದ ಮೋಕ್ಷ ಸಾಧನೆಯು ಸುಲಭವಾಗುವುದೆಂದು ಹೇಳುವರು ಆದುದರಿಂದಲೇ ಅವರು ಅಭಿಪ್ರಾಯ ಪಡುವುದು ಹೀಗೆ,

''ಮಾನವ ಜನ್ಮ ದೊಡ್ಡದು ಇದ

ಹಾನಿ ಮಾಡಿಕೊಳ್ಳಬೇಡಿ ಹುಚ್ಚಪ್ಪಗಳಿರಾ'' ಎಂತಲೂ, ಸಂಸಾರದಲ್ಲಿದ್ದು ಕೊಂಡೇ ಭಗವನ್ನಾಮ ಸಂಕೀರ್ತನೆಗಳಿಂದಲೂ ಮುಕ್ತಿ ಪಡೆಯಲು ಮನಸ್ಸಿನ ದೃಢತೆಯು ಬಹುಮುಖ್ಯವೆಂದು

''ಈಸಬೇಕು ಇದ್ದು ಜಯಿಸಬೇಕು
ಹೇಸಿಕೆ ಸಂಸಾರದಲ್ಲಿ''
'ಭಕ್ತನ ಬಯಕೆಯೆಲ್ಲ ಭಗವಂತನಿಗೆ ಮೀಸಲು' ಎಂದರು.

ಜೀವನದಲ್ಲಿ ಭಕ್ತನು ಉತ್ತಮ ಮಾರ್ಗದಲ್ಲಿ ನಡೆಯಲು ತನ್ನ ಬದುಕನ್ನು ಭಗವಂತನ ಲೀಲಾ ವಿನೋದಗಳನ್ನು ತಿಳಿಯುವ ಭಕ್ತಿಗೆ ಅರ್ಪಿಸಿಕೊಂಡಾಗ ಮಾತ್ರ ಸಾಧ್ಯವೆನ್ನುತ್ತಾರೆ ವಿಜಯದಾಸರು. ಆದ್ದರಿಂದ ಭಗವಂತನ ಸಾನಿಧ್ಯವೆಂಬುದು ಸಾತ್ವಿಕರಿಗೆ ಐದು ಬಗೆಯಲ್ಲಿ ಕಾಣುವುದೆಂದು ವಿವರಿಸಿರುವುದು ಹೀಗೆ,

''ಸಾಲೋಕ್ಯ ಸಾಮೀಪ್ಯ, ಸಾರೂಪ್ಯ ಸಾಯುಜ್ಯ ಸಾರಿಷ್ಟಿಯಂಗಳು
ಯೋಗ್ಯ ಜೀವರಿಗೆ ಆ ಲೋಕದಲ್ಲಿಪ್ಪುದು ಸಾಲೋಕ್ಯಮೆಂಬುದ
ಆ ಪಟ್ಟಣ ಸಮೀಪದಲ್ಲಿಪ್ಪುದು ಸಾಮೀಪ್ಯವೆಂಬುದು
ಶಂಕ ಚಕ್ರಗದ ಪದುಮಧರರಾಗಿ ಸರ್ವರು ಸಾರೂಪ್ಯವೆಂಬ
ಮುಕುತಿಯೆಸೆವವು''

ಶ್ರೀಹರಿಯನ್ನು ಭಕ್ತಿಯಿಂದ ಭಜಿಸುವ ಭಕ್ತರು ತಮ್ಮೊಳಗಿನ ಅಹಂಕಾರ, ಮದಗಳನ್ನು ಬಿಟ್ಟು ಪರಮಾತ್ಮನ ಸಾನಿಧ್ಯ ಪಡೆಯುವ ಮಾರ್ಗವೇ ನಿಷ್ಕಳಂಕ ಭಕ್ತಿ. ನಿರ್ಮಲವಾದ ಮನಸ್ಸಿನಿಂದ ಭಗವನ್ನಾಮ ಸಂಕೀರ್ತನೆಗಳು ಶ್ರೀಹರಿಯ ಸಾಮೀಪ್ಯವನ್ನು, ದೃಢವಾದ ಭಕ್ತಿಯಿಂದ ಸಾರೂಪ್ಯವನ್ನು, ಸಾಯುಜ್ಯವನ್ನು ಪಡೆಯುಬಹುದು ಎಂದಿದ್ದಾರೆ. ಇಲ್ಲಿ ಭಕ್ತಿಮಾರ್ಗವು ಸರ್ವರನ್ನು ಮುಕ್ತಿಮಾರ್ಗದಲ್ಲಿ ಸಾಗಲು ಅನುಕೂಲವಾಗಿರುವುದು. ಪರಮಾತ್ಮನ ಸಾನಿಧ್ಯವನ್ನು ಪಡೆಯಲು ಮನಸಾರೆ ಭಜಿಸಿ ನಿರ್ಮಲವಾದ ಭಕ್ತಿಯನ್ನು ಅರ್ಪಿಸಿದರೆ ಸಾಕು ಎಂಬುದು ಹರಿದಾಸರ ಅಭಿಪ್ರಾಯವಾಗಿರುವುದು. ಗಲಗಲಿಯ ಅವ್ವನವರು ಕೂಡ. ತಮ್ಮ ಹಾಡುಗಳಲ್ಲಿ ಹರಿಸಾನಿಧ್ಯ ಪಡೆಯಲು ಭಕ್ತಿಯನ್ನೇ ನಂಬಬೇಕೆಂದಿದ್ದಾರೆ. ಹರಿದಾಸರೆಲ್ಲರೂ ತಿಳಿಸುವಂತೆಯೇ, ಬದುಕಿನಲ್ಲಿ ಹರಿಸಾನಿಧ್ಯ ಪಡೆದಾಗಲಷ್ಟೇ ಈ ಬದುಕಿನ ಜಂಜಾಟಗಳಿಂದ 'ಮುಕ್ತಿ' ಎಂದು ಹೇಳಿದ್ದಾರೆ.

ಲೌಕಿಕರು ಭಗವಂತನ ಪ್ರೀತಿಗಳಿಸಲು ನಾನಾ ರೂಪಗಳ ಭಕ್ತಿಗಳನ್ನೇ ಅವ್ವ ಬೂಟಕತನ, ವಂಚಕನ ಎಂದು ಹೀಯಾಳಿಸುವಳು. ಸುಭದ್ರೆ ದ್ರೌಪದಿಯರು ಮುಯ್ಯ ತಂದಾಗ ಬೇಗನೆ ಬಂದು ಮುಯ್ಯ ಪಡೆಯಲಾರದ ರುಕ್ಮಿಣಿಯನ್ನು ಜರೆಯಲಾರಂಭಿಸಿ ಅವ್ವನವರು ಹೀಗೆನ್ನುವರು,

> ''ಹುಟ್ಟು ಹೊಂದು ನಾರಿ ನೀನು
> ಎಷ್ಟೊಂದು ಗರುವು ನಮ್ಮ ಕೂಡ ಯಾಕೆ
> ಕೃಷ್ಣನ ಅರಸಿ ರುಕ್ಮಿಣಿಗೆ
> ಒಂದಿಷ್ಟರೆ ದೋಷ ತೋರ ಸಖಿಯೆ
> ಜನನ ಮರಣವೆಂಬೆರಡು ಜಾಣೆ ರುಕ್ಮಿಣಿ ಬಲ್ಲಳೇನ
> ಜನನಿ ಬೊಮ್ಮಗ ಎನಸಿ
> ತಾನೆ ಜಗದಿ ಖ್ಯಾತಿ ತುಂಬಿಲ್ಲವೇನ
> ಈ ಜಗದಿ ಖ್ಯಾತಿ ತುಂಬಿಲ್ಲವೇನ.
> ನಿತ್ಯ ಮುಕ್ತಳು ನಿರ್ವಿಕಾರಳು
> ನಿತ್ಯ ನಿತ್ಯ ಜಗದುದ್ಧಾರಳು
> ನಿತ್ಯ ಮೂರುತಿ ಕೃಷ್ಣನ ಭಜಿಸಿ
> ನಿತ್ಯ ತೃಪ್ತಳು ಎನಿಸುತಿಹಳು''[೨೩]

ಜನನ, ಮರಣವೆಂಬೆರಡು ಮನುಷ್ಯರಿಗೆ ಸಾಮಾನ್ಯವಾದವುಗಳು ಆದರೆ ಮಾನವರಲ್ಲಿನ ತಾನು ಹೆಚ್ಚು, ಶ್ರೇಷ್ಠ, ಎಂಬ ಉಚ್ಚಬುದ್ಧಿಗಳು ಬದುಕಿನಲ್ಲಿ ಅವರಿಗೆ ಅಹಂಕಾರದಿಂದ ಸೋಲನ್ನು, ಅತೃಪ್ತಿಯನ್ನು ತರುವುದು ಖಚಿತವಾದದ್ದು. ಆದ್ದರಿಂದ ಹುಟ್ಟು ಸಾವುಗಳನ್ನು ನಿರ್ಧರಿಸಿ ಮಾನವರನ್ನು

ಸೃಷ್ಟಿಸುವ ಸೃಷ್ಟಿಕರ್ತನಿಗೆ ತಾಯಿ ಎನಿಸಿದ ರುಕ್ಮಿಣಿಯು, ಕೃಷ್ಣನ ಮಡದಿಯಾಗಿ ದೋಷವೆಷ್ಟು ಇಲ್ಲದ ಹರಿಭಕ್ತರನ್ನು ಸಲುಹುವಂತವಳು. ಅಂತಹವಳಲ್ಲಿ ದೋಷ ಹುಡುಕದೇ, ಸದಾಕಾಲ ಹರಿಸಾನಿಧ್ಯದಲ್ಲಿದ್ದು ಹರಿಭಕ್ತರನ್ನು ಹರಸಲು ನಿತ್ಯ ಮುಕ್ತಳು, ನಿರ್ವಿಕಾರಳು, ನಿತ್ಯ ಮೂರುತಿ ಕೃಷ್ಣನ ಭಜಿಸಿ ನಿತ್ಯ ತೃಪ್ತಳು ಎನಿಸುತಿಹಳು" ಎಂದು ಹಾಡುತ್ತಾ, ಅವ್ವ ಹರಿಸಾನಿಧ್ಯ ಪಡೆದ ರುಕ್ಮಿಣಿಯ ಧನ್ಯತೆಯನ್ನು ಸ್ಮರಿಸುತ್ತಾರೆ. ಆಕೆಯೊಡನೆ ಪಂಥ ಮಾಡದೆ ಹರಿಸಾನಿಧ್ಯ ಪಡೆಯಲು ಭಕ್ತಿಯೊಂದೇ ಮಾರ್ಗವೆಂದಿದ್ದಾರೆ. ನಂಬಿದ ಭಕ್ತರನ್ನು ಬಿಡದೆ ಸಲುಹುವನು. ನಮ್ಮ ಸಿರಿಅರಸು ರಾಮೇಶನು ಎಂದು ಹಾಡುವರು,

''ಶ್ರೀನಿವಾಸ ನಡೆದ ಕಾಮಧೇನುವಿನಂತೆ
ಕಾಮಧೇನುವಿನಂತೆ ಇನ್ನೇನು
ಬೇಕಾದುದು ಕೊಡುವ
ಮಾನಿನಿ ಕಾಂತೆ
ಕಾಂತ ಕೃಷ್ಣರಾಯ ನಮಗೆ
ಚಿಂತಾಮಣಿ ಕೊಡುವ
ಚಿಂತಾಮಣಿಯಂತೆ ಅನಂತ ಸುಖವಿತ್ತು
ಭಕ್ತರ ಸಂತೈಸುವನಂತೆ
ಲಕ್ಷ್ಮೀರಮಣ ಕಲ್ಪವೃಕ್ಷ ತಾನಂತೆ
ಕಲ್ಪವೃಕ್ಷ ತಾನಂತೆ ಅಕ್ಷಯ
ಸುಖವಿತ್ತು ಭಕ್ತರ
ಸಂತೈಸುವನಂತೆ''[೨೪]

ಹರಿಕಾರುಣ್ಯವೆಂಬುದು ಭಕ್ತರಿಗೆ ಕಲ್ಪವೃಕ್ಷ, ಕಾಮಧೇನುವಿನಂತೆ ಅನಂತ ಸುಖವನ್ನು ನೀಡುವ ಚಿಂತಾಮಣಿಯಂತೆ ಭಕ್ತರ ಮನಸ್ಸಿನ ಅಸಮಧಾನ, ಆತಂಕಗಳನ್ನು ನಿವಾರಿಸಿ. ಸಂತೈಸುವುದು. ಇಂತಹ ಹರಿಯ ಕರುಣೆಯನ್ನು ಪಡೆಯಲು ಹಿರಿಗುರುಗಳ ಕೃಪೆಯು ಅತ್ಯವಶ್ಯ ಎಂದು ಅವ್ವ, ಮುಯ್ಯು ಹಿಂತಿರುಗಿಸಿದ ಹಾಡುಗಳಲ್ಲಿ ಭಕ್ತರಿಗೆ ಹರಿಸಾಮೀಪ್ಯ ಸೇರಲು ಗುರುಗಳಲ್ಲಿ ಶರಣಾಗುವುದು ''ಕಾಲಕಾಲಕ್ಕೆ ಗುರುಗಳ ಕಾಲಿಗೆ ಎರಗುವೆ'' 'ಬಾಲೆ ಗುರುಗಳ ಹೃದಯ ಆಲಯ ವಶವಾದ ಬಾಲಗೋಪಾಲ ನೆಂಬ ನೀಲ ಮಾಣಿಕವೇ ಬಿಗಿದು' ಎಂದು ವಿನಯವಂತಿಕೆಯನ್ನು ನಿರೂಪಿಸಿದ್ದಾಳೆ.

ಗುರುಗಳ ಆಶೀರ್ವಾದ ಕರುಣೆಯಿಂದಲೂ ಹರಿಭಕ್ತಿ ದೊರಕುವನ್ನು ಸರಳವಾಗಿಸಿದ್ದಾರೆ. ಕೃಷ್ಣನನ್ನು ಸ್ಮರಿಸುವುದೇ ಜೀವನದ ಪರಮ ಸುಕೃತವೆಂದೂ ನಿತ್ಯವೂ ಹರಿಯನ್ನು ಭಜಿಸಿ ಪಡೆಯುವ ಪುಣ್ಯವು ನೀಲಾಕಾಶದಲ್ಲಿ ಚಂದ್ರ ಉದಿಸಿದಂತೆ 'ಇಂದೆಮ್ಮ ಪುಣ್ಯ ಫಲಿಸಿತು' ಎನ್ನುವರು. ಪಾಂಡವರನ್ನು ಕಾಣಲು

ಬರುವ ಕೃಷ್ಣನ ಆಗಮನವನ್ನು ಕಂಡು ಹಿಗ್ಗುವ ಭಕ್ತರ ಮನದಾಳದ ಮಾತುಗಳು ಅವ್ವನವರ ಮುಕ್ತಿಮಾರ್ಗದ ಚಿತ್ರಣವೆನ್ನಬಹುದು.

''ಎಷ್ಟು ಯಜ್ಞವು ಎಷ್ಟು ದಾನವು ಎಷ್ಟು ಜಪ ತಪ ಹೋಮವು
ಮತ್ತೆ ಎಷ್ಟು ತೀರ್ಥಯಾತ್ರೆ ಫಲಿಸೀತು
ಕೃಷ್ಣ ಬಂದನೆಂದು ಈಗ ಕೃಷ್ಣ ಮನೆಗೆ ಬಂದನು
ಏಳು ಜನ್ಮದ ಸುಕೃತದಿಂದ ಈ ವೇಳೆ ಒದಗಿತೆಂದನು ರಾಯ
ಕೇಳ ರುಕ್ಮಿಣಿ ಭಾವೆ ಬಂದದ್ದು ಹೇಳಲ್ವಶವೆ
ಎಂದನುರಾಯ ಹೇಳಲ್ವಶವೆ ಎಂದನು
ಏಸು ಜನ್ಮದ ಸುಕೃತದಿಂದ ರಾಮೇಶ
ಬಂದನೆಂದನು ಸರ್ವೇಶ ಬಂದನೆಂದನು
ವಾಸುದೇವರ ಪಾದಕಾಂಬುವೆ ಈ ಸಮಯದೊಳು
ಎಂದನುರಾಯ''[೨೫]

ಅವ್ವ, ಇಲ್ಲಿ ಜನ್ಮಜನ್ಮದ ಸುಕೃತವೆಂದಿದ್ದಾಳೆ ಶ್ರೀಹರಿಯ ಸ್ಮರಣೆಯನ್ನು ಹಾಗೂ ದರ್ಶನಾಪೇಕ್ಷೆಯಿಂದ ನಿತ್ಯವು ಭಜಿಸುವರ ಮನದಲ್ಲಿ ಶ್ರೀಹರಿ ನೆಲೆಸಿರುವನು. ಅವ್ವನವರು ತಮ್ಮ ಹಾಡುಗಳಲ್ಲಿ ದ್ವೈತ ಸಿದ್ಧಾಂತಗಳನ್ನು ಬಹಳ ಸರಳವಾಗಿ ಸಾಮಾನ್ಯರೆಲ್ಲರಿಗೂ ಅರ್ಥವಾಗುವಂತೆ ವಿವರಿಸಿದ್ದಾರೆ. ಸಂಪ್ರದಾಯದ ಹಾಡುಗಳಲ್ಲಿಯೂ, ಭಗವಂತನ ಮಹಿಮೆಯನ್ನು ಅನೇಕ ಹಾಡುಗಳ ಮೂಲಕ ಭಾಗವತ ಕಥೆಗಳ ಸಂಗತಿಗಳನ್ನೇ ಅಚ್ಚುಕಟ್ಟಾಗಿ ಹೇಳಿದ್ದಾರೆ. ದ್ವೈತ ಸಿದ್ಧಾಂತವನ್ನು ಒಪ್ಪಿಕೊಂಡಿರುವಂತೆ, ಅದ್ವೈತ ಸಿದ್ಧಾಂತವನ್ನು ನಿರಾಕರಿಸುವುದು ಅವ್ವನವರ ಹಾಡುಗಳಲ್ಲಿಯೂ ಕಾಣಬಹುದು.

''ಅದ್ವೈತವಾದಿ ನಿನ್ನ ಬುದ್ಧಿ ಕೌಶಲ್ಯ
ನೋಡಿ ವಿದ್ವಾಂಸರೆಲ್ಲಾ ನಗತಾರೆ''
ಹಿಟ್ಟು ಬೂದಿಯೊಂದೇ, ರೊಟ್ಟಿ ಮುಚ್ಚಳವೊಂದೇ
ಕಟ್ಟಿಗೆಯೊಂದೆ, ಕಬ್ಬೊಂದೆ ಎಂದರೆ
................
ದಿಟ್ಟ ರಾಮೇಶ ನಗುತಾನೆ ರನ್ನದ ಕೋಲ''[೨೬]

ಸಾಮಾನ್ಯರೆಲ್ಲರೂ ಅರ್ಥಮಾಡಿಕೊಳ್ಳುವ ರೀತಿಯಲ್ಲಿ ಅವ್ವ, ನೀಡಿರುವ ಈ ರೂಪಕಗಳು ಸರಳವಾಗಿ ಘನ ತತ್ತ್ವವನ್ನು ನಿರೂಪಿಸಿರುವರು. ಮಹಿಳಾ ಹರಿದಾಸರಿಗೆ ಕುಟುಂಬವೇ ಕಾರ್ಯಕ್ಷೇತ್ರವಾಗಿದ್ದು, ಅಲ್ಲಿ ನಡೆಯುವ ಪ್ರತಿನಿತ್ಯದ ಕೆಲಸ ಕಾರ್ಯಗಳಲ್ಲೇ ತಾವು ನಂಬುವ ದೈವ, ತತ್ವಪ್ರತಿಪಾದನೆ, ಎಲ್ಲವೂ

ವಿವರಿಸುವ ಕೌಶಲ್ಯವೂ, ಅಂದಿನ ಸಾಮಾಜಿಕರಲ್ಲಿ ಒಪ್ಪಿತವಾಗುವಂತೆ ಹೇಳುವರು. ಅವ್ವ, ಮುಂದುವರಿದು ಅದ್ವೈತ, ದ್ವೈತ ಸಿದ್ಧಾಂತಗಳ ಬಗೆಯನ್ನು ವಿಶ್ಲೇಷಿಸುವ ರೀತಿಯೂ ಅಪರೂಪವಾದುವು.

''ಆಳು ಅರಸು ಒಂದೇ ಕೋಳಿ ಕೋಗಿಲ ಒಂದೆ
ಮಾಳಿಗೆ ಒಂದೆ ಬಯಲೊಂದೆ
.................ಯಾದರೆ
ಮಾಳಿಗೆ ಮನೆಯ ನಿನಗ್ಯಾಕೆ''

ಎಂದು ಪ್ರಶ್ನಿಸುವ ಧಾಟಿಯು, ಅದ್ವೈತವಾದವನ್ನು ನಿರಾಕರಿಸುತ್ತಾ, ದ್ವೈತ ವಾದದ ಪ್ರತಿಪಾದನೆಗೆ ಹೆಚ್ಚು ಒತ್ತುಕೊಟ್ಟಿದ್ದಾರೆ.

ಅವ್ವನವರು ತಮ್ಮ ಕೀರ್ತನೆಗಳಲ್ಲಿ ಅಂದಿನ ಸಾಮಾಜಿಕ ಸ್ಥಿತಿಗತಿಗಳನ್ನು ವಿವರಿಸುತ್ತಾ, ತಾವು ನಂಬಿರುವ ದ್ವೈತತತ್ವ ಪ್ರತಿಪಾದನೆಯಿಂದ ಆತ್ಮ, ಪರಮಾತ್ಮನ ನಡುವಿನ ಅಂತರವನ್ನು, ಜೀವಾತ್ಮ ಪರಮಾತ್ಮನಲ್ಲಿ ಸೇರಲು ಬೇಕಾಗುವ ಭಕ್ತಿ, ಹೀಗೆ ಅವ್ವ, ಪ್ರತಿಯೊಂದನ್ನು ಅತ್ಯಂತ ಸರಳವಾಗಿ, ಸುಲಭವಾಗಿ ಸಾಮಾನ್ಯ ಭಕ್ತರ ಮನಸ್ಸಿಗೂ ಒಪ್ಪಿವಾಗುವಂತೆ ಅರುಹಿದ್ದಾಳೆ. ತತ್ವ ಪ್ರತಿಪಾದನೆಯೆಂಬ ಕಠಿಣವಾದ ವಿಷಯವನ್ನು ಸುಲಭಗ್ರಾಹ್ಯ ರೂಪಕಗಳ ಮೂಲಕ ಸರಳೀಕೃತಗೊಳಿಸಿ ಭಕ್ತರು ಗೊಂದಲದಿಂದ ಮುಕ್ತರಾಗಲು ಸಹಕಾರಿ. ವಿಶಿಷ್ಟವಾದ ದ್ವೈತ ಸಿದ್ಧಾಂತದ ಅನುಸರಣೆಯಿಂದ ಸಾಮಾನ್ಯರೆಲ್ಲರೂ ಭಕ್ತಿಯ ಮೂಲಕ ಭಗವಂತನೆಡೆಗೆ ಸಾಗುವ, ಭಗವದ್ ಸಾಮೀಪ್ಯ ಸೇರುವ ಮಾರ್ಗವನ್ನು ಅವ್ವನವರು ನಿರೂಪಿಸಿರುವರು.

''ಖೂಳ ದೈತ್ಯರ ಚರಿಯ ತಾಳಲಾರದೆ
ಭೂದೇವಿ ಹೇಳಿದಾಳಾಗ, ಹರಿಗ್ಹೋಗಿ
ಹೇಳಿದಾಳಾಗ ಹರಿಗ್ಹೋಗಿ ರಮಿಯರಸು
ಕೇಳಿದ ಪರಮ ಹರುಷದಿ''

ಭೂಮಿಯಲ್ಲಿ ನಡೆಯುವ ಹಿಂಸೆಗಳು, ಧಾರ್ಮಿಕ ಸಂಗತಿಯಲ್ಲಿ ಬರುವ ಭಿನ್ನಾಭಿಪ್ರಾಯ ಗಳೆಲ್ಲವನ್ನು ಶ್ರೀಹರಿಯು ಪರಿಹರಿಸುವನೆಂದಿದ್ದಾರೆ. ನಂಬಿದ ಭಕ್ತರ ಮನೋಭಿಲಾಷೆಗಳು ಹರಿಭಕ್ತಿಯ ಮೂಲಕ ಸಾಧಿತವಾಗುವುದೆಂದು ಹೇಳುತ್ತಾರೆ. ಅದರೊಡನೆ ಅವ್ವನವರು ತಮ್ಮ ಕಾಲದಲ್ಲಿ ನಡೆದ ಸಾಮಾಜಿಕ ಸಂಘರ್ಷವನ್ನು ಉಲ್ಲೇಖಿಸಿರುವುದು ಗಲಗಲಿಯ ಅವ್ವನವರ ವೈಚಾರಿಕ ವಿಶೇಷವೆಂದು ಹೇಳಬಹುದು. ಸಾಮಾಜಿಕವಾಗಿ ಹರಿದಾಸ ಸಾಹಿತ್ಯವು ತನ್ನದೇ ಆದ ಒಳನೋಟಗಳಿಂದ ವಿಚಾರ ಮಂಥನ ನಡೆಸಿರುವುದು. ಲೋಕನೀತಿ, ನೀತಿಬೋಧೆ, ತತ್ತ್ವವಿಚಾರ, ಸಮಾಜ ವಿಮರ್ಶೆ ಎಂದು ಮುಂತಾಗಿ ಗುರುತಿಸಬಹುದು. ಬಹುತೇಕ ಎಲ್ಲಾ ಹರಿದಾಸರು ಸಮಾಜದ ಒಡನಾಟದೊಂದಿಗೆ ತಮ್ಮದೇ ಆದ ನೇರ, ಖಂಡನಾ ರೀತಿಯಲ್ಲಿ ವಿಸ್ತರಿಸಿ ಹೇಳಿದ್ದಾರೆ.

ಭಕ್ತಿಯ ಸಾಧನೆಯಲ್ಲಿ ಹರಿ ಸರ್ವೋತ್ತಮತೆಯನ್ನು ಸಾರುತ್ತಾ ಹರಿದಾಸರು ಸಾಮಾಜಿಕವಾಗಿ ಆತ್ಮೋದ್ಧಾರದತ್ತವೂ ತಮ್ಮ ಗಮನಹರಿಸಿದ್ದಾರೆ. ಸಾಮಾನ್ಯ ಜನರ ಕಷ್ಟಕೋಟಲೆಗಳನ್ನು ನಿವಾರಿಸಲು ಹರಿಸ್ಮರಣೆಗೆ ಮನಸ್ಸು ಕೊಡುವಂತೆ ಉಪದೇಶಿಸಿದ್ದಾರೆ.

"ಶ್ರೀಪಾದರಾಜರು ಹೇಳುವಂತೆ, ಈ ಸಂಸಾರ ಸುಖವನ್ನು ನೆಚ್ಚಿ ಕೆಡಬ್ಯಾಡಿ, ಈ ಸಂಸಾರ ಅನೇಕ ಬೇಕು ಬೇಡಗಳ ಕಂತೆ. ಇಲ್ಲಿ ಸುಖ ದುಃಖಗಳೆರಡೂ ಇವೆ. ಜೀವನದಲ್ಲಿ ಸುಖದುಃಖಗಳೆರಡೂ ಇವೆ. ಜೀವನದಲ್ಲಿ ಸುಖ ದುಃಖಗಳೆರಡು ಹಗಲು ರಾತ್ರಿಗಳಂತೆ, ಕತ್ತಲೆ ಬೆಳದಿಂಗಳುಗಳಂತೆ. ಇವು ಸತ್ಯಸಂಧರಾದ ಧರ್ಮರಾಯ, ಹರಿಶ್ಚಂದ್ರರಾಜರನ್ನೇ ಬಿಟ್ಟಿದ್ದಿಲ್ಲ. ರಾಜೋಚಿತ ವೈಭೋಗಗಳಲ್ಲಿ ಮೆರೆಯುತ್ತಿದ್ದ ಅವರನ್ನು ಕಷ್ಟಗಳು ಬೆನ್ನತ್ತಿ ಬಂದವು. ರಾಜಕುಮಾರಿಯಾದ ಪಾಂಡವರ ಪತ್ನಿ ದ್ರೌಪದಿಯು ವಿರಾಟರಾಯನ ಅರಮನೆಯಲ್ಲಿ ತೊತ್ತಾಗಿ ದುಡಿಯಬೇಕಾಯಿತು. ಸಾಕ್ಷಾತ್ ಶ್ರೀಕೃಷ್ಣನೇ ಅರ್ಜುನನ ಬಂಡಿಗೆ ಸಾರಥಿಯಾದನೆಂದ ಮೇಲೆ ಉಳಿದವರ ಪಾಡೇನು? ಎಂದು ಅಂತಹ ಮಹಾನ್ ವ್ಯಕ್ತಿಗಳು ಎದುರಿಸಿದ ಕಷ್ಟ ಪರಂಪರೆಗಳನ್ನು ವಿವರಿಸುವ ಮೂಲಕ ಜನರು ತಮ್ಮ ಕಷ್ಟವನ್ನು ಸಹಿಸಿಕೊಳ್ಳುವ ಹಾಗೆ ಅವರ ಮನಸ್ಸನ್ನು ಹದಗೊಳಿಸಿದರು. ಈ ನಶ್ವರ ಸಂಸಾರದ ಬಗ್ಗೆ ಹೆಚ್ಚಿನ ವ್ಯಾಮೋಹ ಬೇಡವೆಂದು ಎಚ್ಚರಿಸಿದರು.

ಅವರ ಅಭಿಪ್ರಾಯದಂತೆ ಸಂಸಾರ ಬದುಕಿನಲ್ಲಿ ಬಂಧುಗಳು ಹೀಗೆ ವರ್ತಿಸುವರು ಎಂಬುದನ್ನು, ಹೀಗೆಂದು ಹೇಳುವರು.

> "ಉಂಟಾದ ಕಾಲಕ್ಕೆ ನೆಂಟರು ಇಷ್ಟರು
> ಬಂಟರಾಗಿ ಬಾಗಿಲ ಕಾಯ್ವರು
> ಉಂಟಾದತನ ತಪ್ಪಿ ಬಡತನ ಬಂದರೆ
> ಒಂಟೆಯಂತೆ ಗೋಣ ಮೇಲೆತ್ತುವರು
> ಉಂಬಾಗ ಉಡುವಾಗ ಕೊಂಬಾಗ ಕೊಡುವಾಗ
> ಬೆಂಬಲದಲ್ಲಿ ನಲಿಯುತಿಹರು
> ಬೆಂಬಲತನ ತಪ್ಪಿ ಬಡತನ ಬಂದರೆ
> ಇಂಬು ನಿನಗಿಲ್ಲ ನಡೆಯೆಂಬರು"

ಇದು ಲೋಕ ನೀತಿ. ಜೇಬು ತುಂಬಿದವರೊಡನೆ ಉಳಿಯುವ ನೆಂಟರು, ಖಾಲಿ ಜೇಬುವುಳ್ಳವರನ್ನು ಕೇಳುವರಾರು? ಮೂರು ದಿನದ ಈ ಭಾಗ್ಯ ಶಾಶ್ವತವಲ್ಲ. ಕಷ್ಟನಷ್ಟಗಳ ಪೆಟ್ಟುಬಿದ್ದು ಸಾಕಷ್ಟು ಹೈರಾಣದ ಮೇಲೆ ಮನುಷ್ಯನಿಗೆ ದೇವರತ್ತ ಮನುಷ್ಯ ತಡವರಿಸುವುದು. ಅನಂತರ ದೇವರೇ ತಮ್ಮ ಕಷ್ಟಕಾಲದಲ್ಲಿ ಬೆಂಬಲಿಸುವ ಶಕ್ತಿಯೆಂದು ನಂಬಿರುವರು. ಆದರೆ ತನ್ನ ಹಾಗೂ ಸಮಾಜದ ಇತರರ ಅನುಭವಗಳಿಂದ ಸಾಕಷ್ಟು ಪೆಟ್ಟು ಬೀಳುವ ಮುನ್ನವೇ ಅದನ್ನರಿತು, ವಿವೇಕದಿಂದ ಬಾಳುವುದು ವಿಹಿತವೆಂಬುದು ಲೋಕಕ್ಕೆ ಶ್ರೀಪಾದರಾಜರ ಕಿವಿ ಮಾತು."[೨೨]

ಪುರಂದರದಾಸರು ಕೂಡ ಸಮಾಜದಲ್ಲಿ ಜನರ ನೀತಿಗೆಟ್ಟ ನಡವಳಿಕೆಯನ್ನು ಕಟುವಾಗಿ ಟೀಕಿಸಿದ್ದಾರೆ. ಮುಕ್ತಿ ಸಾಧನೆಗೆ ಯಾವ ಜಾತಿ ಮತ ಭೇದವಿಲ್ಲ. ಸ್ತ್ರೀ ಪುರುಷವೆಂಬ ವಾದವಿಲ್ಲ. ಉತ್ತಮ ನಡವಳಿಕೆಯುಳ್ಳವರೆಲ್ಲರೂ ಇದಕ್ಕೆ ಅರ್ಹರು. ಆದುದರಿಂದಲೆ ''ಪುರಂದರದಾಸರು 'ಹೊಲೆಯನಾರು ಊರ ಹೊರಗಿರುವವನೆ ಹೊಲೆಯ?' ಅಲ್ಲ, ಅಲ್ಲ ಎಂದು ಸಾರಿದರು. ಹೊಲೆಯನಾರೆಂಬುದನ್ನು ಆತನ ನಡತೆಯ ಮೇಲೆ ನಿಷ್ಕರ್ಷಿಸಿದರು. ಸಮಾಜದಲ್ಲಿನ ಸಾಮಾನ್ಯ ಜನ ಹುಟ್ಟಿನಿಂದ ಹಣೆ ಪಟ್ಟಿ ಕಟ್ಟಿ ಊರ ಹೊರಗಿರಿಸಿದ ಮಾತ್ರಕ್ಕೆ ಆತ ಹೊಲೆಯನಾಗಲಾರ ಎಂಬುದಾಗಿ ತಿಳಿ ಹೇಳಿದರು. ಊರ ಹೊರಗಿರುವವ ಉತ್ತಮ ನಡವಳಿಕೆಯುಳ್ಳವನಾಗಿದ್ದರೇ ಆತನೇ ಯೋಗ್ಯ, ಊರೊಳಗಿದ್ದವರು ಹುಟ್ಟಿನಿಂದ ಉತ್ತಮನೆಂದು ಪರಿಗಣಿತನಾಗಿದ್ದರೂ ಆತನ ಕೀಳು ನಡತೆಯಿಂದ ಕೂಡಿದ್ದರೇ ಆತನೇ ಅಧಮ ಎಂದರು. ಇದು ಬಹು ಜನಪ್ರಿಯ ಲೌಕಿಕ ಸತ್ಯವೆಂದು ಯಾರಾದರೂ ಒಪ್ಪಬೇಕಾಗುತ್ತವೆ. ಕುದೃಷ್ಟಿಯ ಅಂದಾನುಕರಣೆಯ ಮೂಢಜನ ಮಾತ್ರ ತಿರಸ್ಕರಿಸಬಹುದು. ವಿಷಯಾಸಕ್ತಿಯಿಂದ ತುಂಬಿದವನು. ಅರ್ಥಹೀನ ಸಂಪ್ರದಾಯದಿಂದ ಕೂಡಿದವನು ಅರ್ಥವಿಲ್ಲದ ಮೂಢ ನಂಬಿಕೆಗಳಲ್ಲಿ ಆಸಕ್ತನಾದವನೂ ಅನೈತಿಕತೆಗೆ ಆಗರವಾದವನೂ ಕೀಳು ಮಾನವನಾಗುತ್ತಾನೆಯೇ ಹೊರತು ಹುಟ್ಟಿನಿಂದ ಅಲ್ಲ ಎಂಬುದನ್ನು ದಾಸರು ಮನಗಾಣಿಸಿದ್ದಾರೆ.''[೨೮]

ಹರಿದಾಸ ಸಾಹಿತ್ಯವು ತನ್ನ ಪಾವಿತ್ರ್ಯವನ್ನು ಭಕ್ತಿಯಲ್ಲಿ ನೆಲೆಗೊಳಿಸಿರುವುದು. ಭಕ್ತಿ ಪ್ರಧಾನವಾದ ಹರಿದಾಸ ಸಾಹಿತ್ಯವು ಮಾನವನ ಬದುಕಿನ ಎಲ್ಲ ಕಷ್ಟ ಪರಂಪರೆಗಳ ನಿವಾರಣೆಗೆ ದೈವಭಕ್ತಿಯೊಂದೇ ಸಾಧನವೆಂಬುದು ಎಲ್ಲಾ ಹರಿದಾಸರ ಅಭಿಪ್ರಾಯವಾಗಿದೆ. ಆದುದರಿಂದಲೇ ಅವ್ವನವರು ಕೂಡ ತಮ್ಮ ಹಾಡುಗಳಲ್ಲಿ ಹರಿಕಾರುಣ್ಯ ಬೇಡಿ ಅದರಿಂದ ಲೌಕಿಕ ಬದುಕಿನ ಕಷ್ಟ ನಿವಾರಣೆ ಸಾಧ್ಯ ಎಂಬುದನ್ನು ಅವ್ವನವರು ಕೂಡ ಪುನರುಚ್ಚರಿಸಿದ್ದಾರೆ. ಅವರು ತಮ್ಮ ಕಾಲದಲ್ಲಿ ನಡೆದ ಸಾಮಾಜಿಕ ಸಂಘರ್ಷವನ್ನು ಅತ್ಯಂತ ಸೂಕ್ಷ್ಮವಾಗಿ, ನೇರವಾಗಿ ಟೀಕಿಸಿದ್ದಾರೆ. ಅಂದು ಸಾಮಾಜಿಕವಾಗಿ ವರ್ಗಭೇದದ ಅತಿಯಾದ ಅಹಂಕಾರದಿಂದ ನಡೆದುಕೊಳ್ಳುವ ಜನರ ವರ್ಗಭೇದದ ವಿರುದ್ಧ ಅವ್ವ ತಮ್ಮದೇ ಆದ ರೀತಿಯಲ್ಲಿ ವಿರೋಧಿಸಿದ್ದಾಳೆ.

ಸುಭದ್ರೆ ದ್ರೌಪದಿಯವರು 'ಮುಯ್ಯ'ವನ್ನು ಅತ್ತಿಗೆಯರಿಗಾಗಿ ತಂದಾಗ, ಮುಯ್ಯ ಸ್ವೀಕರಿಸಲು ಮನೆಯಿಂದ ಹೊರಗೆ ಬರದ ಅತ್ತಿಗೆಯರ ಕಂಡು ಸುಭದ್ರೆ ದ್ರೌಪದಿಯರ ಅನಿಸಿಕೆಯಲ್ಲಿ ವ್ಯಕ್ತಪಡಿಸುವುದು ಹೀಗೆ

''ಹಿರಿಯ ಅತ್ತಿಗೆಯರ ಗರುವು ಕಂಡೆವೆ
ಮೇರು ಗಿರಿಗಿಂತ ಕೋಟಿ ಅಧಿಕವೆ ಸಖಿಯೆ
ನಾ ಹ್ಯಾಂಗ ಸುಮ್ಮನಿರಲಿ''

ಅದಕ್ಕೆ ಉತ್ತರವಾಗಿ ರುಕ್ಮಿಣಿಯು ಸುಭದ್ರೆಗೆ ಕೊಡುವ ಪ್ರತ್ಯುತ್ತರವು,

"ಓಡಿ ಬಂದವಳೆಂದು ಆಡಿದೆ ನೀ ಎನಗೆ
ತಿರುಗಿ ಆಡಿದಲ್ಲೆ ಏನೂ ಹುರುಳಿಲ್ಲ ಎಲೆ ನೋಡ
ತಿರುಗಿ ಆಡಿದಲ್ಲೆ ಏನೂ ಹುರುಳಿಲ್ಲ ಸುಭದ್ರ ನೋಡಿಕೋ
ನಿನ ಮನದಲ್ಲೆ ಎಲ್ಲ ನೋಡೆ"

ಎಂದು ಅವ್ವನವರು ಅತ್ತಿಗೆ, ನಾದಿನಿಯರ ಮಾತುಗಳಲ್ಲಿ ಅರಸರ, ಜನಸಾಮಾನ್ಯರ ನಡುವಿನ ಅಂತರವನ್ನು ತೀಕ್ಷ್ಣವಾಗಿ ವಿವರಿಸಿದ್ದಾರೆ. ಅದರಂತೆ, ಅಂದು ಸಾಮಾಜಿಕವಾಗಿ ಅರಸರಿಗೂ, ಸಾಮಾನ್ಯರಿಗೂ ನಡುವೆ ಇದ್ದ ಬಹುದೊಡ್ಡ ಅಂತರವನ್ನು ತಮ್ಮದೇ ಧಾಟಿಯಲ್ಲಿ ವಿಸ್ತರಿಸಿರುವುದು ಹೀಗೆ.

ಶ್ರೀಕೃಷ್ಣನನ್ನು ಹರಿದಾಸರು ತಮ್ಮ ಆರಾಧ್ಯ ದೈವವಾಗಿಸಿಕೊಂಡು ಭಕ್ತಿಪಾರಮ್ಯವನ್ನು ಮೆರೆದಿದ್ದಾರೆ. ಅಂತೆಯೇ ಅವ್ವನವರು ಭಕ್ತಿಯ ಮುಡಿಪು ಕೃಷ್ಣನಿಗಾದರೂ, ಕೃಷ್ಣ ದನಕಾಯುವ ಸಾಮಾನ್ಯನೆಂದು ಭಾವಿಸಿ, ಒಪ್ಪಿ ಕೃಷ್ಣನ ವ್ಯಕ್ತಿತ್ವವನ್ನು ಹಿಡಿದಿಡುವಾಗ ವರ್ಗಸಂಘರ್ಷದ ಸೂಕ್ಷ್ಮ ಎಳೆಗಳನ್ನು ಗುರುತಿಸ ಬಹುದಾಗಿದೆ.

"ಯಾಕೊ ಪಾರ್ಥನ ಹೆಸರು ಹೋಕೆ ಮಾತಿನ ಕೃಷ್ಣ
ಸಾಕು ನೀ ನಮ್ಮ ಸರಿಯೇನೊ ಕೋಲ
ಸಾಕು ನೀನಮ್ಮ ಸರಿಯೇನೊ ಬಲಿಯ ಮನೆಯ
ಬಾಗಿಲ ಕಾಯ್ದು ಬದುಕಿದಿ ಕೋಲ ||ಪ||
ಚಿಕ್ಕಂದಿನಾರಭ್ಯ ವತ್ಸಗಳನೆ ಕಾಯ್ದು
ತುಚ್ಛನಾಗಿದ್ಯೋ ಜನರೊಳು
ತುಚ್ಛನಾಗಿದ್ಯೊ ಜನರೊಳು ರುಕ್ಮಿಣಿಯ
ಕೂಡಿ ಹೆಚ್ಚಿನವನೆಂದು ಹೆಸರಾದ್ಯೊ ಕೋಲ"
ಒಡಲಿಗಿಲ್ಲದೆ ಹೋಗಿ ತುಡುಗತನವ ಮಾಡಿ
ಗಡಗಿ ಸಂದಿಯಲಿ ಅಡಗಿದ್ಯೋ
ಗಡಗಿ ಸಂದಿಯಲಿ ಅಡಗಿದ್ಯೋ ಕೃಷ್ಣ
ನಿನಗೆ ಬಡಿವಾರ ಬಂದ ಬಗಿ ಹೇಳೊ ಕೋಲ
ಹೆಂಡಿರ ಪುಣ್ಯದಿಂದ ಕಂಡೆಯಾ ಈ ಭಾಗ್ಯವ
ಪಾಂಡಿತ್ಯವೆಲ್ಲೊ ಬಲವೆಲ್ಲೊ
ಪಾಂಡಿತ್ಯವೆಲ್ಲೊ ಬಲವೆಲ್ಲೊ ಕೃಷ್ಣ ನಿನ್ನ
ಪಂಡಿತರು ಕೇಳೋ ಹುಸಿಯಲ್ಲ ಕೋಲ"[೫೫]

ಕೃಷ್ಣನನ್ನು ಜರೆಯುತ್ತಿರುವ ಈ ಹಾಡುಗಳಲ್ಲಿ ಸಾಮಾನ್ಯ ಜನರನ್ನು ಕಂಡು ಮೇಲ್ವರ್ಗದ ಅರಸರಿಗಿರುವ ತಾತ್ಸರ ವ್ಯಕ್ತವಾಗುತ್ತದೆ. ಕೃಷ್ಣನು, ರಾಜರಿಗಿರುವ ಅಹಂಕಾರವನ್ನು ಒಣ ಹೆಮ್ಮೆಯನ್ನು ನಿರಾಕರಿಸುತ್ತಾ, ಸಾಮಾನ್ಯರ ಪ್ರತಿನಿಧಿಯಾಗಿ ಅರಸರ ಮೇಲ್ವರ್ಗ ಬಡಿವಾರವನ್ನು, ಡಂಬಾಚಾರವನ್ನು ತೀಕ್ಷ್ಣವಾಗಿ ಜರೆದಿರುವುದು ಹೀಗೆ,

``ಏನಲೋ ಅರ್ಜುನ ಈ ನುಡಿನಿನಗ್ಯಾಕೋ
ನೀನು ನಿಮ್ಮವಳು ತಿರು ತಿರುಗಿ
ನೀನು ನಿಮ್ಮವಳು ತಿರು ತಿರುಗಿ ಮಾರಿದರೆ
ಕಾಣಿಯ ಬೆಲೆ ಹೋಲಲಾರೆ
ನಿಮ್ಮವರ ಬಡಿವಾರ ಬೊಮ್ಮೆ ವರ್ಣಿಸಲಾರ
ಹೆಮ್ಮಿ ನೋಡಿದರೆ ವಿಪರೀತ
ಹೆಮ್ಮಿ ನೋಡಿದರೆ ವಿಪರೀತ ಎಲೊ ಪಾರ್ಥ
ಸುಮ್ಮನೆ ಯಾಕೆ ಮುನಿಸಾಗಿ
ಕೇಳಿ ನಿಮ್ಮದರ ಕೀರ್ತಿ ಭಾಳೆ
ವಿಸ್ತಾರವಾಗಿ ಹೇಳಲು ಲಜ್ಜೆ ಬರತದೆ
ಹೇಳಲು ಲಜ್ಜೆ ಬರತದೆ ನಮ್ಮ
ಅಮ್ಮನ ತಾಳುವಿಕೆಯಿಂದ ಉಳಿದಾರೊ''[೩೦]

ಎಂದು ಕೃಷ್ಣನು ನುಡಿಯುವ ಮಾತುಗಳಲ್ಲಿ ಅರಸರ ಬಗ್ಗೆ ಸಾಮಾನ್ಯ ಜನರು ತಾಳಿರುವ ಮನೋಭಿಪ್ರಾಯ ವನ್ನು ಅಪ್ಪ ಬಹುಸ್ವಾರಸ್ಯಕರವಾಗಿ ಹಿಡಿದಿಟ್ಟಿದ್ದಾಳೆ. ಅದರಂತೆಯೇ ಅರಸರಿಗೆ ಸಾಮಾನ್ಯ ಜನರ ಬಗ್ಗೆಯೂ ತಾತ್ಸಾರವಿದ್ದುದನ್ನು ಅಪ್ಪನವರು ಪಾರ್ಥನ ಮಾತುಗಳಲ್ಲಿ ಪ್ರಸ್ತಾಪಿಸುವುದು ಹೀಗೆ,

``ದೊರೆತನ ಹೇಳಿಕೊಂಬೆ ಸಾಕೊ ರಂಗಯ್ಯ
ನಿನ್ನ ಕರಕರ ಕಲ್ಲು ತಿಂಬೊ ಸಿಟ್ಟು ಕೃಷ್ಣಯ್ಯ
ಬಿರುಗಣ್ಣು ಬಿಡವ್ಯೋದ್ಯಾಕಿಷ್ಟು ರಂಗಯ್ಯ
ನಿನ್ನ ಉರಿಮಾರಿಗೆ ಅಂಜೊರೆಲ್ಲೊ ಅಷ್ಟು
ಧರೆ ಮ್ಯಾಲೆ ರಾಜ್ಯ ಹ್ಯಾಂಗ ರಂಗಯ್ಯ
ನಿನ್ನ ತಗಿ ತಗಿ ಬಲು ಲೀಲಾ ಕೈಯ್ಯ ಕೃಷ್ಣಯ್ಯ
ಸುಗುಣನೆಂಬೊ ಮತಿಯಾದುದಕ್ಕೆ
ಜನರು ನಗದೆ ಸೈ ಸೈ ಎಂದಾರು ಬರಿಯ ಕೃಷ್ಣಯ್ಯ''[೩೧]

ಎಂದು ಪಾರ್ಥನ ಮಾತುಗಳಲ್ಲಿ ಕೃಷ್ಣನ ದಶಾವತಾರಗಳನ್ನು ವರ್ಣಿಸುತ್ತಾ, ಅಷ್ಟು ಅವತಾರಗಳಲ್ಲಿ ಭಕ್ತರು ಆರಾಧಿಸುವ ರೂಪಾವತಾರಗಳ ಅವಾಂತರದ ವಿವರಣೆಯಿದೆ. ಕೃಷ್ಣ ಭಕ್ತಿಯಲ್ಲಿ ಮೈಮರೆಯದೆ, ಬದುಕಿನಲ್ಲಿ ಬರುವ ಸಂದರ್ಭಗಳಿಗನುಸಾರವಾಗಿ ದೇವರು ಕೂಡ ಅವತಾರಗಳನ್ನೆತ್ತುವುದು, ಆನಂತರವೇ ಸಮಸ್ಯೆಯ ಮೂಲವನ್ನು ತಿಳಿದು, ಪರಿಹರಿಸುವ ರೀತಿಯಲ್ಲಿ ಪಡೆಯುವ ರೂಪಾಂತರಗಳಿವು ಎಂಬುದು ಅವ್ವನವರ ಮಾತುಗಳಲ್ಲಿ ವ್ಯಕ್ತವಾಗಿರುವುದು. ಕೃಷ್ಣನು ಜನಸಾಮಾನ್ಯರ ಪ್ರತಿನಿಧಿಯಂತೆ ರೂಪಿಸಿದ್ದು ಅರಸು ವರ್ಗವನ್ನು ಸಂಕೇತಿಸುವ ಅರ್ಜುನ, ಇನ್ನಿತರ ಸಹೋದರರ ನಡವಳಿಕೆಗಳನ್ನು ಸೂಚಿಸಿರುವುದು ವರ್ಗ ತಾರತಮ್ಯವನ್ನು ವಿಂಗಡಿಸಿ ಅಲ್ಲಿನ ಸಂಘರ್ಷವನ್ನು ಕೃಷ್ಣಾರ್ಜುನರ ಮಾತುಗಳಲ್ಲಿ ವಿಸ್ತಾರವಾಗಿ ವಾದ-ವಿವಾದಗಳಲ್ಲಿ ಬೆಳೆಸಿರುವುದು ಸಮಾಜದ ಕೈಗನ್ನಡಿಯಂತಿದೆ.

ಅವ್ವನವರು ಬಹಳ ಮುಖ್ಯವಾಗಿ ಯಾದವರ ಕೇಂದ್ರಬಿಂದು 'ಕೃಷ್ಣ'ನನ್ನು ಆರಾಧಿಸುವ ಸಮಸ್ತ ಜನರ ಮೇಲೆ ಬೀರುವ ಪ್ರಭಾವವನ್ನು ಬಹಳ ಸುಂದರವಾಗಿ ಹಾಡೊಂದರಲ್ಲಿ ಕಟ್ಟಿಕೊಟ್ಟಿದ್ದಾರೆ.

''ನಿಲ್ಲಿಸಬೇಕೊ ಯಾದವರ ಹೊಲ್ಲಗುಣದವರ
ನಿಲ್ಲಿಸಬೇಕೊ ಇವರ ಬಿಲ್ಲಿಗೆ ಅಂಜದವರ
ಗೊಲ್ಲರು ನಮ್ಮ ಸರಿಅಲ್ಲವೊ ಧರ್ಮರಾಯ
ಒಡೆಯ ಧರ್ಮನು ಹರಿಯ ಅಡಿಗೆರಗುವನೆಂದ
ನಡೆದು ಹೋಗಲು ರಾಯ ತಡೆಯಬೇಕೆಂದ ಭೀಮ
ಕಂಜನಾಭನ ಮನೆಯ ಎಂಜಲು ಬಳೆವವನ
ರಂಜಿಸಿ ಕರೆಯಬ್ಯಾಡ ಅಂಜಿಕೆ ಏನು ಅವನ
ಪಾರ್ಥನು ರಾಯಗೆ ಪ್ರಾರ್ಥಿಸಿ ಹೇಳಿಕೊಂಡ
ಸಾರಥಿಯ ಕರೆಯೋದು ಕೀರ್ತಿ ಅಲ್ಲವೊ ರಾಯ
ನಕುಲನು ರಾಯ ಯುಕ್ತಿಲೆ ಹೇಳಿಕೊಂಡ
ಸಖನಯ್ಯನ ಕುಶಲವು ಮುಖವ ಮಾಡಿದವನಲ್ಲವೊ
ಕೇಳಯ್ಯ ರಮಿಲರಸು ಗಾಳಿಸಿ ಬಯಸಿಕೊಂಡ
ಬಹಳ ಮನ್ನಿಸಬ್ಯಾಡ ಹೇಳಿಕೊಂಡ ಸಹದೇವ''[೨]

ಪಾಂಡವರು ಮತ್ತು ಕೃಷ್ಣ ಪರಿವಾರವಾದ ಯಾದವರೊಡನೆ ನಡೆದ ವಾಗ್ಯದ್ಧವಿದು. ಕೃಷ್ಣಾವತಾರದಲ್ಲಿ ಅಪಾರ ನಂಬಿಕೆಯಿರುವ ಪಾಂಡವರು ತಮ್ಮ ರಾಜ್ಯಪದವಿ ಪಡೆದ ಬಳಿಕ ಕೃಷ್ಣನೊಡನೆ ನಡೆದು ಕೊಳ್ಳುವ ರೀತಿಯನ್ನಿಲ್ಲಿ ನೋಡಬಹುದು. ಆದರೆ ಅವ್ವ, ಇಲ್ಲಿ ರಾಜರು ಮತ್ತು ಯಾದವರ ನಡುವಿನ ಸಾಮಾಜಿಕ ಸಂಘರ್ಷವನ್ನು ಸೂಚ್ಯವಾಗಿ ಗಮನಿಸಿರುವಳು.

ಕೃಷ್ಣನನ್ನು ದೈವಾಂಶಸಂಭೂತನೆಂದು ಆರಾಧಿಸುವ ಪಾಂಡವರು ಆತನ ಹುಟ್ಟು, ಬಾಲ್ಯದ ಹಿನ್ನಲೆಯಿಂದ ಗೊಲ್ಲರು, ಅರಸರ ಸಮಾನರೇ ಆಗಲು ಸಾಧ್ಯವಿಲ್ಲವೆಂಬ ತೀರ್ಮಾನವನ್ನಿಲ್ಲಿ ನೋಡಬಹುದು. ರಾಜ ಪದವಿಯಲ್ಲಿರುವವರಿಗಿಂತ ಯಾರೂ ಶ್ರೇಷ್ಠರಾಗಲು ಸಾಧ್ಯವಿಲ್ಲ ಎಂಬುದು ಇಲ್ಲಿನ ಭಾವಸ್ವಾರಸ್ಯ. ಆದರಂತೆಯೇ, ಕೃಷ್ಣನ ಹಿರಿಮೆಯನ್ನು ಬಡಿವಾರವೆಂದೂ ಜರೆಯುವ ಅರಸು ಅಹಂಕಾರವನ್ನಿಲ್ಲಿ ಅವ್ವನವರು ಈ ರೀತಿಯಲ್ಲಿ ವ್ಯಕ್ತಪಡಿಸಿರುವರು.

''ಎಷ್ಟು ಬಡಿವಾರೊ ನಿನ್ನ
ಶ್ರೇಷ್ಠ ಸುಖಪೂರ್ಣ ಘನ್ನ
ಅಷ್ಟ ಗುಣವನು
ಅತಿಗಳದ್ಯೊಯಾದವರನ್ನ''

ಕೃಷ್ಣ ಭಕ್ತಿಗಿಂತಲೂ ಒಂದು ಹೆಜ್ಜೆ ಮುಂದುವರಿದು ಅವ್ವನವರು ಯಾದವರ ದೊರೆಯೆಂದು, ಶ್ರೇಷ್ಠನೆಂದು ಹೊಗಳಿಸಿಕೊಳ್ಳುವ ಕೃಷ್ಣನ ಅಷ್ಟಗುಣಗಳನ್ನು ಬಯಲಿಗೆಳೆಯುವ ಪರಿಯು ಸೊಗಸಾದುದು.

''ಕಡಲಶಾಯಿ ನಿನ್ನ ಬೆಡಗು ಎಷ್ಟು ಹೇಳಲಿ
ಹಿಡಿ ಹಿಡಿದು ಲಾಳಿ ಕೊಡುವಾಗ
ಹಿಡಿ ಹಿಡಿದು ಲಾಳಿ ಕೊಡುವಾಗ ಗೊಲ್ಲರ
ಹುಡುಗರಿಗಿಂತ ಕಡೆಯೇನೊ''

ಕೃಷ್ಣನನ್ನು ಗೊಲ್ಲರ ಹುಡುಗರಿಗಿಂತ ಕಡೆಯೇನೊ ಎನ್ನುವ ಅವ್ವ ದೈವ ಲೀಲೆಯಲ್ಲಿ ಕೃಷ್ಣನಾಟ ಪಾಠಗಳೆಲ್ಲವೂ ಶ್ರೀ ಸಾಮಾನ್ಯನಿಗಿಂತ ಬೇರೆಯಾಗಿರದೆ, ಅನೇಕ ಆರೋಪಗಳನ್ನು ಹೊತ್ತ ಗೊಲ್ಲರ ಪೋರ ಯಾದವೇಂದ್ರನೇ ಕೃಷ್ಣ, ಕರೆದರೆ ಬರುವ, ಹುಡುಗು ಬುದ್ಧಿಯವನು ಎಂದು ಹೇಳುವ ಭಾವವನ್ನು ಗಮನಿಸಿದಾಗ ಅವ್ವನವರು ಕೃಷ್ಣಭಕ್ತಿಯನ್ನು ಮಾನವೀಕರಿಸಿಕೊಂಡ ಬಗೆ ತುಂಬಾ ಅನನ್ಯತೆಯನ್ನು ಪಡೆದುಕೊಂಡಿದೆ.

ಮಹಾಭಾರತದ ಮುಖ್ಯ ಪಾತ್ರಗಳೆಲ್ಲ ಇಲ್ಲಿ ಜೀವ ತುಂಬಿದಂತಿವೆ. ಪಾಂಡವರ ಪತ್ನಿಯರು ರಾಣಿಯರೆಂಬ ಗರ್ವವು, ಕೃಷ್ಣನ ಮಡದಿಯರ ಬಳಿ ಯಾವ ವಾಗ್ವಾದವಾದರೂ ಸರಿಯೇ ಕೃಷ್ಣ ದರ್ಶನ ನಮಗೆ ಪ್ರಿಯವಾದುದೆಂದು, ಮುಖ್ಯವಾದುದೆಂದು ಅತ್ತಿಗೆಯರೊಡನೆ ಪಂಥಾಹ್ವಾನ ನಡೆಸಿ ಶ್ರೇಷ್ಠರೆಂದು ಬೀಗುವರು. ಅತ್ತಿಗೆಯರಾದ ರುಕ್ಮಿಣಿ ಭಾಮೆಯರಿಗೆ, ಭಕ್ತಿಯ ಅರ್ಪಣೆಗೆ ಕೃಷ್ಣ ಒಲಿಯುವನೆಂದೂ ಅನೇಕ ನಿದರ್ಶನಗಳ ಮೂಲಕ ಅರ್ಥಮಾಡಿಸುವರು.

ಹರಿದಾಸ ಸಾಹಿತ್ಯವು ಜನಜೀವನದ ಉದ್ಧಾರಕ್ಕೆ ಮುಖ್ಯ ಉದ್ದೇಶವಾಗಿಸಿಕೊಂಡಿದೆ. ಇಲ್ಲಿ ಧಾರ್ಮಿಕ, ಆಧ್ಯಾತ್ಮಿಕ ಎಂಬುದಷ್ಟೇ ಆಗಿರದೆ, ಸಮಾಜ ನೀತಿ, ಜನರ ಸ್ವಭಾವ, ಅವರಲ್ಲಿ ಅಡಗಿರುವ

ಮನೋದೌರ್ಬಲ್ಯಗಳು, ಲೋಕ ವಿಡಂಬನೆ, ಹಾಸ್ಯ, ವಿರಹ, ಚಮತ್ಕಾರದ ನುಡಿ ಇದರೊಡನೆ ಅವರು ತಿಳಿದಿರುವ ಅನುಭವದ ಮಾತುಗಳು ಸೇರಿ ದಾಸ ಸಾಹಿತ್ಯವು ಕನ್ನಡ ಸಾಹಿತ್ಯದಲ್ಲಿ ಮೌಲ್ಯಧಾರಿತವಾದುದ್ದು ಎನಿಸಿರುವುದು.

"ದಾಸ ಸಾಹಿತ್ಯದ ಇನ್ನೊಂದು ಗಮನಾರ್ಹ ವೈಶಿಷ್ಟ್ಯವೆಂದರೆ ಸಮಾಜದ ಹಾಗೂ ವ್ಯಕ್ತಿಗಳ ಓರೆ-ಕೋರೆಗಳನ್ನು, ವಿವಿಧ ಮಾನವ ದೌರ್ಬಲ್ಯವನ್ನು ಟೀಕಿಸುತ್ತಾ, ಅವುಗಳಿಂದ ಪಾರಾಗಲು ಭಕ್ತಿಯ ಮೊರೆ ಹೋಗಲು ತಿಳಿಸಿರುವುದು. ಹರಿದಾಸರು ಸಮಾಜವನ್ನು ಕುರಿತು ವ್ಯಂಗ್ಯ, ವಿಡಂಬನ, ಹಾಸ್ಯ, ಕಟು ಟೀಕೆ, ನಿಷ್ಠುರನುಡಿಗಳ ಮೂಲಕ ಖಂಡಿಸಿ, ಕುಂದು ಕೊರತೆಗಳನ್ನು ಬಯಲಿಗೆಳೆದಿದ್ದಾರೆ. "ಅನ್ಯಾಯವನ್ನು ಕಡ್ಡಿ ತುಂಡಾಗಿ ಖಂಡಿಸಿದ್ದಾರೆ. ರೂಢಿಯಲ್ಲಿದ್ದ ಎಷ್ಟೋ ದುಷ್ಟ ಸಂಪ್ರದಾಯಗಳನ್ನು ಅಂಧಶ್ರದ್ಧೆ ಡಂಬಾಚಾರ, ಮೂಢನಂಬಿಕೆ, ಆಷಾಢಭೂತಿತನ, ಸೋಗಿನ ಮಡಿವಂತಿಕೆ, ಮೊದಲಾದವುಗಳನ್ನು ಕಟುವಾಗಿ, ವ್ಯಂಗ್ಯವಾಗಿ ಟೀಕಿಸಿ ಅಲ್ಲಗಳೆದಿದ್ದಾರೆ. ಅಂತರಂಗಶುದ್ಧಿ ಹಾಗೂ ಸಾಮಾಜಿಕ ಶುದ್ಧಿ ಜೊತೆ ಜೊತೆಯಲ್ಲಿ ಸಾಗಬೇಕೆಂದು ಉಪದೇಶಿಸಿದ್ದಾರೆ."[೩೩]

ಗಲಗಲಿಯ ಅವ್ವನವರು ವಿಶೇಷವಾಗಿ ಸಾಮಾಜಿಕ ವೈರುಧ್ಯವನ್ನು ಖಂಡಿಸಿ, ತಮ್ಮ ತೀಕ್ಷ್ಣ ಮಾತುಗಳಲ್ಲಿ ವಿವರಿಸಿದ್ದಾರೆ. ದಾಸ ಸಾಹಿತ್ಯ ಭಕ್ತಿ ಪ್ರಧಾನವಾದಂತೆಯೇ ಸಮಾಜೋದ್ಧಾರದತ್ತಲೂ ತನ್ನದೇ ಆದ ಒಳನೋಟಗಳನ್ನು ಹೊಂದಿರುವುದು. ಪೌರಾಣಿಕ ಪಾತ್ರಗಳಲ್ಲಿ ಸಾಮಾಜಿಕ ಸಂಘರ್ಷವನ್ನು ಗುರುತಿಸಿಕೊಂಡಿದ್ದಾರೆ. ಹಾಗೂ ಆಯಾಯ ಕಾಲಕ್ಕೆ ಅನುಸಾರವಾಗಿ ಸಾಮಾಜಿಕ ಸ್ಥಿತಿಯನ್ನು ಓಲೈಸುವ ರಾಜ ತಾಂತ್ರಿಕತೆಯನ್ನು ನಾವು ಕಾಣುತ್ತೇವೆ.

ಒಟ್ಟಾರೆಯಾಗಿ, ರಾಜ ಮತ್ತು ಪ್ರಜೆಗಳ ನಡುವೆ ನಡೆಯುವ 'ನಾ ಹೆಚ್ಚು ತಾ ಹೆಚ್ಚು ಎಂಬಂತಹ ಸಂವಾದಗಳನ್ನು ಒಳಗೊಂಡು, ತಮ್ಮದೇ ಆದ ವೈಚಾರಿಕ ದೃಷ್ಟಿಯನ್ನಿಲ್ಲಿ ತೋರಿರುವುದು ವೈಶಿಷ್ಟ್ಯ ವಾಗಿರುವುದು.

"ಹಲವು ರಾಯರು ಹಲವು ಯಾದವರು
ಬಲು ಸೊಗಸಿಲೆ ಬಂದು ಕುಳಿತಾರೆ ಅವರು
ಹಲಧರನ ಹತ್ತಿರ ರಾಮೇಶನವರು
ಜಲಜಾಕ್ಷನ ನೋಡುತಲೊಪ್ಪುತಿಹರು"

ಕೃಷ್ಣನೊಡನೆ ಪಾಂಡವರು ಸೇರಿಕೊಂಡಾಗ, ಹಲವು ಯಾದವರು ಪಾಂಡವರ ರಾಜಸಭೆಯಲ್ಲಿ ಕುಳಿತುಕೊಳ್ಳುವ ಅವಕಾಶವನ್ನು ಅವ್ವ ಅತ್ಯಂತ ಅರ್ಥಪೂರ್ಣವಾಗಿ ವರ್ಣಿಸಿರುವುದು. ಕೃಷ್ಣನ ದಯೆಯಿಂದ ಪಾಂಡವರಿಗೆ ರಾಜ್ಯಪ್ರಾಪ್ತಿಯಾದುದ್ದು, ಕೃಷ್ಣನೊಡನೆ ಬರುವ ಯಾದವರು ಸಹ ಪಾಂಡವರ ಸಭಾ

ಮರ್ಯಾದೆಗೆ ಒಳಪಡುವುದನ್ನು ಇಲ್ಲಿ ಗಮನಿಸಬಹುದು. ಅವ್ವ, ಕಾವ್ಯದಲ್ಲಿ ಧಾರ್ಮಿಕ, ಸಾಮಾಜಿಕ ಹಾಗೂ ಅಧ್ಯಾತ್ಮಿಕತೆಯನ್ನು ಸೇರಿಸಿರುವಳು.

"ಹುಟ್ಟು ಹೊಂದೊದೆಂಬೋದಿವರ
ಬಿಟ್ಟು ಕಡೆಗೆ ಮಾಡಿಸಿ ನಾವು
ಶ್ರೀಕೃಷ್ಣನಂಘ್ರಿ ಕಮಲವನ್ನು
ಎಷ್ಟು ದಯದಿ ತೋರಿಸಿ"

"ಅಷ್ಟಮದದ ತಮವು ಎಂಬೊ
ಕುಟ್ಟಿ ಹಿಟ್ಟು ಮಾಡಿಸಿ ನಾವು
ಸಿಟ್ಟು ಕೋಪವೆಂಬೊ ಬಣವಿ ಬಟ್ಟಿ
ಕೆಂಡ ಹೇರಿಸಿ ನಾವು
ಸತ್ವರಜತಮವು ಎಂಬೊ
ಕತ್ತಲೆಯ ಅಡಗಿಸಿ ನಾವು
ಮತ್ತೆ ಜ್ಞಾನ ಸೂರ್ಯನ
ಪ್ರಶಸ್ತ ಉದಯ ಮಾಡಿಸಿ
ನೀತಿ ತಪ್ಪಿದ ಬಾಲೆಯರ
ಭೂತ ಹೊರಗೆ ಹೊರಡಿಸಿ ನಾವು
ಮಾತ್ರಗಳೆಂಬೊ ಇವರ
ಗಾತ್ರ ಬಿಟ್ಟು ದೂರ ಇಡಿಸಿ
ಸಂಚಿತಗಾಮಿಯು ಇವರ
ಕಿಂಚಿತುಳಿಯದಲೆ ಹಾರಿಸಿ ನಾವು
ಪಂಚ ಪಾಂಡವರ ಮಡದಿ
ಪಾಂಚಾಲಿಯ ನಾಚಿಸಿ
ದಶೇಂದ್ರಿಯಗಳೆಂಬೊ ಕುದುರೆಗಳ
ದಶ ದಿಕ್ಕಿಗೆ ಓಡಿಸಿ ನಾವು
ಮುಸುಕು ಹಾಕಿದ ಅಂಗವನು
ಕೊಸರಿ ಕೊಸರಿ ಝಾಡಿಸಿ"[೩೪]

ಅವ್ವನವರು ಇಲ್ಲಿ ಅಷ್ಟಮದಗಳನ್ನು ಹೊಂದಿದವರು ಭಕ್ತಿಯನ್ನುಳ್ಳವುದು ಅತಿ ಕಷ್ಟಸಾಧ್ಯವಾದುದು. ಮಾನವರು ತಮ್ಮೊಳಗೆ ಅಡಗಿರುವ ಸತ್ವ, ರಜ, ತಮಗಳೆಂಬ ಅಜ್ಞಾನದ ಕತ್ತಲೆಯನ್ನು ಅಡಗಿಸಿಡಲು

ಜ್ಞಾನ ಸೂರ್ಯ ಉದಯವಾಗಲು ಪ್ರಶಸ್ತವಾದುದೇ ಹರಿಭಕ್ತಿ ಎಂಬುದು ಅವರ ದೃಢನಂಬಿಕೆಯಾಗಿದೆ. ಕಡೆಯಲ್ಲಿ, ದಶೇಂದ್ರಿಯಗಳನ್ನು ದಶದಿಕ್ಕಿಗೆ ಚಾಚಿ ಎಲ್ಲಿಯೂ ಯಾವುದೇ ಕತ್ತಲೆಯು ಆವರಿಸದಂತೆ ಜನ್ಮ, ಜನ್ಮದಲಿ ಸಂಚಿತವಾದ ಸಮಸ್ತ ಕರ್ಮಫಲಗಳನ್ನು ಹೊಡೆದೋಡಿಸಲು ಭಕ್ತಿಯೇ ಸರ್ವಶಕ್ತ ವಾದುದು ಎಂಬುದು ಹರಿದಾಸರ ನಂಬಿಕೆಯಾಗಿತ್ತು. ಆದ್ದರಿಂದಲೇ ಅವ್ವನವರು, ಸಮಾಜದಲಿ ನೀತಿ ತಪ್ಪಿದ ಬಾಲೆಯರ ಅಜ್ಞಾನದ ಭೂತವನ್ನು ಓಡಿಸಲು ಭಕ್ತಿಯೇ ಸಾಧನವಾದುದು ಎಂಬುದನ್ನು ಪುನರುಚ್ಚರಿಸುತ್ತಾರೆ. ದಶೇಂದ್ರಿಯಗಳ ಕುದುರೆಗಳನ್ನು ದಶದಿಕ್ಕಿಗೆ ಓಡಿಸಿ ತಾವು ಮುಸುಕು ಅಜ್ಞಾನದ ತೆರೆ ಸರಿಸಲು ಅಷ್ಟು ಸುಲಭಸಾಧ್ಯವಾದುದಲ್ಲ ಎಂಬುದಕ್ಕೆ ಅವ್ವ ಬಳಸುವ ಪದ ರಚನೆಯು 'ಕೊಸರಿ ಕೊಸರಿ ಝಾಡಿಸಿ' ಅತ್ಯಂತ ಸೂಕ್ತವಾದುದಾಗಿದ್ದು, ಅದರೊಳಗೆ ನಡೆಯುತ್ತಿದ್ದ ಧಾರ್ಮಿಕ ದ್ವಂದ್ವಗಳಿಗೆ ಒಂದು ಮುಕ್ತಿಯ ನೆಲೆಯನ್ನು ಒದಗಿಸಲು ಪ್ರಯತ್ನಿಸುತ್ತಿದ್ದಾರೆಂದು ತಿಳಿಯಬಹುದು.

ಅವ್ವನವರಲ್ಲಿ ಭಕ್ತಿಯು ನಾನಾ ವಿದ್ಯೆಗಳಿಗೆಲ್ಲಾ ಸರಿಯಾದ ಮಾರ್ಗದರ್ಶನ ನೀಡುವ ಗುರಿಯಾಗಿರುವುದು. ಅಲ್ಲಿ

"ನಿಂದ್ಯವಾದ ಪಟಲು ವಿದ್ಯೆ
ಚಿಂದಿ ಚಿಂದಿ ಮಾಡಿಸಿ ನಾವು
ತಂದೆ ರಾಮೇಶನ ಪಾದಕೆ
ತಂದು ಇವರ ಹೊಂದಿಸಿ"

ನೀತಿ ಹೇಳುವ ನಾನಾ ಪಟಲು ವಿದ್ಯೆಗಳೆಲ್ಲವನ್ನು ಭಕ್ತಿಯೊಂದರಿಂದಲೇ ಸಾಧಿಸಿಬಿಡಬಹುದು ಎಂಬುದು ಅವರ ಅಭಿಪ್ರಾಯವಾಗಿತ್ತು. ಭಕ್ತಿಯು ಜ್ಞಾನಕ್ಕೆ, ಧರ್ಮಕ್ಕೆ ಮೂಲವಾದುದು ಎಂಬುದೇ ಸ್ಪಷ್ಟವಾದ ದೃಢ ನಂಬಿಕೆಯು ಅವ್ವನವರ ಕೀರ್ತನೆಗಳಲ್ಲಿ ಪ್ರಮುಖವಾದ ಅಂಶಗಳಾಗಿವೆ. ಇವು ಸಾಮಾಜಿಕ ಮೌಲ್ಯಗಳಾಗಿ ಅವ್ವನವರು ಹಾಡುಗಳಲ್ಲಿ ವಿಸ್ತಾರವಾದ ಹರಹನ್ನು ಪಡೆದಿವೆ.

ಅಡಿಟಿಪ್ಪಣಿಗಳು


೧. ಮುಗಳಿ ರಂ.ಶ್ರೀ., ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಶ್ರೀ ನಿಧಿ ಪ್ರಕಾಶನ, ವಿದ್ಯಾನಗರ, ೧೯೭೨, ಪು.೨೬೨

೨. ಸಣ್ಣಯ್ಯ ಬಿ.ಎಸ್., ದಾಸ ಸಾಹಿತ್ಯ ದರ್ಶನ ದಾಸ ಸಾಹಿತ್ಯದ ಜನಪ್ರಿಯ ಮೌಲ್ಯಗಳು, ಮಂಗಳ ಭಾರತಿ ಪ್ರಕಾಶನ, ಮೈಸೂರು, ೧೯೮೪, ಪು. ೨೯೨, ೨೯೩

೩. ನಾವಡ ಎ.ವಿ., ಈಸಬೇಕು ಇದ್ದು ಜೈಸಬೇಕು, ಸಮಾಜಮುಖಿ ಕೀರ್ತನೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪. ಹಣಮಂತ ತಾಸಗಾಂವಕರ, ಗಲಗಲಿ ಅವ್ವನವರ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೮, ಸಂಪುಟ.೭, ಪು.೨೪

೫. ಅದೇ, ಪು. ೩೧

೬. ಎಚ್ಚೆಸ್ಕೆ, ದಾಸ ಸಾಹಿತ್ಯ ದರ್ಶನ, ಮಂಗಳ ಭಾರತಿ ಪ್ರಕಾಶನ, ಮೈಸೂರು, ೧೯೮೪, ಪು.೩೯೮

೭. ಹಣಮಂತ ತಾಸಗಾಂವಕರ, ಪೂರ್ವೋಕ್ತ, ೨೦೦೮, ಪು.೨೪೫

೮. ಸಾಗರತ್ನ ಟಿ.ಎನ್., ಶ್ರೀ ಪಾದರಾಜರು ಜೀವನ ಮತ್ತು ಕೃತಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೬

೯. ಹಣಮಂತ ತಾಸಗಾಂವಕರ, ಪೂರ್ವೋಕ್ತ, ೨೦೦೮, ಪು. ೨೪೬, ೨೪೭

೧೦. ಹಿರೇಮಠ ಆರ್.ಸಿ., ಮಹಾದೇವಿಯಕ್ಕನ ವಚನಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಬಸವೇಶ್ವರ ಪುರಂದರದಾಸ, ಡಾ.ಬಸವರಾಜ ಸಬರದ, ಸಂಶೋಧನಾ ಕೃತಿ ಗುಲಬರ್ಗಾ ವಿಶ್ವವಿದ್ಯಾಲಯ, ೧೯೬೮, ಪು.೧೫೫

೧೧. ಹಣಮಂತ ತಾಸಗಾಂವಕರ್, ಬಾಗಲಕೋಟ ಜಿಲ್ಲೆಯ ಹರಿದಾಸ ಸಾಹಿತ್ಯ, ಸುಧನ್ವ ಪ್ರಕಾಶನ, ಶ್ರೀ ರಾಧಕೃಷ್ಣ ಬಡಾವಣೆ, ನವನಗರ, ಬಾಗಲಕೋಟೆ, ೨೦೦೮, ಪು.೪

೧೨. ಸಾಗರತ್ನ ಟಿ.ಎನ್., ಶ್ರೀಪಾದರಾಜರ ಜೀವನ ಮತ್ತು ಕೃತಿಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೪೧,

೧೩. ಅದೇ, ಪು.೪೨

೧೪. ಅದೇ, ಪು.೫೦

೧೫. ಅದೇ, ಪು.೪೫,೪೬

೧೬. ಅದೇ, ಪು.೩೬

೧೭. ಎಚ್ಚೆಸ್ಕೆ, ಪೂರ್ವೋಕ್ತ, ಪು.೧೧೧

೧೮. ಅದೇ, ಪು.೧೧೪

೧೯. ಹಣಮಂತ ತಾಸಗಾಂವಕರ್, ಪೂರ್ವೋಕ್ತ, ೨೦೦೮, ಪ್ರಸ್ತಾವನೆ ೨೭,೨೮

೨೦. ಜಿ.ಎ.ಕವಲ ಕಸ್ತೂರಿ ಕೋಶ, 'ಗಲಗಲಿ ಅವ್ವನವರ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ' ನಿರ್ದೇಶನಾಲಯ, ಪು.೫೫೧

೨೧. ಎಚ್ಚೆಸ್ಕೆ, ಪೂರ್ವೋಕ್ತ, ಪು.೧೧೯, ೧೨೦

೨೨. ನಾಗರತ್ನ ಟಿ.ಎನ್., ಪೂರ್ವೋಕ್ತ, ಪು.೩೬

೨೩. ಹಣಮಂತ ತಾಸಗಾಂವಕರ್, ಪೂರ್ವೋಕ್ತ, ೨೦೦೮, ಪು.೯೮

೨೪. ಹಣಮಂತ ತಾಸಗಾವಂಕರ್, ಪೂರ್ವೋಕ್ತ, ೨೦೦೮, ೧೪೦

೨೫. ಹಣಮಂತ ತಾಸಗಾವಂಕರ್, ಪೂರ್ವೋಕ್ತ, ೨೦೦೮, ಪು.೧೯೯

೨೬. ಹಣಮಂತ ತಾಸಗಾವಂಕರ್, ಪೂರ್ವೋಕ್ತ, ೨೦೦೮, ಪು.೨೩,೨೪

೨೭. ನಾಗರತ್ನ ಟಿ.ಎನ್., ಪೂರ್ವೋಕ್ತ, ಪು.೬೪

೨೮. ಎಚ್ಚೆಸ್ಕೆ, ಪೂರ್ವೋಕ್ತ, ೨೯೫, ೨೯೬

೨೯. ಹಮಣಂತ ತಾಸಗಾಂವಕರ್, ಪೂರ್ವೋಕ್ತ, ೨೦೦೮, ಪು.೧೦೯

೩೦. ಅದೇ, ಪು.೧೧೧

೩೧. ಅದೇ, ಪು.೧೧೨

೩೨. ಅದೇ, ಪು.೨೨೯

೩೩. ಉಷಾರಾಣಿ ಪಿ., ಹೆಳವನಕಟ್ಟೆ ಗಿರಿಯಮ್ಮನ ಜೀವನ ಕೃತಿಗಳು, ಅಪ್ರಕಟಿತ ಸಂಶೋಧನ ಪ್ರಬಂಧ

೩೪. ಹಣಮಂತ ತಾಸಗಾವಂಕರ್, ಪೂರ್ವೋಕ್ತ, ೨೦೦೮, ಪು.೨೦೧

೫

# ಗಲಗಲಿ ಅವ್ವನವರ ಕೀರ್ತನೆಗಳು : ಸಾಹಿತ್ಯಿಕ ಮೌಲ್ಯ

''ರಾಮೇಶ', 'ರಮಿಅರಸು' ಎಂಬ ಅಂಕಿತವನ್ನಿಟ್ಟುಕೊಂಡು ಗಲಗಲಿ ಅವ್ವನವರು ಮುಯ್ಯದ ಹಾಡು, ಸೇತುಬಂಧನದ ಹಾಡು, ಶೃಂಗಾರ ತಾರತಮ್ಯ, ಮೋರೆಗೆ ನೀರು ತಂದ ಹಾಡು ಹಾಗೂ ಕೋಲ ಹಾಡುಗಳು ಮತ್ತು ಉಗಾಭೋಗ ಅಲ್ಲದೆ ಜೋಗುಳ ಹಾಡುಗಳಾಗಿ ೫೭ ನುಡಿಗಳ ಹಾಡು, ಸುದೀರ್ಘವಾಗಿ ಶ್ರೀಕೃಷ್ಣ ಜನ್ಮದ ಹಾಡುಗಳನ್ನು ರಚಿಸಿದ್ದಾರೆ.

''ಮುಯ್ಯದ ಹಾಡು ತುಂಬ ಪ್ರಚಾರದಲ್ಲಿರುವ ಸುದೀರ್ಘ ಗೀತೆ. ಗೌರಿ ಪೂಜೆಯ ಕಾಲದಲ್ಲಿ ಮುಯ್ಯ ಒಯ್ಯುವ ಸಂಪ್ರದಾಯವನ್ನು ವಿನೋದವಾಗಿ ಹಾಡಿ, ನರ್ತಿಸಿ, ಆಚರಿಸುವಂತಹ ಸಂದರ್ಭವಿದು. ಸುಭದ್ರೆ, ದ್ರೌಪದಿಯರು ರುಕ್ಮಿಣಿಗೆ ಮುಯ್ಯ ಒಯ್ಯುವಂತೆ ಹಾಡು ರಚಿತವಾಗಿದೆ. ಮುಯ್ಯದ ಪದಗಳು, ಮೋರೆಗೆ ನೀರು ತಂದ ಹಾಡುಗಳು, ಶೃಂಗಾರ ತಾರತಮ್ಯ ಬೀಗರ ಹಾಡುಗಳು. ಇವೇ ಮುಂತಾದವು ಈಕೆಯ ಕೃತಿಗಳು. ಮುಯ್ಯದ ವಾದದಲ್ಲಿ ತನ್ನನ್ನು ಗೆಲ್ಲಿಸಬೇಕೆಂದು ತನ್ನ ಆರಾಧ್ಯದೈವ ಕೃಷ್ಣನಿಗೆ ಮೊರೆ ಹೋಗುವುದು, ಇದರೊಂದಿಗೆ ದೇವಾನುದೇವತೆಗಳೆ ವರವಾನುಗ್ರಹ ಬೇಡುವ, ಗುರುಪರಂಪರೆ ಸ್ತುತಿಸುವ ಅವ್ವ, ತನ್ನೊಂದಿಗೆ ಹಾಡುವ ಸಖೀ ಪರಿವಾರಕ್ಕೂ ಕೃಷ್ಣದರ್ಶನ ಮಾಡಿಸುವ ಹಂಬಲವುಳ್ಳವಳು. ಪಾಂಡವರ ಭಕ್ತಿಯನ್ನು, ಕೃಷ್ಣನ ವಾತ್ಸಲ್ಯವನ್ನು ಕವಯತ್ರಿ ತನ್ನ ರಚನೆಯಲ್ಲಿ ವರ್ಣಿಸಿದ್ದಾಳೆ. ರುಕ್ಮಿಣಿ, ಸತ್ಯಭಾಮೆಯರ ಜಗಳದ ನಡುವೆ ಕೃಷ್ಣನಿಗುಂಟಾದ ಸ್ಥಿತಿಯನ್ನು ದ್ರೌಪದಿ ಸೊಗಸಾಗಿ ವರ್ಣಿಸುತ್ತಾಳೆ. ಇದೇ ಸಂದರ್ಭವನ್ನು ದಶಾವತಾರದ ವರ್ಣನೆ ಮಾಡಲು ಕವಯಿತ್ರಿ ಉಪಯೋಗಿಸಿಕೊಂಡಿದ್ದಾಳೆ.''[೧] 'ಮೋರೆಗೆ ನೀರು ತಂದ ಹಾಡುಗಳು' ಇನ್ನೊಂದು ಸಂಪ್ರದಾಯವನ್ನು ಪ್ರತಿನಿಧಿಸುತ್ತವೆ. ಮದುವೆಯ ಸಮಾರಂಭದಲ್ಲಿ ಬೀಗರು ಗಂಡಿನ ಮನೆಯವರ ಮೋರೆಗೆ ನೀರು ತರುವ ಸಂಪ್ರದಾಯವಿದೆ. ಈ ಸಂದರ್ಭದಲ್ಲಿ ಈ ಹಾಡುಗಳನ್ನು ಹಾಡುತ್ತಾರೆ. ಇವು ಒಂದು ರೀತಿಯ ಜರೆಯುವ ಹಾಡುಗಳು ದೇವತೆಗಳಲ್ಲಿ ಈ ಸಂಪ್ರದಾಯವನ್ನು ಅನ್ವಯಿಸಿ ಗಲಗಲಿ ಅವ್ವ ಹಾಡಿದ್ದಾಳೆ.

ಬೀಗರ ಹಾಡುಗಳು ಕೂಡ ಈ ರೀತಿಯವೆ. ರಾಮಾವತಾರ, ಕೃಷ್ಣಾವತಾರಗಳಿಗೆ ಸಂಬಂಧಿಸಿದಂತೆ ಈಕೆ ಈ ಹಾಡುಗಳನ್ನು ರಚಿಸಿದ್ದಾಳೆ.

ಅವ್ವ ತನ್ನ ಕೀರ್ತನೆಗಳಲ್ಲಿ ಆಡುನುಡಿಗೆ ಹೆಚ್ಚು ಪ್ರಾತಿನಿಧ್ಯವನ್ನು ಕೊಟ್ಟಿರುವಳು. ಅಲಂಕಾರಗಳಿಂದ, ವ್ಯಂಗ್ಯ, ವಿಡಂಬನೆಗಳಿಂದಲೂ ವಿಸ್ತಾರವಾದ ವರ್ಣನೆಗಳಿಂದ ಸನ್ನಿವೇಶಗಳನ್ನು ಚಿತ್ರಿಸಿದ್ದಾಳೆ. ಹಾಗೆಯೇ ತನ್ನ ಪರಿಸರದಲ್ಲಿ ಕಾಣುವ ಪ್ರಕೃತಿ ವರ್ಣನೆಯಲ್ಲಿಯೂ, ತಾನು ನಿತ್ಯವು ತೊಡಗಿಸಿಕೊಳ್ಳುವ ಮನೆಗೆಲಸ ಗಳಲ್ಲಿ, ಅದರಲ್ಲೂ ಅಡಿಗೆಯ ನಾನಾ ವಿಧಗಳನ್ನು, ಊಟ, ಉಪ್ಪಿನಕಾಯಿ, ಗುಳ್ಳೋರಿಗೆ ಹೀಗೆ ವಿಶೇಷವಾದ ತಿಂಡಿ ತಿನಿಸುಗಳನ್ನು ತನ್ನ ವರ್ಣನೆಗೆ ವಸ್ತುವಾಗಿಸಿಕೊಂಡಿದ್ದಾಳೆ. ಅದರೊಂದಿಗೆ ಗ್ರಾಮೀಣ ಬದುಕಿನ ರೀತಿ ನೀತಿಗಳನ್ನು ವಿಸ್ತರಿಸಿಕೊಂಡು ಅಲ್ಲಿನ ಮಹಿಳೆಯರ ಕೆಲಸ ಕಾರ್ಯಗಳಲ್ಲಿ ಮಾನವರ ಮದ, ಮಾತ್ಸರ್ಯಗಳನ್ನು ಕೇರಿ, ಕುಟ್ಟಿ, ತೌಡು ತೆಗೆಯುವಂತೆ, ಅಹಂಕಾರಗಳನ್ನು ಭಕ್ತಿಯರೆಯಲ್ಲಿ ಅರೆದು ಅರಿಶಿನ ಕುಂಕುಮ ಮಾಡಿ ಓಕುಳಿಯಾಟಕೆ ಬಳಸುವಂತೆ, ತನ್ನ ರಚನೆಯ ವೈಶಿಷ್ಟ್ಯವನ್ನು ತೋರಿದ್ದಾಳೆ.

**ಮುಯ್ಯದ ಹಾಡುಗಳು:** ಅವ್ವನವರ ವಿಶೇಷ ರಚನೆಗಳು. ಪೌರಾಣಿಕ ಹಿನ್ನಲೆಯಲ್ಲಿ ರಚಿತವಾಗಿರುವ ಹಾಡುಗಳಲ್ಲಿ 'ಮುಯ್ಯ ಕೊಡುವ ಮತ್ತು ಹಿಂತಿರುಗಿಸುವ ಹಾಡುಗಳು ಸಂಪ್ರದಾಯದ ನೆವದಲ್ಲಿ ಮಹಭಾರತ ಭಾಗವತ, ಪುರಾಣಗಳ ಪಾತ್ರಗಳು, ಪ್ರಸಂಗಗಳು, ಅವರ ಅಭಿವ್ಯಕ್ತಿಯನ್ನು ಸಮರ್ಥವಾಗಿ ಸೂಚಿಸುತ್ತವೆ. ಮುಯ್ಯದ ಹಾಡುಗಳಲ್ಲಿ ನಾನಾ ಬಗೆಯ ವರ್ಣನೆಗಳು, ವಿಸ್ತಾರ ಸಂಗತಿಗಳು ಒಂದರ ನಂತರ ಒಂದು ಬರುವ ಲೀಲಾಮಯ ವರ್ಣನೆಗಳು ಅವ್ವನವರ ಕಾವ್ಯ ಕೌಶಲ್ಯವನ್ನು ಎತ್ತಿ ತೋರಿಸುತ್ತವೆ. ಪ್ರಮುಖವಾಗಿ ಮುಯ್ಯದ ಹಾಡುಗಳು ವಿಶೇಷವಾಗಿದ್ದು. ಅವುಗಳಲ್ಲಿಯೂ ೧. ಮುಯ್ಯ ಕೊಡುವ ಹಾಡುಗಳು ಮತ್ತು ೨. ಮುಯ್ಯ ಹಿಂತಿರುಗಿಸುವ ಹಾಡುಗಳು ಎಂದು ವಿಭಾಗಿಸಬಹುದಾಗಿದೆ. ಮುಯ್ಯ ಒಯ್ಯುವ ಹಾಡುಗಳಲ್ಲಿ ವಿಶೇಷವಾಗಿ ಸಾಹಿತ್ಯಕ ಮೌಲ್ಯವನ್ನು ಗಮನಿಸಬಹುದು. ಗಲಗಲಿಯ ಅವ್ವ ಸಾಹಿತ್ಯಕವಾಗಿಯೂ ಇಲ್ಲಿ ಪ್ರಮುಖಳೆನಿಸುತ್ತಾಳೆ. 'ಮುಯ್ಯ ಒಯ್ಯುವ ಹಾಡುಗಳಲ್ಲಿ ಉದ್ದಕ್ಕೂ ದ್ರೌಪದಿ, ಸುಭದ್ರೆ, ರುಕ್ಮಿಣಿ, ಸತ್ಯಭಾಮೆ, ಗಂಗೆ, ಗೌರಿ, ಕೃಷ್ಣ, ಪಾಂಡವರು, ವಿಷ್ಣು, ಶಿವ ಈ ಎಲ್ಲ ಪಾತ್ರಗಳ ಸಡಗರ ಸಂಭ್ರಮಗಳು, ಹಾಸ್ಯ ವಿನೋದಗಳೊಂದಿಗೆ ಶ್ರೀಹರಿಯ ಪಾರಮ್ಯತೆಯನ್ನು ಸ್ತುತಿಸುವ, ನಿಂದನಾಸ್ತುತಿಗಳೊಂದಿಗೆ ಹೆಚ್ಚು ಪರಿಣಾಮಕಾರಿಯಾಗಿ ಕೀರ್ತನೆಗಳು ರಸಾಸ್ವಾದನೆಗೆ ಪೂರಕವಾಗಿರುವುವು.

**ಮುಯ್ಯ ಒಯ್ಯುವ ಹಾಡುಗಳು**

ಸುಭದ್ರೆ ದ್ರೌಪದಿಯರು ತಮ್ಮ ಅಣ್ಣ ಶ್ರೀಕೃಷ್ಣನ ದರ್ಶನಾಕಾಂಕ್ಷಿಗಳಾಗಿ ಮುಯ್ಯದ ನೆಪ ಮಾಡಿಕೊಂಡು ದ್ವಾರಕೆಗೆ ಬರುವರು. ಕೃಷ್ಣನ ಹಾಗೂ ಅವನ ಪತ್ನಿಯರಾದ ರುಕ್ಮಿಣಿ ಸತ್ಯಭಾಮೆಯರನ್ನು

ಮನಸಾರೆ ಸ್ತುತಿಸಿ, ಅವರೊಂದಿಗೆ ವಾದ-ವಿವಾದಗಳನ್ನು ನಡೆಸುವಂತೆ ನಟಿಸಿ ಅತ್ತಿಗೆ ನಾದಿನಿಯರು ಸರಸ ಸಲ್ಲಾಪಗಳಿಂದ ಧನ್ಯರಾಗುವರು. ತಾವು ಧನ್ಯರಾದುದಲ್ಲದೆ, ತಮ್ಮೊಂದಿಗೆ ಬಂದು ಭಾಗವಹಿಸಿದ ಭಕ್ತರೆಲ್ಲರಿಗೂ ಶ್ರೀಕೃಷ್ಣ ಹಾಗೂ ಆತನ ಮಡದಿಯ ದರ್ಶನ ಲಭಿಸಿದಂತೆ ಆಗುತ್ತದೆ. ಈ ಮುಯ್ಯ ಒಯ್ಯುವ ಪರಂಪರೆಯನ್ನು ಜನರೆಲ್ಲರೂ ಅನುಸರಿಸಿ ಶ್ರೀಹರಿಯ ದರ್ಶನದಿಂದ ಧನ್ಯತೆ ಪಡೆಯಲಿ ಎಂಬ ಆಶಯ ಈ ಮುಯ್ಯ ಒಯ್ಯುವ ಹಾಡುಗಳ ತಿರುಳಾಗಿದೆ. ಹೀಗೆ ಭಕ್ತರು ಭಗವಂತನ ದರ್ಶನದಿಂದ ಸಂತುಷ್ಟರಾಗಿ ಅನಂತರದಲ್ಲಿ ಶ್ರೀಕೃಷ್ಣನು ತಮ್ಮ ಮನೆಮನೆಗಳಿಗೂ ಬರುವಂತೆ ಆತನಿಗೆ ಆಣೆಯಿಟ್ಟು ಪ್ರಮಾಣ ಪಡೆದು ಮುನ್ನಡೆಯುವರು. ಭಕ್ತರ ಕೋರಿಕೆಯಂತೆ ಶ್ರೀಕೃಷ್ಣನು ಭಕ್ತರ ಮನೆಗೆ ಬರುವುದು ತನ್ನ ಪ್ರೀತಿಪಾತ್ರರೂ, ಭಗವದ್ಭಕ್ತರೂ ಆದ ಪಾಂಡವರನ್ನು ಕಾಣಲು ತನ್ನ ಪತ್ನಿಯರೊಡನೆ ಕೂಡಿ ಹಸ್ತಿನಾವತಿಗೆ ಬರುವುದು. ಭಕ್ತರಂತೆಯೇ ಪರಮಾತ್ಮ ಶ್ರೀಕೃಷ್ಣನು ತನ್ನ ಭಕ್ತರನ್ನು ಕಾಣಲು ಕಾತುರದಿಂದ ಅತ್ಯಂತ ವೈಭವಯುತವಾಗಿ ಹಸ್ತಿನಾಪುರಕ್ಕೆ ಮುಯ್ಯ ಹಿಂತಿರುಗಿಸುವ ನೆಪದಲ್ಲಿ ಬರುವುದು ಈ ಎಲ್ಲ ಚಿತ್ರಣಗಳು ಮೂಡಿಬಂದಿವೆ. ಕಾರಣವೇನೇ ಇರಲಿ ಭಕ್ತ ಭಗವಂತರ ಅನ್ಯೋನ್ಯತೆಗೆ ಈ ಮುಯ್ಯದ ಹಾಡುಗಳು ಪೂರಕವಾಗಿರುವವು.

ಮುಯ್ಯ ಒಯ್ಯುವ ಹಾಡುಗಳು ಪ್ರಾರಂಭವಾಗುವುದೇ ಗಣಪನ ಪ್ರಾರ್ಥನೆಯೊಂದಿಗೆ

"ಶ್ರೀ ಗಣರಾಯ ಶ್ರೀ ಗಣರಾಯ...
ವಂದಿಸುವೆನೀಗ ಶ್ರೀಗಣರಾಯ
ಆಕಾಶಕಭಿಮಾನಿ ಶ್ರೀ ಕಂಠನ ವರಪುತ್ರ
ಏಕದಂತನೆ ವಿಘ್ನೇಶ
..... ನಿನ್ನ ಪಾದ ಏಕಚಿತ್ತದಲೆ
ಬಲಗೊಂಬೆ ವಂದಿಸುವೆ ಶ್ರೀ ಗಣರಾಯ
.....
ಸುಲಭದಿ ರುಕ್ಮಿಣಿಯ ಗೆಲಿಯಬೇಕೆನುತಲೆ
ಹಲಧರನ ತಂಗಿ ಸುಭದ್ರೆ
............ಮೊದಲಿಗೆ ಚೆಲುವ
ಗಣಪತಿಯ ನೆನೆದಳು.
...........
ಮುದ್ದು ರಾಮೇಶನ ಪೂಜಿಸಿ ರಾವಣನ ಗೆಲಿದನು
ಮ್ಯಾಲೆ ಪಾಂಡವರು ಮೊದಲಾಗಿ
........ಮೊದಲ ಪೂಜೆಯ ಮಾಡಿ
ಹೀನ ಕೌರವರ ಗೆಲಿದರು."[೨]

ಇಲ್ಲಿ ಸುಭದ್ರೆಯು ತನ್ನ ಪ್ರೀತಿಪಾತ್ರನಾದ ಅಣ್ಣನನ್ನು ಕಾಣಲು ಒಂದೇ ಚಿತ್ತದಿಂದ ನೆನೆಯುತ್ತಿರುವಾಗ ಅಣ್ಣನನ್ನು ನೋಡಲು ದ್ವಾರಕೆಗೆ ಹೋಗಲು ಕಾರಣವನ್ನು ಸುಭದ್ರೆಯ ಮನಸ್ಸು ಹುಡುಕಿಕೊಳ್ಳುವುದು, ಅದೇನಿದ್ದರೂ ಅಣ್ಣನ ಕಾಣುವ ಕಾತರದ ನೆಪದಿಂದ ಆಕೆಗೊಂದು ದಿನ ಇದ್ದಕ್ಕಿದ್ದಂತೆಯೇ ಅಣ್ಣನು ಬಹಳ ನೆನಪಾಗಿ ಕೃಷ್ಣನನ್ನು ಕಾಣಲು ಮುಯ್ಯ ಒಯ್ಯಲು ತೀರ್ಮಾನಿಸಿ, ಮುಯ್ಯ ಒಯ್ಯಲು ನಿರ್ಧರಿಸಿದ ಸುಭದ್ರೆಯ ಕಾತರವನ್ನು ಇಲ್ಲಿ ತಿಳಿಯಬಹುದು.

"ಹೆಣ್ಣು ಸುಭದ್ರ ತಮ್ಮ ಅಣ್ಣನ ಭಾಗ್ಯವ
ಬಣ್ಣ ಬಣ್ಣದಲೆ ಸ್ಮರಿಸುತ
............... ಹಿಗ್ಗುತ ಕಣ್ಣು
ಮುಚ್ಚುತಲೆ ತೆರೆಯುತಲ
ಕೈವಲ್ಯಪತಿಯ ದಯದಿಂದ ಸಲುಹಿದ
ವೈಭವದೊಳಗೆ ಮರೆತಾನ
ವೈಭವದೊಳಗೆ ಮರೆತಾನ ಮುಯ್ಯವ ಒಯ್ದರೆ
ನೋಡಿ ಬರಬೇಕ."[೩]

ಸುಭದ್ರೆಯ ಮನೋ ಇಂಗಿತವು ಕೃಷ್ಣನ ಕಾಣಲು ದ್ವಾರಕೆಗೆ ಹೋಗಬೇಕಾದುದು. ಆಕೆಗೆ ತಾನು ಒಯ್ಯುವ ಮುಯ್ಯದ ನೆವದಲ್ಲಿ ಅತ್ತಿಗೆ ರುಕ್ಮಿಣಿ ಭಾಮೆಯರನ್ನು ಗೆಲಿಯಲು ಶ್ರೀ ಗಣಪತಿಯನ್ನು, ಸರಸ್ವತಿಯನ್ನು, ಗಂಗೆ-ಗೌರಿಯರನ್ನು ಪೂಜಿಸಿ ಅವರೊಂದಿಗೆ ಬ್ರಹ್ಮ, ರುದ್ರಾದಿದೇವರನ್ನು ಮತ್ತು ಹನುಮ, ಭೀಮ, ಮಧ್ವಮುನಿವರ್ಯರನ್ನು ನೆನೆಯುತ್ತಾ, ಅತ್ತಿಗೆಯರನ್ನು ವಾದದಲ್ಲಿ ಗೆಲ್ಲಲು ಪ್ರಾರ್ಥಿಸುವ ಸುಭದ್ರೆಯ ಮನೋಭಿಲಾಷೆಗೆ ಅವರ ಕಾವ್ಯ ಸಾಮರ್ಥ್ಯವು ಸೇರಿ ಅತ್ಯಂತ ಮನೋಹರ ವರ್ಣನೆಯೆನಿಸಿವೆ. ಬಹುಕಾಲ ನೆನಪಲ್ಲಿ ಉಳಿಯುವಂತಹ ಪ್ರಾರ್ಥನೆಗಳು ಇಲ್ಲಿವೆ. ಗಣಪನ ನೆನೆಯುತ್ತಾ, ನೆನೆಯಕ್ಕಿ, ನೆನಗಡಲೆ, ಚಿಗಳಿ, ತಂಬಿಟ್ಟು, ಗೊನೆಬಾಳೆಹಣ್ಣು, ನಮ್ಮ ನಡುವಿನ ಆಚರಣೆಗಳಲ್ಲಿ ಇಂದಿಗೂ ಉಳಿದು ಬಂದಿರುವಂತಹವು. ವಿಶೇಷವಾಗಿಯೂ ಪೂಜೆ ಸಮಾರಂಭಗಳಲ್ಲಿ ಕಾಣಸಿಗುವ ಈ ಪದಾರ್ಥಗಳು ಅಂದಿಗೂ ಜನಪದರ ಆಚರಣೆಯಲ್ಲಿಯೂ ಇದ್ದುವು. ಇದೊಂದು ಪಾರಂಪರಿಕ ನಡಾವಳಿಯಾಗಿರುವುದು.

'ಅವ್ವ'ನವರು ತಮ್ಮ ಭಕ್ತಿಯ ಪ್ರಾರ್ಥನೆಯನ್ನು ದೇವಾನುದೇವತೆಗಳೆಲ್ಲರಿಗೂ ಅರ್ಪಿಸುತ್ತಾ ಅತ್ಯಂತ ನಮ್ರಭಾವನೆಯಿಂದ 'ಮುಯ್ಯ ಒಯ್ಯೋಣ ಬಾರೆ' ಎಂದು ಲಲಿತವಾದ ಭಾಷೆಯಲ್ಲಿ ಸಖಿಯರಿಂದೊಡಗೂಡಿದ ಸುಭದ್ರೆಯ ಸಂತಸದ ಮನೋವಲಯವನ್ನು ಚಿತ್ರಿಸಿರುವುದು. ಇಲ್ಲಿ ಕಂಡುಬರುತ್ತದೆ.

''ಮುಯ್ಯ ಒಯ್ಯೋಣು ಬಾರೆ ಮಾನಿನಿಯರೆಲ್ಲರೂ ನೀರೆ
ಮೈ ಮರೆದೇನೆ ನಾರಿ ಮಾರನಯ್ಯನ ತೋರೆ ||ಪ||
...........
ಹಸ್ತಿನಾಪುರದರಸು ಮತ್ತೆ ಜೋಯಿಸರ ಕರೆಸಿ
ಮುತ್ತು ತುಂಬಿಡಿಸಿ ಮರದಾಗ ಚಪಲಾಕ್ಷಿ
ಮುತ್ತು ತುಂಬಿಡಿಸಿ ಮರದಾಗ ಮುಯ್ಯಕ್ಕ
ಉತ್ತಮ ತಿಥಿಯು ಬರಬೇಕು ಚಪಲಾಕ್ಷಿ
.............
................
ಇಂದಿನ ದಿವಸಕ್ಕ ಸಂದೇಹ ಬ್ಯಾಡವ್ವ ತಂದೆ
ರಾಮೇಶನ ಮಡದೇರ ಚಪಲಾಕ್ಷಿ
ತಂದೆ ರಾಮೇಶನ ಮಡದೇರ ನಾಚಿಸಿ ಬಂದಿಯೇ
ಕೃಷ್ಣಿ ನಗುತಲೆ ಚಪಲಾಕ್ಷಿ''[೪]

ಹೀಗೆ ಸುಭದ್ರೆಯ ಮನೋ ಇಚ್ಛೆಯನ್ನು ತಿಳಿಸುವಲ್ಲಿಯೇ ಉತ್ತಮವಾದ ಪ್ರಾಸ ಜೋಡಣೆಯನ್ನು ಕಾಣಬಹುದು. ಉದಾ : ''ಮುತ್ತು-ಉತ್ತಮ, ಮುದ್ದು-ಎದ್ದು, ವಿತ್ತ-ಚಿತ್ತ, ಜಾಣೆ-ರಾಣಿ, ಎದ್ಧ-ಸಿದ್ಧ'' ಮುಂತಾದ ಆದಿ ಪ್ರಾಸಗಳೆಲ್ಲವನ್ನೂ ಅವರ ಕೀರ್ತನೆಗಳು ಒಳಗೊಂಡಿದ್ದು, ಕೀರ್ತನೆಗಳ ಭಾವ ಸ್ವಾರಸ್ಯಕ್ಕೆ ಪೂರಕ ಸಾಹಿತ್ಯವನ್ನು ಒದಗಿಸಿರುವ ಅಪ್ಪನವರ ಕಾವ್ಯ ಕೌಶಲ್ಯ ಅಪರಿಮಿತವಾದುದು. ಸುಭದ್ರೆ ದ್ರೌಪದಿಯರು ತಾವು ಒಯ್ಯುವ ಮುಯ್ಯಕ್ಕೆ ಉತ್ತಮ ತಿಥಿ, ಮೂಹೂರ್ತ ಹಾಗೂ ಕಾಲಗಳನ್ನು ಕೇಳಿಕೊಂಡು ಅಣ್ಣನ ನೋಡಲು ಹೊರಟರು. ಅತ್ತಿಗೆಯರೊಡನೆ ಸಲ್ಲಾಪ ನಡೆಸಲು ಹೊರಟವರು ತಮ್ಮೊಂದಿಗೆ ಬರುವ ಭಕ್ತ ಜನರ ಇಚ್ಛೆಯಂತೆಯೇ ಅಣ್ಣ, ಶ್ರೀಕೃಷ್ಣನ ದರ್ಶನ ಮಾಡಿಸಲು ಉತ್ಸುಕರಾಗಿದ್ದರು. ಪತಿಯರೊಡಗೂಡಿ ದ್ವಾರಕೆಗೆ ಹೊರಡುವ ಮುನ್ನ ದೇವಾದಿದೇವತೆಗಳನ್ನೆಲ್ಲಾ ಪ್ರಾರ್ಥಿಸುವ ಕೀರ್ತನೆಯೊಂದು ಬಹು ಸ್ವಾರಸ್ಯಕರವಾಗಿರುವುದು. ಅಪ್ಪನವರು ತಮ್ಮ ಭಕ್ತಿಪರ ಮನದಿಚ್ಛೆಯ ಜೊತೆಗೆ ಭಕ್ತರ ಇಚ್ಛೆಯನ್ನು ಆದರೊಡನೆ ಮೇಳೈಸಿ ನೆರವೇರಿಸಲು ದೇವಾದಿದೇವತೆಗಳ ಆಶೀರ್ವಾದ ಪಡೆವುದು ಅರ್ಥಪೂರ್ಣವೆನಿಸುವುದು. ಕಾರಣ ಅವರು ವಿವಿಧ ದೇವಾನುದೇವತೆಗಳ ಆರಾಧನೆಯೊಂದಿಗೆ ತಮ್ಮ ಇಷ್ಟದೈವ ಕೃಷ್ಣನ ಭಕ್ತಿಯನ್ನು ಮುಖ್ಯ ಕೇಂದ್ರವಾಗಿಸಿಕೊಂಡು, ನೆನೆದಿದ್ದಾರೆ. ಇತರೆ ದೇವಾನುದೇವತೆಗಳ ಒಲವು ಪಡೆವುದು ಇಷ್ಟದೈವದ ಸಾಕ್ಷಾತ್ಕಾರವಾಗಿರುವುದು. ಅಂದರೆ, ಅಪ್ಪನವರಿಗೆ ತಮ್ಮ ಬಹುತ್ವದ ಆರಾಧನೆಯಲ್ಲಿ ಏಕತ್ವದ ಕೃಷ್ಣಾರಾಧನೆಯು ಮುಖ್ಯವಾಗಿರುವುದು ಇಲ್ಲಿ ಕಂಡುಬರುತ್ತದೆ.

“ಎಲ್ಲರಿಗೊಂದಿಸಿ ಕರವ ಜೋಡಿಸಿ....||ಪ||
ಎಲ್ಲರಿಗೊಂದಿಸಿ ಫುಲ್ಲನಾಭನ ಮುಖ್ಯವಲ್ಲಭೆಯರು
ನಾವು ಗೆಲ್ಲಬೇಕೆಂದು ||ಅ.ಪ||
ಮಡದಿ ಇಂದಿರಾದೇವಿ ಕಡೆಗಣ್ಣ ನೋಟದಿ ಪಡೆದಾಳು ಲೋಕ
ಬ್ರಹ್ಮರುದ್ರಾದಿ ಪಾದಂಗಳಿಗೆ ನೀವೆ ಮಹಾಲಕ್ಷ್ಮಿ
ಪಾದಂಗಳಿಗೆ ನೀವೆ ಮಹಾಲಕ್ಷ್ಮಿ ದೇವಿಯ
ಶುಭಾಂಗಿಯ ಮೊದಲೆ ಬಲಗೊಂಬೆ
ಹದಿನಾಲ್ಕು ಲೋಕವ ಮುದದಿಂದ ಸೃಜಿಸಿದ
ಪದ್ಮಸಂಭವನೆ ಪರಮೇಷ್ಠಿ
........... ನಿನ್ನ ಪಾದ
ಪದ್ಮವನೆ ಮೊದಲೆ ಬಲಗೊಂಬೆ
ವಾಣಿ ಅಜನ ಪಟ್ಟದರಾಣಿ ಪನ್ನಂಗವೇಣಿ
ಜಾಣೆ ಕೊಡು ಎಮಗೆ ಮತಿಗಳ
............. ನಿನ್ನ
ಪಾದರೇಣುವ ಮೊದಲೆ ಬಲಗೊಂಬೆ
ಹನುಮ, ಭೀಮ, ಮಧ್ವಮುನಿರಾಯ
ಮಾರುತ ಘನ ಮಹಿಮ
............ ಭಕ್ತ ವಿರಕ್ತ
ನಿನ್ನ ಪಾದ ವನಜವ ಮೊದಲೆ ಬಲಗೊಂಬೆ
..................
.................
.................
.................
ಸೌಪರಣಿ ವಾರುಣಿ ಅಪರ್ಣಾದೇವಿಯರು
ಕರುಣಿಸಿ ನಮಗೆ ಕಾಲಕಾಲ
ಕರುಣಿಸಿ ನಮಗೆ ಕಾಲಕಾಲಕೆ
ರಾಮೇಶನ ತರುಣಿಯರೆ ಗೆದ್ದು ಬರಬೇಕ”[೨]

ಎಂದು ಪ್ರಾರ್ಥಿಸುವ ಈ ಕೀರ್ತನೆಯಲ್ಲಿ ಅವ್ವನವರು ತಮ್ಮ ಲೀಲಾಜಾಲವಾದ ಸಾಹಿತ್ಯಿಕ ಮೌಲ್ಯವನ್ನು ಬಿಂಬಿಸಿದ್ದಾರೆ. ಮೊದಲೆ ತಿಳಿದಿರುವಂತೆ ಆದಿಪ್ರಾಸದಂತೆಯೇ, ವರ್ಣನೆಯು ಒಂದಾದ ಮೇಲೆ

ಒಂದರಂತೆ ಬರುವ ನೊರೆ ನೊರೆಯಾದ ತೆರೆಗಳಂತೆ, ''ವಾಣಿ ಅಜನರಾಣಿ...., ಹನುಮ, ಭೀಮ, ಮಧ್ವ ಮುನಿರಾಯ, 'ಸೌಪರಣಿ ವಾರುಣಿ ಅಪರ್ಣಾದೇವಿ, ಹೀಗೆ ಹಾಡಲು ಸುಲಲಿತವಾಗಿರುವ ಕಾವ್ಯ ಬಹುಕಾಲ ತನ್ನ ಇಂಪಾದ ವರ್ಣನೆಯ ಪದ ಸಮೂಹದಿಂದ ಓದುಗರನ್ನು ಹಿಡಿದಿಡುವುದು.

ಮುಯ್ಯ ಒಯ್ಯುವ ಕಾರ್ಯವು ಸುಭದ್ರ ದ್ರೌಪದಿಯರಿಗೆ ನೆಪವಾದರೂ ಭಕ್ತರಿಗದು ಸುಯೋಗ ವೆಂಬಂತಾಗಿರುವುದು. ಅಪ್ಪನವರು ತಮ್ಮ ಗುರುವೃಂದಕ್ಕೂ ಮಣಿಯುವ ಕೀರ್ತನೆಗಳಲ್ಲಿ ಅವರ ವಿದ್ವತ್ತಿನೊಂದಿಗಿನ ವಿನಯ ಮಡುಗಟ್ಟಿ ನಿಂತಿದೆ.

''ಕೈ ಮುಗಿವೆ ಕೈ ಮುಗಿವೆ ಕೈ ಮುಗಿವೆನು
ಸಖಿ ವೈಭವದ ಗುರುಗಳು ಕೈವಲ್ಯನೀವ ||ಪ||
ನಮ್ಮ ಕವಿಗಳ ಚರಣಕ್ಕೆ
ಮಧ್ವರಾಯರು ಪದ್ಮನಾಭ ನರಹರಿತೀರ್ಥ
ಶುದ್ಧ ಮಾಧವ ಅಕ್ಷೋಭ್ಯರ ಸಖಿಯೆ
............ ಚರಣವ
ವಿದ್ಯುಕ್ತದಿಂದ ಬಲಗೊಂಬೆ ಸಖಿಯೆ ||೧||
ಪ್ರಸಿದ್ಧ ಜಯತೀರ್ಥ ವಿದ್ಯಾಧಿರಾಜ
ಕವೀಂದ್ರ ವಾಗೀಶ ರಾಮಚಂದ್ರರೆ ಸಖಿಯೆ
ವಾಗೀಶ ರಾಮಚಂದ್ರ ವಿದ್ಯಾನಿಧಿಗಳ
ಪಾದಪದ್ಮವ ಮೊದಲೆ ಬಲಗೊಂಬೆ ||೨||
ರಘುನಾಥ, ರಘುವರ್ಯ, ರಘೂತ್ತಮ ತೀರ್ಥರ
ವೇದವ್ಯಾಸ ವಿದ್ಯಾಧೀಶರೆ ಗೆಲಿಸಲಿ
ವೇದವ್ಯಾಸ ವಿದ್ಯಾಧೀಶರ ಚರಣವ
ಭಕ್ತಿಯಿಂದ ಮೊದಲೆ ಬಲಗೊಂಬೆ ||೩||
ಅಗಣಿತ ವೇದನಿಧಿ ಸತ್ಯವ್ರತ ತೀರ್ಥರ
ಸತ್ಯನಿಧಿ ಸತ್ಯನಾಥರ ಸಖಿಯೆ
ಸತ್ಯನಿಧಿ ಸತ್ಯನಾಥರ ಚರಣವ
ಅತ್ಯಂತವಾಗಿ ಬಲಗೊಂಬೆ ಸಖಿಯೆ ||೪||
ಸತ್ಯಾಭಿನವ ತೀರ್ಥ ಸತ್ಯಪೂರ್ಣತೀರ್ಥರ
ಸತ್ಯವಿಜಯ ಸತ್ಯಪ್ರಿಯರ ಸಖಿಯೆ
ಸತ್ಯ ........... ತೀರ್ಥರ

ಚರಣವ ಅತ್ಯಂತವಾಗಿ ಬಲಗೊಂಬೆ ಸಖಿಯೆ ||೫||
ಸತ್ಯಬೋಧ ಸತ್ಯಸಂಧ ಸತ್ಯವರರ
ಚಿತ್ತಶುದ್ಧಿಯಲಿ ಬಲಗೊಂಬೆ
...........ಸಭೆಯೊಳು
ಸತ್ಯವಾಕ್ಯಗಳ ನುಡಿಸಲಿ ಸಖಿಯೆ ||೬||
ಯತಿಮುನಿರಾಯರ ಅತಿಭಕ್ತರಾಗಿದ್ದ
ಗತಿಪ್ರದರಾದ ಗುರುಗಳ ಸಖಿಯೆ
.............
ರಾಮೇಶನ ಅತಿಭಕ್ತರ ಮೊದಲೆ ಬಲಗೊಂಬೆ"[೬]

ಎಂದು ಹಾಡುವ ಕೀರ್ತನೆಯು ಅಪ್ಪನವರು ತಮ್ಮ ಕಾಲದಲ್ಲಿ ಪ್ರಸಿದ್ಧರಾದವರೂ, ಗುರುಗಳಾಗಿದ್ದವರನ್ನು ಭಕ್ತಿಯಿಂದ ನೆನೆಯುತ್ತಾ ಕಾವ್ಯಶಕ್ತಿಯನ್ನು ಮೆರೆದಿದ್ದಾರೆ.

ಭಕ್ತರ ಬೇಡಿಕೆಯು ಪ್ರಾರ್ಥನೆಯ ರೂಪತಾಳಿ ಅವರನ್ನು ಮಾನಸಿಕವಾಗಿಯಾದರೂ ಪುಣ್ಯಕ್ಷೇತ್ರಗಳ ದರ್ಶನ ಮಾಡಿಸುವುದು ಒಂದು ಪುಣ್ಯದ ಕಾರ್ಯವೇ ಆಗಿದೆ. ಅಪ್ಪನವರು ಭಕ್ತಸಮೂಹದವರಿಗೆ ತಮ್ಮ ಕೀರ್ತನೆಯಲ್ಲಿಯೇ ಅನೇಕ ಪುಣ್ಯಕ್ಷೇತ್ರಗಳ ದರ್ಶನವನ್ನು ಸುಭದ್ರೆ, ದ್ರೌಪದಿಯರ ಪ್ರಾರ್ಥನೆಯ ಮೂಲಕ ಮಾಡಿಸುತ್ತಾರೆ. ಈ ಪ್ರಾರ್ಥನೆಯ ಹಾಡಿನೊಂದಿಗೆ ತಮ್ಮ ಇಷ್ಟದೈವ ಗಲಗಲಿಯ ಮುದ್ಗಲವಾಸ ನರಸಿಂಹದೇವರನ್ನು ಉಲ್ಲೇಖಿಸಿ ತಮ್ಮ ಕೋರಿಕೆಯನ್ನು ದೇವರ ಮುಂದೆ ಮಂಡಿಸುವ ಅವರ ವರ್ಣನಾ ಶೈಲಿ ಇಲ್ಲಿದೆ.

"ಪಾರ್ಥನರಸಿಯರು ಪ್ರಾರ್ಥಿಸಿ ಕೈಮುಗಿಯೆ
ತೀರ್ಥಯಾತ್ರೆಗಳೆಲ್ಲಾ ಕ್ಷೇತ್ರ ಮೂರ್ತಿಗಳು ಗೆಲ್ಲಿಸಲಿ ||ಪ||
ರಾಮೇಶ್ವರ ಕಂಚಿ ಪ್ರೇಮದಿ ಕುಂಭಕೋಣ
ಸ್ವಾಮಿ ಶ್ರೀರಂಗ ತೋತಾದ್ರಿ
.............
ಬೇಲೂರು ಚೆನ್ನನ ಮೊದಲೆ ಬಲಗೊಂಬೆ
...............
..............
..............
ಅಹೋಬಲ ಮೊದಲಾದ ಆ ವೆಂಕಟಾದ್ರಿ
ಅಲ್ಲಿರೊ ಅನಂತ ಅಳಗಿರಿ

.............ದರ್ಭಶಯನ
ದೇವರ ಮೊದಲೆ ಬಲಗೊಂಬೆ
...........
..........
..........
..........
ದೇವಕ್ಕಳಿಗೆ ವರವ ಕೊಡುವೋಳು ಕನ್ಯಾಕುಮಾರಿ
ಮುಖ್ಯಳ ಮೊದಲೆ ಬಲಗೊಂಬೆ
ಛಾಯಾ ಭಗವತಿ ನಮ್ಮ ಕಾಯೆ ಕರುಣಾಂಬುಧೆ
ಸಹಾಯವಾಗಮ್ಮ ಕಾಲಕಾಲ
...................
...................
ಸುಬ್ರಹ್ಮಣ್ಯ ಸಾಸಿ ಒಬ್ಬ ಶ್ರೀಕೃಷ್ಣರಾಯ
ನಿರ್ಭಯದಿ ಸ್ವಾದಿ ನಿಲಯನೆ
.................
ಉಬ್ಬಿ ವಂದಿಸುವೆ ಕರುಣಿಸು
ಹಂಪಿ ವಿರೂಪಾಕ್ಷದಿ ನಿಂತು ಪೂಜೆಯಗೊಂಬ
ಯಂತ್ರೋದ್ಧಾರಕಗೆ ಒಲಿದವನೆ
............ರಾಮೇಶನ
ಕಾಂತೆಯರ ಗೆದ್ದು ಬರಬೇಕು"[೭]

ಎಂಬುದಾಗಿ ಅವ್ವನವರ ಈ ಪ್ರಾರ್ಥನಾರೂಪದ ಹಾಡು, ಕಂಚಿ ರಾಮೇಶ್ವರದಿಂದ ಕುಂಭಕೋಣದವರೆಗೂ, ಬೇಲೂರು, ಅಳಗಿರಿ, ಕನ್ಯಾಕುಮಾರಿ, ಘಾಟಿ ಸುಬ್ರಹ್ಮಣ್ಯ, ಹಂಪಿ ವಿರೂಪಾಕ್ಷ ಹೀಗೆ ಸಾಲು ಸಾಲು ಕ್ಷೇತ್ರದರ್ಶನ ಮಾಡಿಸುವ ಉತ್ಸುಕ ಮನಸ್ಸು ಇಲ್ಲಿ ಅನಾವರಣಗೊಳ್ಳುತ್ತದೆ. ಕಾರಣ ದೇವದರ್ಶನ ಎಂಬುದು ಕ್ಷೇತ್ರದರ್ಶನವಾಗಿ ದೇವರು ಎಂಬುದು ಕೇಂದ್ರೀಯ ನೆಲೆಯಿಂದ ಕ್ಷೇತ್ರಗಳ ದರ್ಶನವೆಂಬ ಬಹುತ್ವಗಳತ್ತ ಸಾಗುವ ಪರಿಯು ತುಂಬಾ ವಿಶೇಷವಾದುದು. ಅವ್ವನವರು ಭಕ್ತ ಜನರ ಅನೇಕ ದೇವರ, ಕ್ಷೇತ್ರಗಳ ಆಕರ್ಷಣೆಯನ್ನು ತಾವು ಪೂಜಿಸುವ, ಆರಾಧ್ಯದೈವ ಮುದ್ಗಲವಾಸನಲ್ಲಿಯೇ ಐಕ್ಯಗೊಳಿಸುವ ಕೌಶಲ್ಯವು ಅರ್ಥಪೂರ್ಣವೆನಿಸುವುದು.

"ಬಿನ್ನಹ ಮಾಡುವೆನು
ಅತ್ತಿಗೆಯರ ಚೆನ್ನಾಗಿ ಗೆಲಿಸೆಂದು

ಚದುರ ಮುದ್ಗಲವಾಸನೆದುರಿಗೆ
ಮಧುರ ವಾಕ್ಯಗಳ ನುಡಿಸೆಂದು"
ದೇಶ ದೇಶದ ಜನಕೆ ಲೇಸಾಗಿ ಸಲುಹುವ
ಶ್ರೀ ಸತಿದೇವಿ ಅರಸನೆ
.......... ಕಾಶಿ
ವಿಶ್ವೇಶ್ವರನ ಮೊದಲೆ ಬಲಗೊಂಬೆ
.............
.............
............
ಗಲಗಲಿ ನರಸಿಂಹ ಬಲು ದಯವಂತ
ಸುಲಭದಿ ವರವ ಕೊಡುವವನು
.............ರಾಮೇಶನ
ಚೆಲ್ವ ಮೂರ್ತಿಯ ಬಲಗೊಂಬೆ"[೮]

'ಗಲಗಲಿಯ ನರಸಿಂಹ ಬಲುದಯವಂತ' ಎಂದು ಹಾಡುವಲ್ಲಿ ಅವ್ವನವರು ತಮ್ಮ ಇಷ್ಟದೈವದ ಕಾರುಣ್ಯವನ್ನು ಪಡೆಯುವ ಸುಲಭದ ಮಾರ್ಗ ಈ ಪ್ರಾರ್ಥನೆ ಎಂಬುದಾಗಿ ತಿಳಿಸುತ್ತಾರೆ. ತಮ್ಮ ಅನುಭವ ವೇದ್ಯವಾದ ವಿದ್ವತ್ತಿನಿಂದ ಕ್ಷೇತ್ರ ದರ್ಶನ ಎಂಬ ವಿಸ್ತಾರದಂಚಿನ ಭಕ್ತಿಗೆ, ಭಕ್ತರನ್ನು ಮುಟ್ಟಿಸಲು ಕಾತುರರಾಗಿದ್ದರೆನ್ನಬಹುದು. ಕಾರಣ ಕೌಟುಂಬಿಕವಾಗಿ ಹೊರಜಗತ್ತನ್ನು ಕಾಣಲು, ಕ್ಷೇತ್ರಗಳ ದರ್ಶಿಸಲು ಎಲ್ಲರಿಗೂ ಸುಲಭ ಸಾಧ್ಯವಾದುದಲ್ಲ. ಇದನ್ನು ಮನಗಂಡು ಹೃದಯಸ್ಥವಾದ ಭಕ್ತಿಗೆ ಭಾವದ ನೆಲೆಯನ್ನು ಕಾಣಲು, ಮೂರ್ತಿಗಳ ಕೀರ್ತಿಗಳನ್ನು ಸ್ತುತಿಸುವ ಮೂಲಕ ಭಕ್ತರು ತಮಗೆ ನಿಲುಕಿದ ದೇವರಲ್ಲಿಯೇ ಕಾಣುತ್ತಾರೆ. ಜಗತ್ತಿನ, ಪ್ರಸಿದ್ಧ, ಶ್ರೇಷ್ಠ ಎನಿಸಿದ ದೇವ-ದೇವರ ಶಕ್ತಿಯು ಒಂದೆಡೆಯೇ ನಿಲುಕುವುದು ಎಂಬುದು ಈ ಕೀರ್ತನೆಯ ಭಾವಾರ್ಥ. ಹೆಂಗಳೆಯರ ಸ್ವಾತಂತ್ರ್ಯವನ್ನು ಅದರಲ್ಲೂ ಬ್ರಾಹ್ಮಣ ಮಹಿಳೆಯರ ಕಟ್ಟುಪಾಡಿನ ಬದುಕಿನಲ್ಲೂ ಭಕ್ತಿಯ ನೆಲೆ ಎಲ್ಲೆಲ್ಲಿ ಸುತ್ತಿದರೂ ಇದ್ದಲ್ಲಿಯೇ ಪರಮಾತ್ಮನನ್ನು ಸಂದರ್ಶಿಸುವ ಜಾಣತನವು ಹೆಣ್ಣುಮಕ್ಕಳ ಪ್ರೀತ್ಯರ್ಥ ಈ ಹಾಡು ಎಂದು ಗುರುತಿಸಬಹುದು.

ಅವ್ವನವರು ತಮ್ಮ ಕಾರ್ಯಕ್ಷೇತ್ರವನ್ನು ಕೌಟುಂಬಿಕ ನೆಲೆಯಲ್ಲಿ ಕಂಡುಕೊಂಡವರು. ಬೇರೆ ಬೇರೆ ಸಂಪ್ರದಾಯ ಹಾಡುಗಳಲ್ಲಿ ಬರುವ ಭಕ್ತಿಯ ವರ್ಣನೆ ಸರ್ವರಿಗೂ ನಿಲುಕುವ ಸಾಹಿತ್ಯವಾಗಿದೆ. ಹೆಚ್ಚಾಗಿ ಮಹಿಳಾ ಸಮೂಹವು ಆಕರ್ಷಿಸುವಂತಹ ವೈಭವದ ವರ್ಣನೆಗೆ ಹೆಚ್ಚು ಒತ್ತುಕೊಟ್ಟು ರಚಿಸಿದ್ದಾರೆ. ಭಕ್ತಿಯ ಹಿರಿಮೆಯು ಮುಖ್ಯವಾದರೂ ಆ ಭಕ್ತಿಹಿನ್ನೆಲೆಗೆ ತಮ್ಮ ಸಂಭ್ರಮದ

ಚೌಕಟ್ಟಿನಿಂದ ಸಿಂಗರಿಸಿ, ಇಷ್ಟದೈವದ ಕರುಣೆಯನ್ನು, ಭಕ್ತರ ಇಷ್ಟಾರ್ಥ ಪೂರೈಕೆಗೆ ದಾರಿ ಎಂಬಂತೆಯೂ ಚಿತ್ರಿಸಿದ್ದಾರೆ. ಈ ಶಬ್ದಚಿತ್ರಣವು ಅತ್ಯಂತ ಮನಮೋಹಕ, ಭಕ್ತರವಿನಯ, ತತ್ತ್ವಗಳನ್ನು ಹೇಳಿರುವುದು ಅವರ ಸಾಹಿತ್ಯದ ತಿರುಳಾಗಿದೆ.

''ಅದ್ವೈತವಾದಿ ನಿನ್ನ ಬುದ್ಧಿಕೌಶಲ್ಯ
ನೋಡಿ ವಿದ್ವಾಂಸರೆಲ್ಲಾ ನಗುತಾರೆ
ಈಚಲ ಗಿಡದಲಿ ಗೋಕ್ಷೀರ ಕರೆದಂತೆ
ನೀಚರ ಸಂಗ ಸುಜನರು ರನ್ನದ
........... ಮಾಡಲು ಆಚೆಲಿದ್ದವರಿಗೆ
ಅನುಮಾನ ರನ್ನದ ಕೋಲ
...............
ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ
ಕ್ಷುಲ್ಲಕುಮತರ ಸಹವಾಸ
............
ವೆಂಬೋದು
ನೀರುಳ್ಳಿ ತಿಂದ ಪರಿಯಂತೆ ರನ್ನದ ಕೋಲ''[5]

ಅವ್ವ, ತನ್ನ ಸಾಹಿತ್ಯಿಕ ಪರಿಭಾಷೆಗೆ ಕೌಟುಂಬಿಕ ವಾತಾವರಣದಲ್ಲಿ ಜನ ಸಾಮಾನ್ಯರ ನಂಬಿಕೆಗಳನ್ನು, ರುಚಿ, ಆಸ್ವಾದಗಳನ್ನು ಸಮಯೋಚಿತವಾಗಿ ಬಳಸಿಕೊಂಡಿದ್ದಾರೆ.

'ಈಚಲಗಿಡದಲಿ ಗೋಕ್ಷೀರ ಕರೆದಂತೆ'

'ನಂಬಿಕೆ' ಎಂಬುದು ಗೋಕ್ಷೀರದಷ್ಟು ಶುಭ್ರ, ಸ್ವಚ್ಛವಾದದ್ದು ಅದರೊಡನೆ ಈಚಲು ಗಿಡದಲಿ ಗೋಕ್ಷೀರ ಕರೆದಂತೆ ಎಂಬುದು ಸತ್ಯಕ್ಕೆ ದೂರವಾದದ್ದು, ನಂಬಿಕೆಗೆ ಅನರ್ಹವಾದದ್ದು, ನನಗೆ ಸತ್ಯ ಬೇರೆ ಅಲ್ಲ, ನಂಬಿಕೆ ಬೇರೊಂದಲ್ಲ ಎಂದು ವಾದಿಸುವ ಹಾಗೂ ದ್ವೈತವೆಂಬುದು ಅದ್ವೈತವೆಂಬ ನಂಬಿಕೆಯಲ್ಲಿಯೇ ಇರುವುದು ಎಂದು ವಾದಿಸುವ, ಸತ್ಯಕ್ಕೆ ಪರದೆಯೆಳೆಯುವ ಜನರನ್ನು ಅವ್ವ ''ನೀಚರ ಸಂಗ ಆಚೆಲಿದ್ದವರಿಗೆ, ಅನುಮಾನ ರನ್ನದ ಕೋಲ'' ಎಂದು ಹಾಡುವಲ್ಲಿ ಹೊರಜಗತ್ತಿನ ಜನರು ಎಚ್ಚರಿಕೆಯಿಂದ ಪರಿಸ್ಥಿತಿಯನ್ನು ಗಮನಿಸುವರು. ಎಂಬುದಾಗಿ ಈ ರೀತಿ ಹೇಳಿದ್ದಾರೆ.

''ಭಾವಜ್ಞರ ಸಂಗ ಶಾವಿಗೆ ಉಂಡಂತೆ
ಭಾವನರಿಯದ ಪಾಮರರ
............ ಸಹವಾಸ

ಬೇವಿನ ಹಾಲು ಕುಡಿದಂತೆ ರನ್ನದ ಕೋಲ
ಬಾಳ್ವೆವಂತರ ಸಹವಾಸ ಹೋಳಿಗೆ ಉಂಡಂತೆ
ಬಾಳಿವಿಗೆಟ್ಟ ಅಧಮರ ರನ್ನದ
........... ಸಹವಾಸ
ಹೇಳಲಾರದು ಮದ್ದಂತೆ ರನ್ನದ
ಹಿಟ್ಟು ಬೂದಿಯೊಂದೆ, ರೊಟ್ಟಿ ಮುಚ್ಚಳವೊಂದೆ
ಕಟ್ಟಿಗೆಯೊಂದೆ, ಕಬ್ಬೊಂದೆ
............. ಎಂದರೆ,
ದಿಟ್ಟ ರಾಮೇಶ ನಗುತಾನೆ ರನ್ನದ ಕೋಲ''[೨೦]

ಉತ್ತಮ ಕವಯಿತ್ರಿಯಂತೆಯೇ, ತಮ್ಮ ಗೃಹೀತ ಜೀವಾನಾನುಭವವನ್ನು ಮೇಳೈಸಿ ರಚಿಸಿರುವುದು ತಿಳಿಯುತ್ತದೆ. ಕಾವ್ಯದ ರಸಾನುಭೂತಿಯು ಓದುಗರ ವಲಯದಲ್ಲಿ ಅಂದರೆ ಹಾಡುಗಾರರೊಂದಿಗೆ, ಕೇಳುಗರಿಗೂ ಅವರ ಕಾವ್ಯದ ತಿರುಳು ಬಹು ಬೇಗ ಅರ್ಥವಾಗುವಂತಿವೆ. ಅವ್ವನವರ ಕೀರ್ತನೆಗಳ ಸಾಲುಗಳಲ್ಲಿ ಕಾಣುವ ಸಜ್ಜನರ ಸಹವಾಸ ಶಾವಿಗೆ ಉಂಡಂತೆ, ಸಿಹಿಯಾದ, ಊಟ ಎಂಥವರ ಮನಸ್ಸಿಗೂ ಹಿತ ತರುವಂತೆ, ಭಾವವನರಿಯದವರ ಸಂಗ ಬೇವಿನಹಾಲು ಕುಡಿದಂತೆ, ಬೇವಿನಹಾಲು ಪರಮ ಕಹಿಯಾದದು ಅಂತಹವರೊಡನೆ ಒಡನಾಟವು ಎಂದಿಗೂ ಸಹ್ಯ-ಸಾಧುವಲ್ಲದು. ತಮ್ಮ ಕಾವ್ಯಾಭಿವ್ಯಕ್ತಿಗೆ ಎಂದೂ ಯಾರೂ ಕೇಳಿರದ ಉಪಮೆಗಳನ್ನು ಬಳಸದೆ ನಿತ್ಯ ತಮ್ಮ ಗೃಹಜೀವನದಲ್ಲಿ ಬಳಸುವ ''ಹಿಟ್ಟು ಬೂದಿಯೊಂದೇ, ರೊಟ್ಟಿ ಮುಚ್ಚಳವೊಂದೆ, ಕಟ್ಟಿಗೆಯೊಂದೇ, ಕಬ್ಬೊಂದೇ ಎಂಬುದು ಅದ್ವೈತವೆಂದು ಹೇಳುತ್ತಾ, ಆಚಾರ ವಿಚಾರಗಳಲ್ಲಿ ತಾವು ಮಾಡಿದ್ದೇ ಸರಿಯೆಂಬ ಮನೋಭಾವದ ನಡವಳಿಕೆಯ ಕಂಡು ಈ ಹೋಲಿಕೆಗಳ ಮೂಲಕ ತಮ್ಮ ಶಬ್ದಚಿತ್ರಣ ಸಾಮರ್ಥ್ಯ ಮೆರೆದಿದ್ದಾರೆ. ಗೃಹಿಣಿಯಾದವಳಿಗೆ ಗೊತ್ತು ಹಿಟ್ಟು, ಬೂದಿಯು, ರೂಪದಲ್ಲಿ ಒಂದೇ ಆದರೂ ಗುಣದಲ್ಲಿ ಅವೆರಡಕ್ಕೂ ಭಿನ್ನ ರೀತಿಯ ಉಪಯೋಗವಿರುವುದು. ಹಿಟ್ಟು ಆಹಾರ ತಯಾರಿಗೆ ಬಳಸುವ ಪದಾರ್ಥವಾದರೆ, ಬೂದಿಯೂ ಉರುವಲಿನ ಶೇಷ ವಸ್ತುವಾಗಿ ಮರುಬಳಕೆಗೆ ಬಾರದ್ದು ಎಂಬುದಾಗಿರುವುದು ಅಂದರೆ, ಅರ್ಥವಿಲ್ಲದ ಆಚಾರಗಳು ಯೋಗ್ಯವಲ್ಲ ಎಂದೂ, ಅದರಂತೆಯೇ, ಕಟ್ಟಿಗೆಯೊಂದೇ, ಕಬ್ಬೊಂದೇ ಎಂದು ವಾದಿಸುವವರ ಮೊಂಡುವಾದಕ್ಕೆ, ರೂಪದಲ್ಲಿ ನೇರವಾಗಿ, ಉದ್ದವಾಗಿ ಕಟ್ಟಿಗೆ, ಕಬ್ಬು ಒಂದೇ ಆದರೂ ರುಚಿಯಲ್ಲಿ, ಬಳಕೆಯಲ್ಲಿ ಎರಡೂ ವಿಭಿನ್ನವಾದವು ಎಂಬುದನ್ನು ಅತ್ಯಂತ ಸುಲಭಗ್ರಾಹ್ಯವಾಗಿ ತಮ್ಮ ಕೀರ್ತನೆಗಳಲ್ಲಿ ಕಟ್ಟಿಕೊಡುತ್ತಾರೆ.

'ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ'
'ಭಾವಜ್ಞರ ಸಂಗ ಶಾವಿಗೆ ಉಂಡಂತೆ'
'ಬಾಳ್ವೆವಂತರ ಸಹವಾಸ ಹೋಳಿಗೆ ಉಂಡಂತೆ'

ಎಂಬ ಸಾದೃಶ್ಯ ಹೋಲಿಕೆಗಳು ಅಪ್ಪನವರ ಬದುಕು ಬರಹಗಳು ಒಂದೇ ಆಗಿರುವಂತೆ ಅವರ ಕೌಟುಂಬಿಕ ಚಿತ್ರಣದಲ್ಲಿ ಬಳಕೆಯಾಗುವ ಆಹಾರ ಪದಾರ್ಥಗಳ ಸವಿಯಾದ ಹೋಲಿಕೆ ಚಿತ್ರಣವು ಮಹಿಳೆಯರಿಗೆ ತಾವು ಬಳಸುವ ಪದಾರ್ಥವೇ ಪದಾಭಿವ್ಯಕ್ತಿಗೆ ಕಾರಣವಾಗಿರುವಂತಿದೆ.

ಮುಯ್ಯ ಒಯ್ಯುವ ಸಂದರ್ಭದಲ್ಲಿ ಮಹಿಳೆಯರು, ಪುರುಷರು ಧರಿಸುವ ಅಲಂಕಾರಿಕ ಆಭರಣಗಳ ಸಂಗ್ರಹ ಚಿತ್ರಣವೇ ಅಪ್ಪನವರ ಕೀರ್ತನೆಗಳಲ್ಲಿ ಮೇಳೈಸಿವೆ. ತಮ್ಮ 'ರಾಮೇಶ'ನ ದರುಶನಕ್ಕೆ ಹೊರಟ ಜನರ ಮನಸ್ಸಿನ ಭಕ್ತಿಯೊಂದಿಗೆ, ಅವರುಟ್ಟು ಸಂಭ್ರಮಿಸುವ ಅಲಂಕಾರದ ಒಡವೆಗಳ ಚಿತ್ರಣ ನೀಡುವಲ್ಲಿ ತಮ್ಮ ವೈಶಿಷ್ಟ್ಯ ತೋರಿದ್ದಾರೆ. ಕೃಷ್ಣನ ದರ್ಶನಕ್ಕೆಂದು ಹೊರಟ ಸುಭದ್ರೆ ದ್ರೌಪದಿಯವರು  ಹಸ್ತಿನಾಪುರದ ಜನತೆಯೊಡಗೂಡಿ ಸಂಭ್ರಮಿಸುವ ಪರಿಯನ್ನು, ತಮ್ಮ ಕಾವ್ಯದಲ್ಲಿ ಅತ್ಯಂತ ಮನೋಹರವಾಗಿ ಹಿಡಿದಿಟ್ಟಿದ್ದಾರೆ. ರಾಮೇಶನ ಅರಮನೆಯಲ್ಲಿ ಕಾಣುವ ಕೌತುಕವು ದ್ವಾರಕೆಯನ್ನು 'ಉತ್ತಮೋತ್ತಮ ವೈಕುಂಠ'ವೆಂಬುದನ್ನು ಭಾವಿಸಿ, ಸಡಗರ ಸಂಭ್ರಮಗಳಿಂದ ನಿರೀಕ್ಷಿಸುವ ಚಿತ್ರಣವು ಸರಳವಾದ ವರ್ಣನೆಯಲ್ಲಿದೆ. ''ವಿರಜಾ ತಾನೆಂದು ಕರೆಸುತ ನಾನಾ ಪರಿ ಗಿಳಿ ಕೋಗಿಲಾಗಿ ಮೆರೆವೋಳು'' ಶ್ರೀದೇವಿ, ಎಂಬುದಾಗಿ ತಿಳಿಸುತ್ತಾ, ಸುಂದರ ಚಿತ್ತಾರ ಬಿಡಿಸಿದ್ದಾರೆ.

''ಮುತ್ತು ಮಾಣಿಕ್ಯ ಅಳವಟ್ಟ ಹರಿಪುರ ರತ್ನ ಝಲ್ಲೆ ಬಿಗಿದಾವೆ''
'ರಾಜ ಮಾಣಿಕ ಗೋಡೆ ಗಾಜಿನ ನೆಲೆಗಟ್ಟು
ಈ ಜೋಡು ದ್ರವ್ಯ ಎಲ್ಲಿಲ್ಲ'
'ಉತ್ತರ ಪಾಲ್ಗಡಲೊಳು ಮುತ್ತು ಮಾಣಿಕರತ್ನ
ಪಚ್ಚ ಕರ್ಪೂರ ಸುಳಿಗಾಳಿ ಇದು
ನಮ್ಮ ಅಚ್ಯುತಾನಂತ ನರಮನೆಯ''[೧೧]

ಇಲ್ಲಿ ಮಹಿಳೆಯರಿಗೆ ಅದರಲ್ಲೂ ಸೌಭಾಗ್ಯ ಸಿರಿಯಾದ ಮುತ್ತೈದೆಯರಿಗೆ ''ಕುಂಕುಮ, ಅರಿಶಿಣ, ಅಲಂಕಾರ ದ್ರವ್ಯ ಅಂಕ ಅಂಕಣಕ ನೆರವ್ಯಾವ... ಕಂಕಣ ಕೈಯ ಕೆಲದೆಯರು ಕಡೆಯಲ್ಲಾ ಎಂದು ಹಾಡುತ್ತಾ, ಆಭರಣಕ್ಕೆ ಸಮನಾದುದು ಅರಿಶಿನ, ಕುಂಕುಮ, ಕಂಕಣವೆಂದು ಹಾಡುವ 'ಕೆಲದೆಯರು' ಸಖೀಜನರು, ಗೆಳತಿಯರು ಎಂಬರ್ಥವೊದಗುವುದು. ಪ್ರತಿಯೊಬ್ಬ ಮಹಿಳೆಗೂ ಈ ಕಾವ್ಯವು ಸ್ಫೂರ್ತಿಯುಂಟುಮಾಡುವ ಭಕ್ತಿಯೆಳೆಯನ್ನು ಪರಿಚಯಿಸುವಂತಿರುವುದು.

ಅದರಂತೆಯೇ, ಅಪ್ಪ ನೀಡುವ ಆಭರಣಗಳ ಅಲಂಕಾರದ ವರ್ಣನೆಗಳು ವಿಶಿಷ್ಟತೆಯುಳ್ಳವು. ದ್ವಾರಕೆಯ ಹೊಗಳುತ ಕೃಷ್ಣನಿರುವ ತಾಣವು ಬಹು ಮನೋಹರವಾದುದು ಎಂಬುದನ್ನು ಹೀಗೆ ವಿವರಿಸಿದ್ದಾರೆ.

''ಎಷ್ಟು ಸಂಪದವಮ್ಮ ದ್ವಾರಕೆ
ಎಂದು ಸಂತುಷ್ಟನಾದನು ಬೊಮ್ಮ
ಕೃಷ್ಣನ ಹಾಡುತ ಪಾಡುತ
ಜನರೆಲ್ಲ ಉತ್ಕೃಷ್ಟರಾಗಿಹರಮ್ಮ
.............
ಕೋಟಿ ಸೂರ್ಯನ ಬೆಳಕಿಲೆ ಹೊಳೆವಂಥ
ಹಾಟಕಾಂಬರನ ಅರಮನೆ
ರನ್ನದ ಬಾಗಿಲು, ಚಿನ್ನದ ಚೌಕಟ್ಟು
ಹೊನ್ನ ಕಳಸಗಳು ಹೊಳೆವೋವೆ
...........
ಇದು ನಮ್ಮ ಪನ್ನಗಶಯನನ ಅರಮನೆ''[೧೨]

ಇಲ್ಲಿ ಹರಿಸಂಕೀರ್ತನೆಯ ಉತ್ಕೃಷ್ಟತೆಯು ಆಭರಣಗಳ ವರ್ಣನೆಯಲ್ಲಿ ಅಡಗಿದೆ. ಶ್ರೇಷ್ಠವೆನಿಸುವ 'ರನ್ನ, ಚಿನ್ನ, ಹೊನ್ನಕಳಸ' ಪದಗಳು ಗಮನಸೆಳೆಯುತ್ತವೆ.

''ರಂಗು ಮಾಣಿಕ ಬಿಗಿದ ಅಂಗಳದೊಳಗಿನ್ನು
ಬಂಗಾರದ ಬೆತ್ತ ಹಿಡಕೊಂಡು....''
ಜಾಳಿಗೆ ಮುತ್ತು ಜಡದಾವೆ
................
ಕನಿಯಾದ ಕದಗಳು ಚಿನ್ನದ ಚೌಕಟ್ಟು''
''ವಜ್ರ ಮಾಣಿಕ್ಯ ಬಿಗಿದು ಸಜ್ಜಾದ ಆಭರಣವು
ಗೆಜ್ಜೆ ಸರಪಳಿಯು ಗಿಲುಕೆಂದು''[೧೩]

ಎಂದು, ಸಾಲು ಸಾಲು ಆಭರಣಗಳ ವರ್ಣನೆಯಿಂದ ಶ್ರೀರಾಮೇಶನನ್ನು ವೈಭವೀಕರಿಸುವ ಅವ್ವ, ತನ್ನಳೊಗನ್ನು ಭಕ್ತಿಯ ಆಭರಣದಿಂದ ಸಿಂಗರಿಸಲು ಈ ಲೌಕಿಕ ಆಭರಣಗಳ ನೆರವನ್ನು ಪಡೆಯುತ್ತಾಳೆ. ಮುಂದುವರೆದು, ಎಷ್ಟೆಷ್ಟು ಸಿಂಗರಿಸಿ ವರ್ಣಿಸಿದರೂ ಸಾಲದೆಂಬಂತೆ ಹೆಂಗಳೆಯರ ಮನಸ್ಸು ಆಕರ್ಷಿಸುವ ಹೊಸ ಹೊಸ ಆಭರಣಗಳ ಜೋಡಣೆಯನ್ನು ಕಾಣಬಹುದು. 'ವಜ್ರ, ಮಾಣಿಕ್ಯ ಬಿಗಿದು ಸಜ್ಜಾದ ಆಭರಣವು' ಎಂಬುದು ವಜ್ರ, ಕಣ್ಣು ಕೋರೈಸುವ, ಮಾಣಿಕ್ಯವು ಅಪರೂಪದ ಹರಳು, ಇವೆಲ್ಲವುಗಳ ದೀಪ್ತಿಯಿಂದ ಕೃಷ್ಣನ ಅರಮನೆಯನ್ನು ಕಾಂತಿಯಿಂದ ಕಂಗೊಳಿಸುವಂತೆ ಮಾಡುತ್ತಿರುವುದು.

''ಕಡಗ ಸರಪಳಿಯು ದಿವ್ಯ ಬೆಡಗಿನಾಭರಣ
ಮುಕುಟ ಕಡಿಗಂಟಿ ಮುತ್ತುಗಳ ಜಡವುತ...........

ಕೆತ್ತಿಗೆ ಕುಸುರಾದ ಉತ್ತಮ ಆಭರಣಗಳು
ಮುತ್ತಿನ ಮಾಲೆಗಳು ಅಲುಗುತ..........
ಕಿರುಗಜ್ಜೆರುಳಿಯ ಸರಿಸುತ ರಾಮೇಶನ...........
ಪಟ್ಟೆ ಪಟ್ಟಾವಳಿ ಕೊಟ್ಟರು ರಂಗಗೆ
ಇಟ್ಟರು ದಿವ್ಯ ಮುಕುಟ ಮುತ್ತಿನ ಹಾರ.........
ಪಚ್ಚೆ ಮಾಣಿಕ ಬಿಗಿದ ಹೆಚ್ಚಿನ ಸರಗಳು ......
ಪಂಕಜನಾಭಗೆ ವಂಕಿ ಬಾಪುರಿ ಇಟ್ಟು.........
ಕಂಕಣ ಕಡಗ ಮೊದಲಾಗಿ ರಂಗಗೆ
ಅಲಂಕಾರ ಮಾಡಿ ಕೆಲದೆಯರು
ಪಂಚಬೆರಳಿಗೆ ತಕ್ಕ ಮಿಂಚು ಮುದ್ರೆಗಳಿಟ್ಟು......
ಪಂಚರತ್ನದಲಿ ರಚಿಸಿದ ವಡ್ಯಾಣ............

ಅವ್ವ ತನ್ನ ಪದಸಾಮರ್ಥ್ಯವನ್ನೆಲ್ಲವನ್ನು ಆಭರಣಗಳ ಜೋಡಣೆಯ ಸುಂದರವಾದ ವರ್ಣನೆಯಲ್ಲಿರುಸುತ್ತಾರೆ. ಈ ಮೂಲಕ ಹಾಡುಗಳು ಓದುಗರನ್ನು ಮತ್ತೊಮ್ಮೆ ಮಗದೊಮ್ಮೆ ಓದಿಸಿಕೊಳ್ಳುವಂತಿವೆ. ಅದರಲ್ಲೂ ಮದುವೆ, ಹಬ್ಬ, ಹರಿದಿನಗಳಲ್ಲಿ ಶುಭಸಂಭ್ರಮಕ್ಕೆ ಹಾಡುವ ಈ ಹಾಡುಗಳಲ್ಲಿ ಅವ್ವನವರ ಕಾವ್ಯ ಸಂಪತ್ತು ಹೆಂಗಳೆಯರ ಮನಸ್ಸಿಗೆ ಮುದನೀಡುವಂತಿರುವುದು. ರಂಗನ ಭಕ್ತಿಗೆ ಮೊರೆಯುವ ಭಕ್ತ ಸಮೂಹಕ್ಕೆ ಅಲಂಕಾರದಿಂದ ಕಂಗೊಳಿಸುವ ಕೃಷ್ಣನ ದ್ವಾರಕೆಯನ್ನು ಚಿತ್ರಿಸಿದ್ದಾರೆ. ಹಾಗೂ ಅನೇಕಾನೇಕ ಪ್ರಾಕೃತಿಕ ವರ್ಣನೆಗಳಿಂದಲೂ ಸಿಂಗರಿಸುತ್ತಾರೆ. ಸಾಮಾನ್ಯವಾಗಿ ಹೆಂಗಳೆಯರ ಮನಸ್ಸನ್ನು ಕಂಪು ಸೂಸುವ ಹೂವಿಗೆ, ಸಮೃದ್ಧಿ ಹಸಿರು ತುಂಬಿರುವ ಗಿಡಮರಗಳಿಗೆ, ಚಿಗುರಿನ ಲತೆ, ಬಳ್ಳಿಗಳಿಗೆ ಹೋಲಿಸುವ ಕವಿ ಮನಸ್ಸನ್ನು, ಅವ್ವನವರ ಕೀರ್ತನೆಗಳಲ್ಲೂ ನಾವು ವಿಶೇಷವಾಗಿ ಕಾಣಬಹುದಾಗಿದೆ. ಅವ್ವ, ಪ್ರಕೃತಿ ಪ್ರಿಯಳು ತನ್ನ ಆರಾಧ್ಯದೈವ ಕೃಷ್ಣನನ್ನು, ಕೃಷ್ಣನಿರುವ ದ್ವಾರಕೆಯ ಸೌಂದರ್ಯ ವರ್ಣನೆಗೆ ಅನೇಕ ಪ್ರಕೃತಿ ವರ್ಣನೆಗಳನ್ನು ಬಳಸಿಕೊಂಡಿದ್ದಾರೆ.

**ಅವ್ವನವರ ಕೀರ್ತನೆಗಳಲ್ಲಿ ಪ್ರಾಕೃತಿಕ ವರ್ಣನೆ**

"ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ"
'ಈಚಲ ಗಿಡದಲಿ ಗೋಕ್ಷೀರ ಕರೆದಂತೆ'
'ಅಚ್ಯುತನ ನಖತಾಕಿ ಬಿಚ್ಚಿ ಬ್ರಹ್ಮಾಂಡವು
ಸ್ವಚ್ಛ ಜಲವಾಗ ಸುರಿದಾವು'
'ಕುಕ್ಷಿಲೆ ಜಗವ ಸಲಹುವೆ ಶೂರ್ಪಾಲಿ
ವೃಕ್ಷರಾಜನ ಬಲಗೊಂಬೆ'[೨೮]

ಹತ್ತಿರೆ ಹರವು ಸರೋವರದೊಳಗಿನ್ನು, ಜತ್ತಾಗಿ ಆಡೋಗಿಳಿಹಿಂಡು ಬಾಳೆ, ನಿಂಬೆ, ದಾಳಿಂಬ ವನ, ಎಲೆ ತೋಟ, ಸೀಳಿ ಕುಣಿಯೋ ಕಪಿಹಿಂಡು ಹೀಗೆ, ಸಾಲು ಸಾಲುಗಳಲ್ಲಿ ಮಾನವರ ಬಳಕೆಯಲ್ಲಿಯೇ ಶ್ರೇಷ್ಠವೆನಿಸುವ ಮರ, ಗಿಡ, ಹಣ್ಣುಗಳು ಕೀರ್ತನೆಗಳಲ್ಲಿ ಸಮೃದ್ಧಿಯಿಂದ ತುಂಬಿ ತುಳುಕಾಡುತ್ತವೆ. ಅತ್ಯಂತ ಸಹಜ ಪ್ರಾಸಗಳಲ್ಲಿ ಕಾಣುವ

''ನೆಲ್ಲಿ ನೇರಲ ನಿಂಬೆ ಮಲ್ಲಿಗೆ ವನದೊಳು
ಅಲ್ಲೆ ಕೋಕಿಲವು ಸ್ವರಗೈವ
.........ಸೊಬಗು
ಇನ್ನೆಲ್ಲೂ ಕಾಣೆ ಧರೆ ಮೇಲೆ
ಆಲ ಅಶ್ವತ್ಥ ಪಲಾಶ ಬಾರಿಯ ವೃಕ್ಷ
ಸಾಲು ಮಂಟಪವು ಸೊಬಗಿಲೆ ರಂಗಯ್ಯ
ವಾಲಗೈವ ವನವಿದು
''ವನವ ನೋಡೋಣ ಬಾರೇ ನೀರೆ
ಅಲ್ಲಲ್ಲಿಗೆ ಸರೋವರ
...........
ತೋಟ ಪಟ್ಟಿಗಳಲ್ಲಿ ನೀಟಾದ ಹಂಸಗಳು
ಆಟವಾಡುತಿರಲು ಹರುಷದಿ
.............
ಅಲ್ಲಲ್ಲೆ ನೀಟಾಗಿ ನಲಿವ ನವಿಲುಹಿಂಡು
.............
ಕಬ್ಬಿನ ತೋಟಕ್ಕೆ ಹಬ್ಬಿದ ಹಂದರ
..............''[೧೫]

ದ್ವಾರಕೆಯ ಸೌಂದರ್ಯವರ್ಣನೆಗೆ ಅಪ್ಪನವರು ಪ್ರಕೃತಿಯ ರಮಣೀಯತೆಯನ್ನೆಲ್ಲಾ ತಮ್ಮ ಕೀರ್ತನೆಗಳಲ್ಲಿ ಬಳಸಿಕೊಂಡಿದ್ದಾರೆ. ಶ್ರೀಕೃಷ್ಣನನ್ನು ಕಾಣಲು ಬಂದ ಸುಭದ್ರ, ದ್ರೌಪದಿಯರು 'ವನವ ನೋಡೋಣು ಬಾರೇ ನೀರೆ', ಎನ್ನುತ್ತಾ, ಅಲ್ಲಿನ ಸುಂದರ ಸರೋವರಗಳಲ್ಲಿ ಈಜುವ ಹಂಸ, ವನದಲ್ಲಿ ನಲಿಯುವ ನವಿಲುಗಳು ಹೀಗೆ, ಉಪಮಾಲಂಕಾರಗಳಲ್ಲಿ ತುಂಬಿ, ಭಕ್ತಿಯ ಮನಸ್ಸನ್ನು ಮತ್ತಷ್ಟು ಮುದಗೊಳಿಸುತ್ತಿರುವುವು.

ಇದರೊಂದಿಗೆ ಕೀರ್ತನೆಗಳು ಸರಳ ಸುಂದರವಾಗಿ ಮೂಡಿಬರಲು ಅವರ ಕಾವ್ಯಾಭಿವ್ಯಕ್ತಿಯು ಕಾರಣವಾದಂತೆ, ಬಹುವಾಗಿ ಮಹಿಳೆಯರನ್ನು ಆಕರ್ಷಿಸುವಂತಿವೆ. ಹಾಗೆಯೇ, ಕೇಳಿಸುವ ದಾಸ

ಸಾಹಿತ್ಯದ ಗುಣ, ಗೇಯ ಪ್ರಧಾನವಾದುದು ಎಂಬುದಕ್ಕೆ ಈ ಕೀರ್ತನೆಗಳೂ ಹೊರತಾಗಿಲ್ಲ. ಭಾಷೆ ಅತ್ಯಂತ ಸರಳವಾಗಿ, ಆತ್ಮೀಯವಾಗಿ ಬೆರೆಯುವ ಗುಣವುಳ್ಳದ್ದು ಮತ್ತು ಅವ್ವನವರ ಪ್ರೀತಿಯ ಗದರಿಕೆಯು, ತುಸು ಒರಟಾದ ವ್ಯಂಗ್ಯವು ಕೀರ್ತನೆಯ ಕಾವ್ಯಗುಣಕ್ಕೆ ವಿಶಿಷ್ಟ ಮೆರಗು ನೀಡಿವೆ. ಇವರ ಕೀರ್ತನೆಗಳಲ್ಲಿ ಎದ್ದು ಕಾಣುವ ಗುಣವೆಂದರೆ, ನೇರನುಡಿಯ, ಖಂಡಿತವಾದಿಯ ಲಕ್ಷಣ. ಅದರಲ್ಲಿಯೂ ತಮ್ಮ ಇಷ್ಟ ದೈವ ಶ್ರೀಕೃಷ್ಣನ ರಾಣಿಯರಾದ ರುಕ್ಮಿಣಿ, ಸತ್ಯಭಾಮೆಯರ ಕಲಹ ಪ್ರಸಂಗ ವಿವರಿಸುವಾಗಲಂತೂ, ಅವ್ವ ಮನೆಯ ಹಿರಿಯಳಂತೆ, ಬಂದ ಸೊಸೆಯರ ಅವಗುಣಗಳನ್ನೆಲ್ಲಾ ಬಿಡಿಸಿ ತೋರಿಸುವಂತಹ ನೇರವಾದ ಖಂಡತವಾದಿಯ ಭಾವವಿದೆ. ಆಪ್ತತೆಯಿದೆ.

''ಸುಗುಣೆಯರಿಬ್ಬರು ಬಂದು
ಹಗರಣವ ಮಾಡಿದರವ್ವ
ಹಗರಣವ ಮಾಡಿದರವ್ವ
ನಗಧರನ ಮುಂದೆ ನಾಚಿಕೆ ಇಲ್ಲವ್ವ
ಸಿಟ್ಟಿಲೆ ತನ್ನದೆಯ ಗಟ್ಟಿಸಿದಳವ್ವ
ತಾ ಗಟ್ಟಿಸಿದಳವ್ವ
ಕಷ್ಟದಿ ಭೀಷ್ಮಿಯು
ನಿಟ್ಟುಸಿರು ಹಾಕಿದಳವ್ವ
ಇತ್ತ ದೂತೆಯು ತಾ
ಥಟ್ಟನೆ ಬಂದಳವ್ವ
ತಾ ಥಟ್ಟನೆ ಬಂದಳವ್ವ
ಇಷ್ಟ ಏನೆಂದು ನೆಟ್ಟನೆ ಕೇಳಿದಳವ್ವ
ಎಷ್ಟು ಹೇಳಲಿ ಈಕೆ
.......................
ಬಂದಿಹಳ್ಯಾತಕವ್ವ
ದಾರಮಲ್ಲಿಗೆ ನಡುವೆ ತೋರಿದಂತವ್ವ
ಅದು ತೋರಿದಂತವ್ವ
ಇವಳ ಹಿರಿತನವೆಲ್ಲವ
ಅರಿಯೆನವ್ವ
ಸಿರಿರಮಿ ಅರಸಗೆ ಸರಿಯಿಬ್ಬರು ನೀವವ್ವ
ನೀವು ಸರಿಯಿಬ್ಬುರವ್ವ

ಬರಿಯ ಕರಕರೆಯ

ಹಿರಿಯರಲ್ಲವ್ವ"[೧೬]

ಒಟ್ಟಾರೆ, ಸುದೀರ್ಘವಾಗಿ ೨೩ ನುಡಿಗಳಲ್ಲಿ ರಚಿಸಿರುವ ಈ ಕೀರ್ತನೆಯು ರುಕ್ಮಿಣಿ, ಸತ್ಯಭಾಮೆಯರ ಕಲಹವನ್ನು, ಸವತಿ ಮತ್ಸರವನ್ನು ತೋರಿಸುವಂತಿದ್ದು, ಅವ್ವನವರ ಕಾವ್ಯ ಕುಶಲತೆಗೆ ಇಲ್ಲಿ ವಿಶೇಷವಾದ ರಸಾಸ್ವಾದನೆಯಿದೆ. ರುಕ್ಮಿಣಿ, ಸತ್ಯಭಾಮೆಯರಿಬ್ಬರ ಹಿರಿಮೆಯನ್ನು, ಇಲ್ಲಿ ಗಣನೆಗೆ ತಾರದೆ ಲೌಕಿಕದ ಸವತಿ ಮತ್ಸರವನ್ನು ತಮ್ಮ ಕಾವ್ಯದಲ್ಲಿ ರಚಿಸಿರುವರು. ತಮ್ಮ ಪದ ನಿರ್ಮಿತಿಯನ್ನು ಅತ್ಯಂತ ಸಹಜವಾದ ಪ್ರಾಸ ಜೋಡಣೆಯಿಂದಲೂ, ವಿಶಿಷ್ಟವಾದ ಉಪಮೆಗಳಿಂದಲೂ ಕೀರ್ತನೆಯ ಸುಂದರತೆಯನ್ನು ತೀಕ್ಷ್ಣ ಕಾಂತಿಯಿಂದ ಕಂಗೊಳಿಸುವಂತೆ ಮಾಡಿರುವರು. ಅದಕ್ಕೆ, ಅವ್ವ, ಬಳಸಿರುವ ತೀಕ್ಷ್ಣ ನಂಜುಕಾರುವ ಪ್ರಾಣಿ, ಆಯುಧ, ಜೊತೆಗೆ ಪ್ರಸಂಗಗಳ ಅನಾವರಣವು, ಪದಾಭಿವ್ಯಕ್ತಿಯ ವೈಶಿಷ್ಟವಾಗಿದೆ.

ರುಕ್ಮಿಣಿ ಸತ್ಯಭಾಮೆಯರಿಬ್ಬರ ಕಲಹಕ್ಕೆ ಕಾರಣ ಶ್ರೀಕೃಷ್ಣನು. ಸತಿಯರಿಬ್ಬರ ಕಲಹದಲ್ಲಿ ಕೃಷ್ಣ ಭಾಗಿಯಾಗದೆ ದೂರವೇ ಉಳಿದುದು, ಪರಸ್ಪರ ಗುಣಗಳ ದೋಷಾರೋಪಣೆಯು ಸತಿಯರ ನಿಂದನಾತ್ಮಕ ರೀತಿಯಿಂದ ರಚನೆಯಾಗಿರುವುದು 'ಸುಗುಣಿ'ಯರೆಂದು ಆರಂಭವಾಗುವ ಈ ಕಾವ್ಯದಲ್ಲಿ ಹಗರಣ ಮಾಡಿ ಪರಸ್ಪರ ದೋಷಗಳ ಎರಚಾಡಲು ಪದಗಳ ಪ್ರಾಸ, ಕಾವ್ಯ ನಿರ್ಮಿತಿಯಲ್ಲಿ ಹಾಸು ಹೊಕ್ಕಾಗಿ ಬಂದಿರುವುವು. ಹಾಡಿನಲ್ಲಿ, ರುಕ್ಮಿಣಿಯು, ಭಾಮೆಯ ಅಹಂಕಾರಕ್ಕೆ ಚಿಕ್ಕ ಚೇಳು, ಅಗ್ಗಿಷ್ಟಿಕೆ, ಭಾವೆಯ ಉಕ್ಕು ಎಂದು ಬಳಸುತ್ತಾ ಕಠಿಣಾತಿ ಕಠಿಣ ಎಂಬಂತೆ ವಿವರಿಸಲು, ಪ್ರಾಣಿಗಳ ಹೋಲಿಕೆಗೆ ಕೆಂಜಿಗ, ಹದ್ದು, ಉರಗ, ಮುಂತಾದವು ಬಳಸಿ ಸಾಮಾನ್ಯರ ಸಿಟ್ಟಿಗಿಂತಲೂ, ಭಾಮೆಯ ಸಿಟ್ಟು, ಅಹಂಕಾರಗಳನ್ನು ಪ್ರಾಣಿ, ಪಕ್ಷಿಗಳ ಉಪಮೆಗಳ ಮೂಲಕ ವಿವರಿಸುವ ಅವ್ವ, ಸಾಮಾಜಿಕವಾಗಿ ಬಳಕೆಯಲ್ಲಿರುವ ದಿನನಿತ್ಯದ ಪರಿಕರಗಳನ್ನೇ ಬಳಸಿರುವಳು.

ಅಷ್ಟಲ್ಲದೇ, ಸುಳ್ಳಿ, ಮುಳ್ಳಿನಂಥವಳವ್ವ ೧. ಶೂಲದಂಥವಳವ್ವ, ಕಳ್ಳಿ, ಮಸೆದಕತ್ತಿಯಂತೆ, ಹೆಸರು ಅಡಗಲಿ, ಕಾಲು ಕೆದರಿ, ಸೊಕ್ಕು, ಅಕ್ಕಸ, ಉಕ್ಕಸ ಇಂತಹ ಪದಗಳನ್ನು ಯಥೋಚಿತವಾಗಿ ಬಳಸಿ ಕಾವ್ಯ ಚಿತ್ರಣ ನೀಡುವಲ್ಲಿ ಉತ್ತಮ ಕವಯಿತ್ರಿಯೆನಿಸುತ್ತಾರೆ. ಯಾವುದೇ ಕವಿ ತನ್ನ ಕಾವ್ಯದಲ್ಲಿ ಸಮಕಾಲೀನ ಜನರು ಜೀವನದಲ್ಲಿ ಬಳಸುವ ನುಡಿ, ಬಳಕೆಯ ವಸ್ತು, ಕಾಣುವ ಪ್ರಾಣಿ ಪಕ್ಷಿಗಳನ್ನು ಉದಾಹರಣೆಗಳನ್ನಾಗಿ ನೀಡುವರು. ಅವ್ವ ಇದಕ್ಕೆ ಹೊರತಾಗಿಲ್ಲ. ಜನಪದರ ಆಡುನುಡಿಯನ್ನು ಅತ್ಯಂತ ಸಮಂಜಸವಾಗಿ ಬಳಸಿಕೊಂಡಿದ್ದಾಳೆ. 'ಅಕ್ಕಸ' ಎಂಬುದು ಸಲಿಗೆ ಎಂದೂ, ಉಕ್ಕಸ ಎಂಬುದು ನಿರ್ದಾಕ್ಷಿಣ್ಯ ಎಂಬರ್ಥ ಸೂಚಿಸುವುದು."ಅವ್ವನವರ ಪ್ರಾಸಜೋಡಣೆಯು ತುಂಬಾ ಸರಾಗವಾಗಿ, ಚಂದವಾಗಿ ಹಾಡಿಸಿಕೊಳ್ಳುವಂತದ್ದು,

''ಭಾಳೆ ಘಾತುಕಳು ರುಕ್ಮಿಣಿಯವ್ವಾ,
ನೀ ಕೇಳೆ ರುಕ್ಮಿಣಿ....
ಗೈಯ್ಯಾಳಿ ...''

ಎಂದು ಹಾಡುವಾಗ ಸಲೀಸಾಗಿ ಸರಿದಾಡುವ ಪದಲಾಲಿತ್ಯವು ಅವರ ಸಾಹಿತ್ಯಕ ಮೌಲ್ಯಗಳಲ್ಲಿ ಮುಖ್ಯ ವಾದದ್ದು. ಇಡಿಯಾಗಿ ೨೩ ನುಡಿಗಳಲ್ಲಿ ರಚಿತವಾಗಿರುವ ಹಾಡಿನಲ್ಲಿ ಒಂದೊಂದು ನುಡಿಯು ಒಂದೊಂದು ಸುಂದರ ಚಿತ್ರಣ ಕಟ್ಟಿಕೊಡುವಂತಹ ಸಾಮರ್ಥ್ಯ ಹೊಂದಿದೆ. ಪ್ರತಿಯೊಂದು ನುಡಿಯಲ್ಲೂ ರುಕ್ಮಿಣಿ, ಸತ್ಯಭಾಮೆಯರ ಗುಣಾವಗುಣಗಳನ್ನು ಸಾದೃಶ್ಯಗಳ ಮೂಲಕ ವಿಸ್ತರಿಸಿರುವುದು ಅವ್ವನವರ ಬೌದ್ಧಿಕ ಕೌಶಲ್ಯಕ್ಕೆ ನಿದರ್ಶನವಾಗಿದೆ.

ಈ ಕೀರ್ತನೆಯ ಕೊನೆಯಲ್ಲಿ 'ಚಂದ್ರನಿಲ್ಲದ ಚುಕ್ಕೆ', 'ದಾರ ಮಲ್ಲಿಗೆ ನಡುವೆ ತೋರಿದಂತವ್ವಾ' ಎಂಬ ಸಾಲುಗಳಿಂದ ಸತಿಯರಿಬ್ಬರ ಕಲಹವು ಕೊನೆಯಲ್ಲಿ ಶಾಂತವಾಗಿ ಒಬ್ಬರನೊಬ್ಬರು ಬಿಟ್ಟಿರಲಾರದಂತಹ ಭಾವವನ್ನು ಸ್ಫುರಿಸುವವು. ಅವ್ವ ನೀಡಿರುವ ಹೋಲಿಕೆಗಳು, ಚೆಂದಾದ ನುಡಿಗಳು ಸೊಗಸಾಗಿ ಮನದಲ್ಲಿ ನಿಲ್ಲುವಂತಿರುವುವು. ಕಟ್ಟ ಕಡೆಯದಾಗಿ ಸತಿಯರಿಬ್ಬರೂ 'ಸಿರಿಯರಸು ರಮಿಯರಸು'ಗೆ ಸರಿಯಾದವರು ಎಂದು ಹೇಳುತ್ತಲೇ, ಬಾಳ್ವೆಯಲ್ಲಿ ಕರೆ ಕರೆ ಮಾಡುವುದು ಹಿರಿತನಕ್ಕೆ ತಕ್ಕುದಾದುದಲ್ಲ ಎಂದು ಹೇಳಿದ್ದಾರೆ. ಇಲ್ಲಿ ನೇರವಾಗಿ ಸಾಮಾಜಿಕ ಸಂದೇಶ ನೀಡುವ ಗೃಹಿಣಿಯರಿಬ್ಬರ ನಡವಳಿಕೆಗಳು ಬಿಂಬಿಸುವ ಚಿತ್ರಣವಾಗಿದೆ. ಹೀಗೆ ಸಾಗುವ ಕಾವ್ಯ ನಿರ್ಮಿತಿಯು ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ. ಎಲ್ಲಿಯೂ ಪದವು ಪುನಾರವರ್ತನೆಯಾಗಿ ಬೇಸರ ತರಿಸದೆ ಓದಿಸಿಕೊಳ್ಳುವ, ಹಾಡಿಕೊಳ್ಳುವಂತಹ ಕುತೂಹಲ ಕಾವ್ಯದಲ್ಲಿ ನೆಲೆಗೊಂಡಿದೆ. ಮುಯ್ಯ ಒಯ್ಯುವ ಹಾಡುಗಳು ಪ್ರತ್ಯೇಕವಾದ ಸಂಗತಿಗಳನ್ನು ಒಳಗೊಂಡಂತೆ ಕಂಡು ಬಂದರೂ, ಒಂದಕ್ಕೊಂದು ಹಾಡುಗಳು ವಿಷಯ ಪೂರಕವಾಗಿರುವಂತೆ ಹೆಣೆಯಲ್ಪಟ್ಟಿವೆ. ಇವೆಲ್ಲವುಗಳ ಜೊತೆಗೆ, ಶಕುನಗಳ ಕುರಿತು, ಹೇಳುತ್ತಾ, ಶುಭ ಶಕುನಗಳು ವಿಜಯಕ್ಕೆ ನಾಂದಿಯಾಗುತ್ತವೆಂಬುದು ಇಲ್ಲಿ ತಿಳಿದುಬರುವ ಸಂಗತಿ. ಇಂದಿಗೂ ಜನಸಾಮಾನ್ಯರಲ್ಲಿ ಈ ನಂಬಿಕೆ ಹಾಸುಹೊಕ್ಕಾಗಿರುವುದನ್ನು ಕಾಣಬಹುದು.

''ವೀರಾಧಿವೀರ ಧರ್ಮರಾಯ ಮುಂದಕ್ಕೆ ಬರಲು
ನೀರಿನ ಕುಂಭ ಎದುರಾಗಿ
........... ರಂಗಯ್ಯನೆ
ಸೂರಿ ಬಿಡುವೋನೆ ದಯವನೆ
ಸಲ್ಲು ಸಲ್ಲಿಗೆ ಲಕ್ಷ್ಮೀನಲ್ಲನ ಸ್ತುತಿಸುತ
ಮಲ್ಲಿಗೆ ತುರುಬಿನ.......ಚಲುವಿಯರೆಲ್ಲ ಹೊರಡಲು

ಮಲ್ಲ ಮರ್ದನನ ಮನೆ ನೋಡ

ಎಲ್ಲರು ಹೊರಡಲು ಹಲ್ಲಿ ಮಾತಾಡಿದವು

.............

ಅಂಗಳಕೆ ಬರುತಿರಲು ಮಂಗಳವಾದ್ಯಗಳಾದವು

.........

ತೇರಿನ ಬೀದಿಯ ದ್ವಾರದಿ ಬರುತಿರೆ

ಕಾಗೆ ಹಾರಿದವು ಬಲಗಡೆಗೆ

.........

ಅಕ್ಕಿ ತೆಂಗಿನಕಾಯಿ, ಚಿಕ್ಕ ನಿಂಬೆಹಣ್ಣು

ಅಚ್ಚ ಮಲ್ಲಿಗೆ ಇದುರಿಗೆ

......... ರಮಿಯರಸು

ನಕ್ಕು ನುಡಿಯವನು ನಮ ಕೂಡ"[೧೭]

ಎಂದು ಹಾಡುವ ಸಾಲು ಸಾಲಿನಲ್ಲೂ ಶಕುನಗಳು ಜಯವನ್ನು ತರುವವೆಂದು, ಮಂಗಳಕರ ವಸ್ತು, ಮಂಗಳವಾದ್ಯಗಳ ನುಡಿಸುವುದು ಒಳ್ಳೆಯ ಕೆಲಸವದು ಮುಯ್ಯ ಒಯ್ಯುತ್ತಾ, ಹರಿಯ ದರ್ಶನ ಪಡೆಯುವುದು ಅದಕ್ಕಾಗಿ 'ಕಾಗೆ ಬಲಗಡೆ ಹಾರಿದವು' ಎಂಬುದು ಪಕ್ಷಿ ಸಂಕುಲದಲ್ಲಿ ಕಾಗೆ ಅಶುಭ ವೆಂದಣಿಸಿದರೆ, ಅವ್ವ ಇಲ್ಲಿ ಅದನ್ನು ಬಲಗಡೆ ಹಾರಿಸಿ 'ಶುಭ' ಎನ್ನುತ್ತಾರೆ.

"ಶಕುನವೆ ಬಲು ಶಕುನವೆ ಸಖಿ ಕೃಷ್ಣನ

ಮುದ್ದು ಮುಖವ ಕಾಂಬುವೆ ನೀನ'

ಹಾಲು ಮೊಸರಿನ ಕುಂಭ ಮೇಲಾದ ಘೃತ ಬೆಣ್ಣೆ

ಸಾಲು ಸಾಲಾಗಿ ಎದುರಾಗಿ ಇಂದೀವರಾಕ್ಷಿ

..........

ಮುತ್ತಿನ ಹೇರು ಇದುರಾಗಿ....."[೧೮]

ನೇರಳೆ ಹಣ್ಣು, ಬಾಳೆಹಣ್ಣು, ಎದುರಾಗಿ ರಂಗನ ದರ್ಶನವನ್ನು ಖಚಿತಗೊಳಿಸುವ ಶುಭ ಶಕುನಗಳು ದರ್ಶನಾಕಾಂಕ್ಷಿಗಳಾಗಿ ಹೊರಟ ಭಕ್ತವೃಂದಕ್ಕೆ ಮನಸ್ಸಂತೋಷಪಡಿಸುತ್ತವೆ. ಅವ್ವನವರ ಪ್ರತಿ ಹಾಡಿನ ಒಂದೊಂದು ಪಂಕ್ತಿಯು ಆಭರಣಗಳ, ಹಣ್ಣು, ಹೂಗಳ ಸಾಲು ಸಾಲು ವರ್ಣನೆಯು ಭಕ್ತಿಪೂರ್ವಕ ಮನಸ್ಸಿನ ಪಕ್ವತೆಯನ್ನು, ತೋರ್ಪಡಿಸುವಂತಿದೆ. ಮುಯ್ಯ ಒಯ್ಯುವ ಹಾಡುಗಳು ಭಕ್ತಿ ಪೂರ್ವಕವಾಗಿಯೂ ಶ್ರೀಕೃಷ್ಣನ ಕಾಣುವ ಕಾತುರದಿಂದಲೂ, ತುಂಬಿರುವುವು. ಅಣ್ಣನ ಕಾಣುವ ಆತುರದಲ್ಲಿರುವ ತಂಗಿಯರನ್ನು 'ಬಾಗಿಲಲಿ ನಿಲ್ಲಿಸಿ ಪಂಥದಿಂದ ಅಡ್ಡಗಟ್ಟಿರುವ ಅತ್ತಿಗೆಯರ ಸರಸದ

ಪಂಥದಲ್ಲಿ ಗೆದ್ದು ಅಣ್ಣನ ದರ್ಶನ ಪಡೆಯುವಾಗ ಕೃಷ್ಣನು ತಂಗಿಯರ ಪರವಾಗಿ ಮಡದಿಯರನ್ನು ಸಮಾಧಾನಿಸುವ ಸುಂದರ ಚಿತ್ರಣ ಹೀಗೆ ಮೂಡಿ ಬಂದಿರುವುದು.

''ಹಾದಿ ಬೀದಿಯ ಮಾತು ಸಾಧಿಸುವರೆ ನೀವು
ವೇದಾಂತ ಮಳೆಯಗರೆದಾರು
..........ನಿಮ್ಮ ಮುಖ
ಆದೀತು ಸಣ್ಣ ಸಭೆಯೊಳು''

ಮುಯ್ಯದ ಹಾಡುಗಳು ವಿಶೇಷವಾಗಿ ಮದುವೆ ಹಾಗೂ ಶುಭ ಸಂದರ್ಭಗಳಲ್ಲಿ ಹಾಡುವಂತಹ ವಾಗಿವೆ. ಇಂದಿಗೂ ಅವು ಉತ್ತರ ಕರ್ನಾಟಕದ ಮನೆಗಳಲ್ಲಿ ಹಬ್ಬ ಹರಿದಿನಗಳಲ್ಲಿ ಹಾಡಿಸಿಕೊಳ್ಳುತ್ತಿವೆ. ಈ ಹಾಡುಗಳೆಲ್ಲ ಮಹಾಭಾರತದ ಸಂಗತಿಗಳನ್ನು ಬಹು ರಂಜನೀಯವಾಗಿ ಒಳಗೊಂಡಿವೆ. ಮಹಾಭಾರತದ ಕಥೆಯನ್ನು ಮಹಿಳೆಯರ ದೃಷ್ಟಿಯಲ್ಲಿ ಹಾಡಿರುವುದನ್ನು ಇಲ್ಲಿ ನಾವು ಗಮನಿಸಬಹುದು. ದ್ರೌಪದಿ, ರುಕ್ಮಿಣಿ ಭಾಮೆಯರ ಭಾವನೆಯಲ್ಲಿ ಕಾಣಸಿಗುವ ಚಿತ್ರಣ ಅವ್ವನವರ ಸಮಕಾಲೀನ ಸಮಾಜದ ರೀತಿ ನೀತಿಗಳಿಗೆ ಸ್ಪಂದಿಸುವ ಗುಣವನ್ನು ತಿಳಿಸುವುದು. ಐವರು ಪತಿಯರನ್ನು ಒಳಗೊಂಡು ಅಂದು ದ್ರೌಪದಿ ಎದುರಿಸಿದ ಸಾಮಾಜಿಕ ಪ್ರಶ್ನೋತ್ತರಗಳನ್ನು ಇಲ್ಲಿ ಅತ್ತಿಗೆಯರ ಪ್ರಶ್ನೆಗಳ ಸರಣಿಯಲ್ಲಿದ್ದ ಸಂಗತಿಯನ್ನು ಆಶ್ಚರ್ಯದಿಂದ ಕಾಣುತ್ತಿರುವಂತೆ ಹೇಳುವ ಹಾಡು ಕೇಳುಗರ ಕಣ್ಮುಂದೆ ಚಿತ್ರಣವನ್ನು ಕಟ್ಟಿಕೊಡುತ್ತದೆ.

''ಲೋಕದೊಳಗೆ ಏಕಪತಿಯುಂಟು
ಏಕಕಾಲದೆ ಐವರ
ಏಕ ಕಾಲದಲೆ ಐವರನ ಕೂಡೋದು
ನಾ ಕಾಣೆನೆಲ್ಲೋ ಕೌತುಕವ''
..........
ಎಲ್ಲ ನಾರಿಯರೊಬ್ಬ ನಲ್ಲನಬೆರಿಯೆ
ಬಲ್ಲಿದ ಭೂಪರೈವರು
ಬಲ್ಲಿದ ಭೂಪರೈವರನೊಲಿಸಿದಿ
ಎಲ್ಲರಂತಲ್ಲ ಬಲುಧೀರೆ''
ಕೇಳ ದ್ರೌಪದಿ ರಾಜ್ಯವಾಳೋ ಗಂಡನ ಕೈಲೆ
ಲಾಳಿ ತಕ್ಕೊಂಡ ಪರಿಯಂತೆ
............. ಈ ನಡತೆ
ಕೇಳಿದವರೆಲ್ಲ ನಗುತಾರೆ''[೧೯]

ಎಂದು ಹಾಡುವಲ್ಲಿ ದ್ರೌಪತಿಯ ಸ್ಥಿತಿಯನ್ನು ಅಂದಿನ ಸಾಮಾಜಿಕ, ಕೌಟುಂಬಿಕ ಪರಿಸರಗಳಲ್ಲಿ ತಳೆದಿರುವ ಭಾವವನ್ನು ಬಿಡಿಸಿದ್ದಾರೆ. ದ್ರೌಪತಿಯ ಸ್ಥಿತಿಯ ಕಂಡು ಮರುಕ ತೋರದೆ 'ಬಲುಧೀರೆ' ಎನ್ನುವ ದಾಟಿಯು ಮಹಿಳೆಯರಲ್ಲಿ ಅಂತರ್ಮುಖಿಯಾಗಿ ಅಡಗಿರುವ ಮನೋಬಲವನ್ನು ಎಚ್ಚರಿಸುವಂತಿದೆ. ಸಂದರ್ಭಕ್ಕೆ ಸಿಲುಕಿ ಐವರು ಪತಿಯರನ್ನು ಹೊಂದಿದ ದ್ರೌಪತಿಯು ಕೊಡುವ ಉತ್ತರದಲ್ಲಿ ಖಚಿತ, ದೃಢವಾದ ವಿಶ್ವಾಸವನ್ನು ಚಿತ್ರಿಸುತ್ತಾರೆ. ಪ್ರತಿಪದ್ಯದ ಸಾಲು ಅವ್ವನವರ ಸಾಹಿತ್ಯಕ ಮೌಲ್ಯಗಳನ್ನು ಎತ್ತಿತೋರಿಸುತ್ತದೆ. ದ್ರೌಪತಿಯ ಸ್ಥಿತಿಯನ್ನು ಕಂಡು ಅಪಹಾಸ್ಯದಿಂದ ಹೀಗಳೆಯುವ ಅತ್ತಿಗೆಯರ ನುಡಿಗೆ ಉತ್ತರವಾಗಿ ದ್ರೌಪದಿಯು,

''ಅರಸನ ಮಡದಿ ಒಬ್ಬ ಅರಸನ ಮನೆಯಲ್ಲಿ
ನಿರುತ ದಾಸಿಯೆಂದು ಇರುತಲೆ
........ ಸೇವಿಸೋದು
ಈ ಸರಸ ರಾಮೇಶಗೆ ಹರುಷೇನ''

ಎಂದು ಹೇಳುವ ಮಾತು, ಅತ್ಯಂತ ಅರ್ಥಪೂರ್ಣ, ಶಬ್ದಾರ್ಥಗಳೆರಡು ಅವ್ವನವರ ಪದಗಳಲ್ಲಿ ಪೂರಕವಾಗಿ ಸಾಗಿಬರುವಂತಿರುವುದು. ಆ ಹಾಡುಗಳು ಸ್ಫುರಿಸುವ ಅರ್ಥಗಳ ಖಚಿತತೆಯು ಅತ್ಯಂತ ಸ್ವಾರಸ್ಯಕರವಾಗಿರುವುದು.

ದ್ರೌಪದಿಯ ವಸ್ತ್ರಾಪಹರಣ, ಕೀಚಕವಧೆ, ಧರ್ಮರಾಯನು ಜೂಜಿನಲ್ಲಿ ಸೋತು ಐವರು ಅಣ್ಣ ತಮ್ಮಂದಿರು ಅರಸನ ಮನೆಯಲ್ಲಿ ಆಳುಗಳಾಗಿ ದುಡಿಯುವ ಚಿತ್ರಣ ಹಾಗೂ ಶ್ರೀಕೃಷ್ಣನನ್ನು 'ರಥಿಕ'ನಾಗಿ ಮಾಡುವ ದ್ರೌಪದಿಯ ಸ್ಥಿತಿಯನ್ನು ನಿಂದಾಸ್ತುತಿಯಾಗಿ ವಿಸ್ತರಿಸಿ ಹಾಡುವ ಹಾಡು ಮಹತ್ವಪೂರ್ಣವಾಗಿದೆ. ಶ್ರೀಕೃಷ್ಣನನ್ನು ಅವ್ವ ಆರಾಧ್ಯ ದೇವರೆಂದು ಪೂಜಿಸುತ್ತಿದ್ದರೂ ಕೃಷ್ಣನನ್ನು ದಶಾವತಾರಗಳಲ್ಲಿ ವರ್ಣಿಸುವಾಗ ತಮ್ಮ ಬಲು ಖಚಿತ ನಿಂದಾಸ್ತುತಿಯಿಂದಲೇ ಸ್ತುತಿಸಿರುವುದು ವಿಶೇಷ. ಅಭಿಮಾನದ ದೈವ ಕೃಷ್ಣನಾದರೂ, ಆತನನ್ನು ತಮ್ಮ ತೀಕ್ಷ್ಣ ನುಡಿಗಳಿಂದ ವರ್ಣಿಸಿದ್ದಾರೆ.

''ನಾರಿಯರಿಬ್ಬರ ಬಿಟ್ಟು ನೀರೊಳಡಗಿದ
ಮಾರಿ ತೋರದಲೆ ನೆಲವನೆ
........... ಬಗಿದು
ಅತಿ ಕ್ರೂರನಾದರೂ ಬಿಡರೆಲೆ ಸಖಿಯೆ''

ಸತಿಯರಿಬ್ಬರನ್ನು ಬಿಟ್ಟು ನೀರೊಳಗೆ ಅಡಗಿ ಕುಳಿತ ಮತ್ಸ್ಯಾವತಾರ, ಗೋಪಾಲನಾದದ್ದು, ಹೀಗೆ ಯಾವ ಪ್ರಸಂಗ ಹೇಳಿದರೂ, ಅತ್ಯಂತ ಸುಲಭವಾಗಿ ಓದುಗರಿಗೆ ಅರ್ಥವಾಗಿಬಿಡಬೇಕು ಎಂಬುದು ಅವ್ವನವರ ಆಶಯವಾಗಿರುವುದು. ನಂತರ ಬರುವ ಕೀರ್ತನೆಗಳಲ್ಲಿಯೂ ದ್ರೌಪದಿಯ ಛಲ, ಆಕೆಗೆ

ಆದ ಅವಮಾನದ ಸಂಗತಿಗಳನ್ನು ಸರಳವಾಗಿ ಅರ್ಥೈಸುವ ಅವ್ವನವರ ಪದ ನಿರ್ಮಿತಿ ಹಾಗೂ ಹಾಡುಗಳಲ್ಲಿ ಬಳಸುವ ಪ್ರಾಸ ಜೋಡಣೆಯು ಪುನರ್ಮನನಕ್ಕೆ ಅನುಕೂಲವೆನಿಸುವುದು.

ಮುಯ್ಯದ ಹಾಡುಗಳಲ್ಲಿ ಕೃಷ್ಣ, ರುಕ್ಮಿಣಿ, ಸತ್ಯಭಾಮೆ, ಪಾಂಡವರು, ದ್ರೌಪದಿ, ಸುಭದ್ರೆಯರ ವ್ಯಕ್ತಿತ್ವ ಅವಲೋಕನ ಕಾರ್ಯವು ಸುಲಲಿತಾಗಿ ನಡೆದಿರುವುದು. ಪ್ರತಿಯೊಂದು ಪಾತ್ರದ ವಿಶ್ಲೇಷಣಾತ್ಮಕ ವಿವರಣೆಯು ಹಾಡುಗಳಲ್ಲಿ ದೊರಕುವುದು. ಪಾತ್ರ ಯಾವುದಾದರೇನು, ಅಲ್ಲಿನ ಸಂದರ್ಭಾನುಸಾರ ಕವಯಿತ್ರಿಯು ತನ್ನ ಮನೋಭಿಪ್ರಾಯಕ್ಕೆ ತನ್ನ ಕಾಲದಲ್ಲಿನ ಜನಾಭಿಪ್ರಾಯವನ್ನು ಸೇರಿಸಿಕೊಂಡು ವರ್ಣಿಸಿರುವ ದ್ರೌಪದಿಯ ಚಿತ್ರಣವು ವಿಶಿಷ್ಟವಾದುದೆಂದೇ ಹೇಳಬೇಕು.

ದ್ರೌಪದಿಯು ಐವರು ಪತಿಯರನ್ನುಳ್ಳವಳಾಗಿದ್ದು, ಆಕೆಯ ಚಾರಿತ್ರ್ಯಕ್ಕೆ ಮನ್ನಣೆ ದೊರೆತಿದ್ದು. ಅವಳನ್ನು ಪಂಚ ಪತಿವ್ರತೆಯರಲ್ಲಿ ಒಬ್ಬಳೆಂದು ಗುರುತಿಸಿ ಗೌರವಿಸಿದ ಕಾಲದಲ್ಲೇ, ಆಕೆಯ ಮನೋಭಾವವನ್ನು ಕೆಣಕುವಂತೆ ದ್ರೌಪದಿಯ ಅತ್ತಿಗೆಯರ ನುಡಿಯಲ್ಲಿ ಅವ್ವ ಹೀಗೆ ಕುಟುಕಿದ್ದಾಳೆ. ಪರೋಕ್ಷವಾಗಿ ಸಂತೈಸಿದ್ದಾಳೆ.

''ಕತ್ತಲೆಗಂಜುವುದೇನು
ಮೈದುನ ನಿನ್ನ ಬತ್ತಲೆ ಮಾಡಿದನ
ಚಿತ್ತಸ್ವಾಸ್ಥ್ಯನಾದ ಚಪಲಾಕ್ಷಿ ನೀ ಇಂಥ
ಕತ್ತಲೆಗಂಜುವುದೇನ
...........''೨೦

ದ್ರೌಪದಿಯ 'ವಸ್ತ್ರಾಪಹರಣ'ವು ಎಂತಹ ಗಟ್ಟಿ ಮನಸ್ಸುಳ್ಳವರಿಗೂ ಅಳುಕು ತರಿಸುವಂತಹದ್ದು, ಇಲ್ಲಿ ದ್ರೌಪದಿಯ ಮನೋಸಾಮರ್ಥ್ಯ ಮೆಚ್ಚಿಕೆಯ ರೂಪದಲ್ಲಿ ಪ್ರಕಟಗೊಂಡಿರುವುದು. ಅವ್ವನವರ ಕೀರ್ತನೆಗಳು ಸಮಸಮವಾಗಿ ಸಂಸ್ಕೃತ ಹಾಗೂ ಜನಪದರ ನುಡಿಗಳನ್ನು ಅಳವಡಿಸಿಕೊಂಡಿವೆ. 'ಶ್ರುತ್ಯರ್ಥ', ಭೃತ್ಯ, ಹೀಗೆ ಅನೇಕಾನೇಕ ಪದ ಸಮೂಹಗಳನ್ನು ನಾವು ಗಮನಿಸಬಹುದು. ಇದರೊಂದಿಗೆ ಜನಪದರ ನಾಡು-ನುಡಿಗಳನ್ನು ಅಷ್ಟೇ ಸೊಗಸಾಗಿ ತಮ್ಮ ಹಾಡಿನಲ್ಲಿ ಬಳಸಿಕೊಂಡಿರುವರು.

"ಬಾಳುವರ ಮನೆ ಮುಂದೆ ಕೋಳಿಕೂಗಿದಂತೆ"
"ಆನೆಯ ಸಂಗಡ ಆಡು ಹುಲ್ಲು ಮೆಯ್ದರೆ"
'ಮಾನುಳ್ಳ ಮಗಳಿಗೆ ನಾನಾ ಮಾತುಗಳಂದಿ', ''ಹೋಕೆ ಮಾತುಗಳೆಷ್ಟು''

ಇಂತಹ ವಾಗ್ರೂಢಿಗಳು ಅವ್ವನವರ ಕಾವ್ಯದಲ್ಲಿ ಹೇರಳವಾಗಿ ದೊರೆತು ಹಾಡು ಪರಿಪೂರ್ಣ ಎನಿಸುತ್ತವೆ. ಹೀಗೆ ಅರ್ಥ ನೀಡುತ್ತಾ ಸಾಗುವ ಪರಿಯು, ಹೋಲಿಕೆಯ ಮಾತುಗಳು ಮತ್ತಷ್ಟು ಸ್ವಾರಸ್ಯ

ನೀಡುವಂತಿವೆ. ಪಾಂಡವರ ವನವಾಸವನ್ನು ಕೃಷ್ಣನು ಹಾಸ್ಯಮಾಡಿ ನುಡಿಯುತ್ತಿರುವ, ಜರೆಯುವ ಪ್ರಸಂಗವು ಇದರೊಡನೆ ಕೃಷ್ಣನ ದಶಾವತಾರವನ್ನು ತನ್ನ ನಿಂದಾಸ್ತುತಿಯಿಂದಲೇ ಬಿಡಿಸಿರುವಳು. ಆಕೆಯ ಶಬ್ದಾರ್ಥ ಚಿತ್ರಣವು ಓದುಗರಿಗೆ ಸುಂದರವಾದ ಸನ್ನಿವೇಶವನ್ನು ನಿರ್ಮಿಸಿಕೊಡುತ್ತಿದೆ.

''ದನವ ಕಾಯ್ವನೆ ದೈನ್ಯ ಬಡುವವನೆ
ವನಜಭವಾಂಡಕೆ ಒಡೆಯನಾಗೆಂದರೆ
ಒಲ್ಲದೆ ವನವನ ತಿರುಗಿದನಮ್ಮ ನೋಡಮ್ಮಯ್ಯ
ಗೋಪಾಲ ಶಬ್ದಾರ್ಥ ನೀ ಕೇಳಿ
ಶ್ರೀಕೃಷ್ಣ ಕೋಪವಿನ್ಯಾಕೋ ಎನಮ್ಯಾಲೆ
ನೀ ಪೇಳಿಕೊಂಡ್ಯೊ ನಿಷ್ಕಪಟಿ
''ನಾರುವ ಮೈಯವ ನೀರೊಳು ಅಡಗಿದ
ಹಂದಿ ಮೈಯವನೆ ಮಹಾಕೋಪಿ - ವರಹಾವತಾರ''
ಕೊಡಲಿಯ ಪಿಡಕೊಂಡ ಪಡೆದ ಮಾತೆಯ
ಕೊಂದೆ ಒಡಲಿಗಿಕ್ಕದಲೆ ಮಡದಿಯ - ''ಪರಶುರಾಮ''
.......... ಕೊಂಡೊಯ್ದು
ಅಡವಿಗಟ್ಟಿದ ಮಹಾ ಮಹಿಮನೆ - ''ರಾಮ''[೨೧]

ಇಲ್ಲಿ ಲೆಂಡ, ಭಂಡ, ಪುಂಡ ಎಂಬ ಕನ್ನಡದ ಆಡುನುಡಿಗಳನ್ನು ಬಹಳ ಸಲೀಸಾಗಿ ಎಲ್ಲಿಯೂ ಪದ್ಯದ ಭಾವಕ್ಕೆ ಧಕ್ಕೆ ಬಾರದಂತೆ ಬಳಸಿದ್ದಾರೆ. ಭಾವಾರ್ಥದಲ್ಲಿ ಹೊಳೆಯುವ ಅರ್ಥವೆಲ್ಲವನ್ನು ಪದ, ಪದವು ಸೇರಿ ನುಡಿಸುವಂತಿರುವುದು. ಹಾಗೆಯೇ ಅವ್ವನವರ ಪದಗಳಲ್ಲಿ ಯಥೇಚ್ಛವಾಗಿ ಗಾದೆ ಮಾತುಗಳು ಬಳಕೆಗೊಂಡಿವೆ.

''ಹೊರಗಿಂದ ಬಂದಳು ತಿರುಗಲ ತಿಪ್ಪಿಯು
ಹೆರವರಿಗುಪಕಾರಿ ಮನೆಗೆ ಮಾರಿ''

ಕೃಷ್ಣನನ್ನು ಹೊಗಳುವ, ಭಕ್ತಿಯ ಪರಿಪೂರ್ಣ ಹಾಡುಗಳಿಗಿಂತಲೂ, ಕೃಷ್ಣನ ಕುರಿತು ಅಪವಾದವನ್ನು ಅಷ್ಟೇ ಸಮರ್ಥವಾಗಿ ಬಳಸಿಕೊಂಡು ಎಲ್ಲಿಯೂ ಕೃಷ್ಣಭಕ್ತಿಗೆ ಭಂಗ ಬಾರದಂತೆ ಕಾವ್ಯ ರಚಿಸಿದ್ದಾರೆ. ಕಾವ್ಯ ಎಂಬುದು ಬರಿಯ ಸದ್ಗುಣಗಳನ್ನೇ ಹೇಳುವುದಲ್ಲ, ಅದರೊಡನೆ ಗುಣಾವಗುಣಗಳ ಪರಿಶೀಲನೆಯೂ ಆಗುತ್ತಿರುವುದು ಇವರ ಕಾವ್ಯದ ವಿಶೇಷವಾಗಿರುವುದು.

''ಸಾಕೊ ರಂಗ ಅರಸುತನ ಯಾಕೊ ಯಾಕೊ
ಗೋಕುಲದ ಗೊಲ್ಲರು ನುಗಿಸಿ ಗಲ್ಲವ ಹಿಂಡಿ

ಕಾಕು ಮಾಡಿದ್ದು ನಿನಗೆ ಬೇಕೋ ಬೇಕೋ
ರುದ್ರ ಬ್ರಹ್ಮ ಹತ್ಯಾಕಾರ, ಕ್ಷುದ್ರ ಬಲೀಂದ್ರನು
ಕದ್ದೊಯ್ದು ಸುವರ್ಣ ಮುಕುಟವ
............. ಬಲರಾಮ
ಮದ್ಯಪಾನಿ ಎಂದು ನುಡಿದನು....
ಮಗನ ಮಗನು ಬಲು ಕೊಂಡೆಗಾರನಾದ
ಮಗಳ ಮಗ ನಿನ್ನ ಹಣೆಗಚ್ಚಿದ
........... ಕಂಡು
ನಗುತಾರೊ ನಿನ್ನ ಸರಿಯವರು....
ಮಾತೃದ್ರೋಹಿ, ಶುಕ, ಪಿತೃದ್ರೋಹಿ ಪ್ರಹ್ಲಾದ,
ಭ್ರಾತೃದ್ರೋಹಿ ವಿಭೀಷಣ
............ ಇವರು ಮುಖ್ಯ ಪಾತ್ರರೊ ನಿನ್ನ ಕರುಣಕೆ
ಸ್ವಾಮಿದ್ರೋಹಿ ಅಕ್ರೂರ, ಗುರುದ್ರೋಹಿ ಪ್ರಹ್ಲಾದ
ಬ್ರಾಹ್ಮಣರ ದ್ರೋಹಿಗಳು ಯಾದವರು
............. ನಿನ್ನ ಮುಖ್ಯ
ಪ್ರೇಮಕ್ಕೆ ವಿಷಯರೊ.....
ಅರಿಯದಲೆ ನಿನ್ನ ಎದೆಯಲೊದ್ದಭೃಗು ಋಷಿ
ದುರುಳ ಶಿಶುಪಾಲನ ಸಭೆಯೊಳು
.............. ಬೈದದ್ದು
ಸರಿಬಂತೆ ರಾಮೇಶನ ಮನಸಿಗೆ ಮನಸಿಗೆ"[೨೨]

ಇಲ್ಲಿ ಭಕ್ತರ ಮನಸ್ಸಿನ ಅಸಹನೆಯು ಸೂಚಿಸುತ್ತಿದೆ. ಕೃಷ್ಣನ ಭಕ್ತಿಗೆ ಹಾತೊರೆಯುವ ಭಕ್ತರು, ಅನೇಕ ತಪ್ಪುಗಳನ್ನು ಮಾಡಿರುವರನ್ನು ಹೆಸರಿಸಿದ್ದಾರೆ. ಅವರ ತಪ್ಪುಗಳನ್ನೆಲ್ಲಾ ಒಪ್ಪವಾಗಿ ಸ್ವೀಕರಿಸುವ ಕೃಷ್ಣನನ್ನು ಯಾವ ಹಿಂಜರಿಕೆಯಿಲ್ಲದೆ ಪ್ರಶ್ನಿಸುವ ಧಾಟಿ ವಿಶ್ಲೇಣಾತ್ಮಕವಾಗಿದೆ. ಸ್ವಾಮಿ ದ್ರೋಹಿ, ಗುರುದ್ರೋಹಿ, ಪಿತೃದ್ರೋಹಿ, ಮಾತೃದ್ರೋಹಿ, ಬ್ರಾಹ್ಮಣರ ದ್ರೋಹಿಗಳನ್ನು ಹೆಸರಿಸುತ್ತಾ, ಲೋಕ ವಿಚಾರಕ್ಕೆ ಯಾರು ಅಪ್ರಿಯರೋ ಅಂತಹವನ್ನು ಕೃಷ್ಣ ತನ್ನ ಪ್ರೀತಿಗೆ ಒಳಪಡಿಸಿಕೊಂಡಿರುವುದು ಭಕ್ತರ ಮನಸ್ಸಿನ ಅಸಹನೆಯಾಗಿದೆ. ಇಲ್ಲಿಯ ಒಂದೊಂದು ಕೀರ್ತನೆಯು ಪ್ರಸಂಗವೊಂದನ್ನು ವಿಸ್ತರಿಸಿದೆ. ಹೀಗೆ, ಹರಿಭಕ್ತಿಯನ್ನು ತಿಳಿಸುವ ಪಾತ್ರಗಳ ಹಿರಿಮೆ, ಅವಗುಣಗಳನ್ನು ನಿವಾರಿಸುವಂತಿವೆ. ಈ ದಿಸೆಯಲ್ಲಿ ಧರ್ಮರಾಯ, ಭೀಮ, ಅರ್ಜುನ, ನಕುಲ, ಸಹದೇವ, ದ್ರೌಪದಿ, ಸುಭದ್ರೆಯರನ್ನು ಒಳಗೊಂಡಿದೆ. ಧರ್ಮರಾಯನನ್ನು ಕುರಿತ ಪಾತ್ರ ವಿಶ್ಲೇಷಣೆ ಹೀಗಿದೆ,

''ದೊರೆ ಧರ್ಮನೆಂಬೊ ಬರಿ ಬಿಂಕದ ಹೆಸರ್ಯಾಕೊ
ಬರಿಯ ಬಿಂಕದ ಹೆಸರ್ಯಾಕೊ ಜನ ಬರಲಿ ಬರಲಿ
ಜಾಯಿ ತೆರೆಯಬಾರದು ದಯಸಾಕೊ
ಹಿರಿಯನೆಂಬೊ ಹರಲಿಗೆ ತಕ್ಕವನಲ್ಲ
..................
ನಿಮ್ಮ ಚರಿಯವ ಕೇಳುತ ಅಂಜರೊ ನರರೆಲ್ಲಾ

ಧರ್ಮರಾಯ ಎಂಬ ಹೆಸರೇ ಯಾರಿಗೂ ತೊಂದರೆಕೊಡದ ವ್ಯಕ್ತಿತ್ವ ಎಂಬಂತೆ ಪರಿಚಿತವಾಗಿರುವುದು. ಆದರೆ ಇಲ್ಲಿ ಧರ್ಮರಾಯ ಎಂಬುದು ಬಿಂಕದ ಹೆಸರಾಗಿ, ಜನ ಕೂಗಲಷ್ಟೇ ಹೆಸರಾಗಿರುವುದು ಕಾರಣ. ಧರ್ಮರಾಯ ಬೇರೊಬ್ಬರ ಮಾತಿಗೆ ಬೆಲೆ ಕೊಡದವನು. ತನ್ನ ಬುದ್ಧಿಯ ತಾ ಕಳೆದುಕೊಂಡು ರಾಜ್ಯ ನಷ್ಟ ಮಾಡಿಕೊಂಡವನು. ದ್ಯೂತದಲ್ಲಿ ಧರ್ಮರಾಯ ತನ್ನ ತಾನು ಹಾಗೂ ಎಲ್ಲವನ್ನು ಬಹು ಮಾನ್ಯರೊಳು ಕಳೆದುಕೊಂಡಿದ್ದು ಹಿರಿತನವಲ್ಲ ಎಂದು ಧಮರಾಯನ ಹಿರಿಯ ಗುಣಗಳನ್ನು ಎಣಿಸದೆ, ಆತನಲ್ಲಿ ಅಡಗಿದ್ದ ಅಹಂಕಾರ, ಅಪವಾದಗಳನ್ನು ಹೆಸರಿಸಿ, ತಿದ್ದಿ ನಡೆಯುವ ಗುಣವನ್ನು ಪೋಷಿಸುವ ಅಗತ್ಯವನ್ನು ಹೇಳುತ್ತಿರುವಳು. ಹಾಗೆಯೇ, ಭೀಮನನ್ನು ಕುರಿತು ಹಾಡುವಾಗ, ಭೀಮ ಪಾಂಡವರಲ್ಲಿಯೇ ಬಲಾಢ್ಯನು. ದ್ರೌಪದಿದೇವಿಯು ಮುಯ್ಯ ತಂದು ಕಾದು ಸಾಕಾದ ಬಗೆಯನ್ನು ರುಕ್ಮಿಣಿ ಸತ್ಯಭಾಮೆಗೆ ವಿವರಿಸುವುದು ಆಕೆಯ ಪತಿ ಭೀಮನ ಸೂಕ್ಷ್ಮವಿಲ್ಲದ ಗುಣವನ್ನು ಹೀಗಳೆಯುತ್ತಾರೆ. ಆತ ಸಣ್ಣ ಕೂಸಿದ್ದಾಗ ಆಕಾಶಕ್ಕೆ ನೆಗೆದು ಸೂರ್ಯನ ಮುಟ್ಟಲು ಹೋಗಿ ಸಮುದ್ರ ದಾಟಿದನು, ಇವನ ಶರೀರದ ಕೋಮಲತೆಗೆ ಬೆರಗಾಗಿ ಬೆರತಳೋ ಈ ದ್ರೌಪದಿ, ಎಂಬುದನ್ನು ಹೇಳುತ್ತಾ, ಇಂತಹ ಭೀಮನು

''ಖಂಡಗನ್ನವು ಗ್ರಾಸವಂತೆ
ಅದು ಉಂಡು ಸಾಲದೆ ಭಿಕ್ಷೆ ಬೇಡಿದನಂತೆ
ಕಂಡು ತಾನರಿಯಳು ಕಾಂತೆ
ಇಂತ ದಿಂಡ ಪುರುಷನ ಬೆರೆದಳು ಕಾಂತೆ

ದ್ರೌಪದಿದೇವಿಯನ್ನು ಅಪಹಾಸ್ಯ ಮಾಡುವ ಈ ಹಾಡಿನಲ್ಲಿ ಸೂಕ್ಷ್ಮವಿಲ್ಲದ ಭೀಮನನ್ನೇ ಕುರಿತಾಗಿದೆ. ಇನ್ನೂ ನಮ್ಮ ಮನೆಬಾಗಿಲ ಕಾದದ್ದು ಸಾಕಾಯಿತೆ ಎಂಬ ಜರೆಯುವಿಕೆಯಿಂದ ದ್ರೌಪದಿಯನ್ನು ಹಾಡದಲ್ಲಿ ಸುಮ್ಮನಾಗಿಸುತ್ತಿರುವುದು.

ಅರ್ಜುನನ ಕುರಿತು,

''ಲಜ್ಜೆ ಬಿಟ್ಟು ಅರ್ಜುನ ಪೋಜಾನೆಂದನಿಸಿಕೊಂಡ
ವರ್ಜ್ಯವಾಯಿತು ಮಾನ ನಿರ್ಜರೋತ್ತಮ ನಕ್ಕ
ಹೆಣ್ಣಲ್ಲ ಗಂಡಲ್ಲ ಬಣ್ಣವಿಷ್ಟ್ಯಾಕೊ ನಿನಗೆ

ಸಣ್ಣದಿ ನೆನೆದು ಕೀರ್ತಿ ಅಣ್ಣ ಬಲರಾಮ ನಕ್ಕನು
ಶೂರತನವಲ್ಲ ನೀಗಿ ಸೀರೆಯನುಟ್ಟುಕೊಂಡಿ
ಬಾರದೆ ನಾಚಿ ನಿಂತೆ ಶೌರಿ ರಾಮೇಶ ನಕ್ಕನು ಕೋಲ"[೨೩]

'ಬೋಜಾ'ನೆಂದಸಿ, ಬೃಹನ್ನಳೆ ಕೋಪಧರಿಸಿದ್ದನ್ನು ಬಹು ಸೊಗಸಾಗಿ ವರ್ಣಿಸುವ ಪರಿ "ಹೆಣ್ಣಲ್ಲ, ಗಂಡಲ್ಲ, ಬಣ್ಣವಿಷ್ಯಾಕೊ...." ಅರ್ಜುನನು ವೀರಾಧಿವೀರ ಎಂಬ ಮಾತಿಗೆ ವಿರುದ್ಧವಾದ ಅನಿಸಿಕೆಯು ವ್ಯಕ್ತವಾಗಿದೆ. ಗರ್ವಪಡುವ ಪಾಂಡವರ ಸ್ಥಿತಿಯನ್ನು ಮತ್ತೊಮ್ಮೆ ನೆನಪಿಸುವ ಈ ರೀತಿಯು ಭಾವ ಮೈದುನರ ನಡುವೆ ಸಂಭಾಷಣೆಯಲ್ಲಿ ಸುಂದರವಾಗಿ ಮೂಡಿಬಂದಿದೆ. ಇದರೊಂದಿಗೆ ಶಬ್ದಚಿತ್ರಣವೊಂದು ಬಹು ಸೊಗಸಾಗಿ ವರ್ಣಿಸಿಕೊಂಡಿರುವುದು.

"ಹಾರುವ ಗರುಡ ಹಾರಿಸೇನೆಂದರೆ
ಮಾರುತಿ ಕರವ ನೆಗಹಿದ
ಮಾರುತಿ ಕರವ ನೆಗಹಿದ ಕಾರಣ
ಹಾರುವ ಗರುಡ ಕೈ ಕಾಯ್ದ"[೨೪]

ರಾಮೇಶನನ್ನು ಆರಾಧಿಸುತ್ತಾ ಭಕ್ತಶ್ರೇಷ್ಠನೆಂದು ಕರೆಸಿಕೊಳ್ಳುವ ಮಾರುತಿಯ ಅಭಯಹಸ್ತದ ಚಿತ್ರವು ಅಪ್ಪನವರ ಹಾಸ್ಯಭರಿತ ಹಾಡಾಗಿ ಪರಿಣಮಿಸಿರುವುದು. ಹರಿಯ ವಾಹನವೆಂದು ಕರೆಯುವ ಹದ್ದು(ಗರುಡ) ಹಾರುವ ಪಕ್ಷಿ. ಹಾರುವ ಹದ್ದು, ಹನುಮಂತನ ಅಭಯಹಸ್ತ ನೋಡಿ ಬೆದರಿ ಹಾರುವ ಗರುಡ ನಿನ್ನ ಹೊತ್ತು ಸಾಗುವ ಮೂಲಕ ಕಾಪಾಡಿದನು. ಈ ಪರಿಯ ವರ್ಣನೆಯಲ್ಲಿ ಅಪ್ಪ ಲೌಕಿಕದ ಚಿತ್ರಣದ ವರ್ಣನೆಯ ಸ್ವಾಭಾವಿಕತೆಯನ್ನು ಭಕ್ತಿಯ ಭಾವದಲ್ಲಿ ಅಡಗಿಸಿಡದೆ, ನೇರವಾಗಿ ವಿವರಿಸಿದ್ದಾರೆ. ಸುಂದರವಾದ ಹಾಸ್ಯಭರಿತ ಶಬ್ದಚಿತ್ರಣ ಕಟ್ಟಿಕೊಡುವುದು. ಕಲ್ಪನೆಯಲ್ಲಿ ಸೊಗಸು ಕಾಣದೆ, ಸ್ವಾಭಾವಿಕ ವರ್ಣನೆಯಲ್ಲಿ ಸೊಗಸಾಗಿರುವುದು. ಕಾವ್ಯ ನಿರ್ಮಿತಿಯಲ್ಲಿ ಇದೊಂದು ಸಾಹಿತ್ಯಿಕ ಮೌಲ್ಯವೆನ್ನಬಹುದು. ಅಪ್ಪನವರ ಕೀರ್ತನೆಗಳು ಪುನಃ ಪುನಃ ಓದಿಸಿಕೊಂಡಾಗಲೂ ಹೊಸ ಹೊಳಹುಗಳನ್ನು ತೋರಿಸುವಂತಿರುವುವು. ದ್ವಾರಕೆಯ ಚಿತ್ರಣ ಸಾಮ್ಯತೆಯನ್ನು ನೀಡುವಾಗ ತಮ್ಮ ಪ್ರಸಿದ್ಧ ನಿಂದಾಸ್ತುತಿ ತಂತ್ರವನ್ನೇ ಬಳಸಿಕೊಂಡಿರುವರು. ರಾಮೇಶನ ಮನೆಯ ಅಂದ ಚೆಂದದ ಹೊನ್ನಿನ ಗೋಡೆಯ ಮೇಲೆ ಬರೆಸಿದ ಅಲಂಕಾರದ ಗೊಂಬೆಗಳ ವರ್ಣನೆಯನ್ನು ಚಿತ್ರಿಸಿರುವರು.

"ಅತ್ತಿಗೆಯರು ಕುಳಿತಲ್ಲೇ ಅರ್ಥಿಯ ನೋಡುವ
ಬರೆಬತ್ತಲೆ ಗೊಂಬೆ ಬಗೆ ಬಗೆ
ಬತ್ತಲೆ ಗೊಂಬೆ ಬಗೆ ಬಗೆ ಕುಶಲರ್ಥ
ಚಿತ್ತಾರವ ಯಾರು ಬರೆಸಿಹರು

ಜಾತಿಹಂಸ ಪಕ್ಷಿಗಳು ಮಾತಿನ ಗಿಳಿವಿಂದು
ನೂತನ ನವಿಲು ಬರೆಸಿಲ್ಲ
............
ಹನುಮನೆಂಬೊ ಕೋತಿ ಯಾಕೆ ಬರೆಸಿಹರು
ಗಂಡ ಭೇರುಂಡ ಮೃಗವ ತಿದ್ದಿ ತಾನು
ಬರೆಸಿಲ್ಲ ಬಿದ್ದು ಜನರೆಲ್ಲ ನಗುವಂತೆ
............ತಾನು
ಮುದಿಹದ್ದ ಯಾಕೆ ಬರೆಸಿಹರು
ಎಂಟು ದಿಕ್ಕಿಗೊಪ್ಪೊ ಬಂಟರ ಬರೆಸಿಲ್ಲ
ಕುಂಟ ಸಾರಥಿಯ ವಶವಾಗಿ
................
ತಿರುಗಾಡುವ ಸೊಟ್ಟ ಸೂರ್ಯನ ಚಿತ್ತಾರ ಬರೆಸಿಹರು
ಸುಂದರ ಸುಂದರ ವೃಂದಾರಕರನೆಲ್ಲ ಬಿಟ್ಟು
ಬಂದ ಜನರೆಲ್ಲ ನಗುವಂತೆ
............ ಕಳೆಗುಂದಿದ
ಚಂದ್ರನ ಚಿತ್ತಾರ ಬರೆಸಿಹರು
ರೂಥಿಗೊಡೆಯನ ಮನೆಯ ಗೋಡೆ
ಮ್ಯಾಲಿನ ಗೊಂಬೆ ನೋಡಿದವರೆಲ್ಲ ನಗುವಂತೆ
ನೋಡಿದವರೆಲ್ಲ ನಗುವಂತೆ ತಾತನ
ಕೋಡು ಇಲ್ಯಾಕೆ ಬರೆಸಿಹರು
ಚೆನ್ನ ರಾಮೇಶನ ಹೊನ್ನ ಗೋಡೆಯ
ಮ್ಯಾಲೆ ಮುನ್ನೆ ಜನರೆಲ್ಲ ನಗುವಂತೆ
ಮುನ್ನೆ ಜನರೆಲ್ಲ ನಗುವಂತೆ ರುಗ್ಮನ
ಪನ್ನಿ ವಿಸ್ತಾರ ಬರೆಸಿಹರು ಚಿತ್ತಾರ"[೨೫]

ತಮ್ಮ ಹರಿಭಕ್ತಿಯನ್ನು ಸೂಚಿಸುವ ಹಾಡುಗಳಲ್ಲಿಯೇ ಅಲ್ಲಿರುವ ಲೋಪಗಳನ್ನು ಸೊಗಸಾಗಿ ವರ್ಣಿಸಿರುವರು. ದ್ವಾರಕೆಯ ಗೋಡೆಯ ಚಿತ್ತಾರಗಳೆಲ್ಲ 'ಮನಸಿಜನಯ್ಯ'ನ ಮಿತ್ರಿ ಅಂದರೆ ರುಕ್ಮಿಣಿ, ಸತ್ಯಭಾಮೆಯರನ್ನು ಅಣಕವಾಡುವ ನುಡಿಗಳಿವು.

ಬತ್ತಲೆಗೊಂಬೆ, ಹನುಮನೆಂಬೊ ಕೋತಿ, ಮುದಿ ಹದ್ದು, ತಿರುಗಾಡುವ ಸೊಟ್ಟ ಸೂರ್ಯ, ಕಳೆ ಗುಂದಿದ ಚಂದ್ರ, ತಾತನ ಕೋಡು ಎಲ್ಲವುಗಳಿಂದಲೂ ಹೀಗಳೆದು ಅಣಕವಾಡುವ ಹಾಡುಗಳಾಗಿವೆ.

ಅತ್ತಿಗೆಯರನ್ನು ಗರ್ವಭಂಗಪಡಿಸಲು ಸುಭದ್ರೆ, ದ್ರೌಪದಿಯರ ನುಡಿಗಳಲ್ಲಿ ಬರೆದಿರುವ ಈ ಹಾಡುಗಳ ವರ್ಣನೆಯು ವಿಶೇಷವಾದವುಗಳೆಂದು ಗಮನಿಸಬಹುದು. ಬಹುಶಃ ಮತ್ತ್ಯಾವ ಕೀರ್ತನಕಾರ್ತಿಯರು ಈ ಬಗೆಯಲ್ಲಿ ವರ್ಣಿಸಿಲ್ಲ ಎಂದು ಹೇಳಬಹುದು.

ಮುಂದುವರಿದು, ಹಾಡುಗಳಲ್ಲಿ ಗಾದೆ ಮಾತುಗಳು, ಶಕುನಗಳು ಗ್ರಾಮೀಣ ಪರಿಸರದಲ್ಲಿ ಬಳಸುವ ಗೃಹಕೃತ್ಯ ಸಾಮಾಗ್ರಿಗಳನ್ನು ಹೆಸರಿಸಿದ್ದಾರೆ. ಆ ಮೂಲಕ ಗ್ರಾಮೀಣರಲ್ಲೂ ಹರಿಭಕ್ತಿಯ ಜೀವನ ವಿಧಾನವನ್ನು ಕಾಣಲು ಯತ್ನಿಸಿದ್ದಾರೆ. ಗ್ರಾಮೀಣ ಪರಿಸರದಲ್ಲಿ ತಮ್ಮ ಶ್ರಮಭರಿತ ದುಡಿಮೆಯೇ ಭಕ್ತಿಯೆಂಬುದಾಗಿ ನಂಬಿರುವರು. ಈ ಕಾಲದಲ್ಲಿ ಅವ್ವ ತನ್ನ ಹಾಡುಗಳಲ್ಲಿ ಗ್ರಾಮದ ಜನರು ಬೀಸುವ, ಕುಟ್ಟುವ ಕೈಕೆಲಸಗಳನ್ನು ಬಹು ಸೊಗಸಾಗಿ ಕೀರ್ತನೆಗಳಾಗಿ ಚಿತ್ರಿಸಿರುವರು. ರಾಮೇಶನ ಒಲುಮೆ ಪಡೆಯಲು ವಿಶೇಷ ಭಕ್ತಿಯನ್ನು ತೋರಿಸುವುದಕ್ಕಿಂತಲೂ ದಿನನಿತ್ಯ ಕಾರ್ಯಗಳಲ್ಲೇ ತಮ್ಮ ಭಕ್ತಿಯನ್ನು ತೋರಿಸುವುದು ಆದ್ಯ ಕರ್ತವ್ಯ ವಾಗಿರುವುದು ಎಂಬುದು ಅವ್ವನವರ ಭಾವಾಗಿದೆ.

''ಪಂಕಜ ಮುಖಿಯರ ಗರುವ
ಕಲ್ಲೊಳು ತುಂಬಿ, ಕುಂಕುಮಮಾಡಿ ಅರೆದೆವ
ಕುಂಕುಮ ಮಾಡಿ ಅರೆದು
ಬೀಸಿದೆವಮ್ಮ ಪಂಕಜನಾಭ ಒಲಿಯಲಿ''

ಕಲ್ಲು ಒರಳು, ಬೀಸಿ, ಅರೆದು ಮಾಡುವ ಗ್ರಾಮೀಣ ಪರಿಸರ ಚಿತ್ರಣವನ್ನು ಕೀರ್ತನೆಗಳಲ್ಲಿಯೂ ಕಾಣಬಹುದಾಗಿದೆ. ''ದಿಟ್ಟೆರಿಬ್ಬರ ಗರ್ವಕುಟ್ಟಿ ಕೇರಿತೌಡು ತೆಗೆದು''ಇಂತಹ ಹಲವಾರು ಉದಾಹರಣೆಗಳ ಮೂಲಕ ಜನಪದರ ಬದುಕನ್ನು ಅನಾವರಣಗೊಳಿಸುವ 'ಅರೆದು ಬೀಸಿದೆನಮ್ಮೆ', ಕೇರಿ ತೌಡು ತೆಗೆದು, ಹೀಗೆ ಕೆಲಸಗಳ ಮೂಲಕವು ಮನುಷ್ಯ ಅಹಂಕಾರವನ್ನು ತ್ಯಜಿಸಿದರೆ, ಶ್ರೀ ಹರಿಯ ಭಕ್ತಿ ಒಲಿಯಲು ಸಾಧ್ಯವೆಂದಿದ್ದಾರೆ. ನಿತ್ಯ ಬದುಕಿನಲ್ಲಿಯೂ ಮಾನವರು ಧಾನ್ಯ ಹಸನುಗೊಳಿಸಿ ಆಹಾರ ತಯಾರಿಸಿಕೊಳ್ಳುವಂತೆ, ಭಕ್ತಿಯೆಂಬ ಪುಷ್ಟಿಯು ಮನಸ್ಸಿಗೆ ದೊರಕಲು ಅಹಂಕಾರಗಳನ್ನೆಲ್ಲಾ ತ್ಯಜಿಸಲು ಸಹಕಾರಿಯಾಗುತ್ತದೆ ಎಂಬುದನ್ನು ಅವ್ವನವರು ಈ ಕೀರ್ತನೆಯಲ್ಲಿ ಪ್ರಸ್ತುತಪಡಿಸಿದ್ದಾರೆ.

''ಮೆಲ್ಲಗೆ ಉಣ್ಣಯ್ಯ ಯದುವೀರ
ಹಿಂದೆ ಖಲಬುತ್ತಿಯ ಕದ್ದು ಉಂಡ ಅತಿಶೂರ
ಗೊಲ್ಲರೆಲ್ಲರ ಕೂಡ ವಿಹಾರ
ಗೊಲ್ಲರೆಲ್ಲರ ಕೂಡ ವಿಹಾರಿ ಎನಿಸಿ ಎಲ್ಲ ಪದಾರ್ಥ
ಚೆಲ್ಲದಿರೊ ಧೀರ''

ಹರಿಯ ಉಪಚಾರಕ್ಕೆ ಪಾಂಡವರು, ದ್ರೌಪತಿಯು ಸಂಭ್ರಮದಿಂದ ಉಪಚರಿಸುತ್ತಿರುವರು. ಗೊಲ್ಲರ ಪ್ರಿಯ, ಗೊಲ್ಲರೊಡನೆ ವಿಹರಿಸಿ, ಎಂಬುದು ಶ್ರೀಹರಿಗೆ ಮಾನವರಲ್ಲಿ ಭೇದವೆಂಬುದು

ಕಾಣದೆ, ಭಕ್ತಿಯ ಹರಕೆಯನ್ನು ಎಲ್ಲರಿಂದಲೂ ಸ್ವೀಕರಿಸುವ ಮಹಾ ಮಹಿಮಾ ಧೀರ ಶ್ರೀಹರಿ ಎಂಬುದು ಭಕ್ತ ಮನಸ್ಸಿನ ಅನಿಸಿಕೆ.

ಮುಯ್ಯ ಒಯ್ಯುವ ಹಾಡುಗಳಲ್ಲಿ ಮಹಿಳೆಯರು ಸಂಭ್ರಮಿಸಿ ಹಾಡುವಾಗಲೇ ಅವರು ಧರಿಸಿರುವ ಅಲಂಕಾರದ ಒಡವೆ, ಸೀರೆಗಳು ವಿಶೇಷವಾಗಿ ವರ್ಣಿತವಾಗಿವೆ. ದ್ರೌಪದಿ, ಸುಭದ್ರೆಯರು ಸಡಗರದಿಂದ ಮುಯ್ಯ ತಂದ ಸುದ್ಧಿ ತಲುಪಿಸಿ ಬಂದ ದೂತೆಯ ಬಳಿ ಅಣ್ಣ ಕೃಷ್ಣನ ಪರಿವಾರದ ಕ್ಷೇಮ ಸಮಾಚಾರಗಳನ್ನು ಕೇಳಿ ತಿಳಿಯುವರು. ತಾವು ತಂದಿರುವ 'ಮುಯ್ಯ'ವನ್ನು ಅತ್ತಿಗೆಯರಿಗೆ ಕೊಡಲು ಬಂದಾಗ, ಅಣ್ಣನ ಮಡದಿಯರನ್ನು ಹಾಸ್ಯಗೈಯುವರು. ಅವರ ಗರ್ವವನ್ನು ಹೀಗಳೆದು, ಕೃಷ್ಣನ ದರ್ಶನಕ್ಕೆ ಬಂದಿರುವ ತಮ್ಮನ್ನು, ತಾವು ತಂದ ಉಡುಗೊರೆಯನ್ನು ಪ್ರೀತಿಯಿಂದ ಸ್ವೀಕರಿಸಿ ಸಂತೋಷ ನೀಡಬೇಕೆಂದು ಕೇಳಿ ಕೊಳ್ಳುವರು. ದ್ರೌಪದಿ, ಸುಭದ್ರೆಯರ ಇಂಗಿತವು ಬಹು ಸ್ವಾರಸ್ಯವಾಗಿಯೂ, ಅಂದು ಮಹಿಳೆಯರ ಮೆಚ್ಚಿನ ವಸ್ತ್ರಾಭರಣಗಳ ವಿಶೇಷ ಅಲಂಕಾರಗಳು ಉಡುಗೊರೆಯ ನೆಪದಲ್ಲಿ ಅನಾವರಣಗೊಂಡಿವೆ. ಕಾವ್ಯಾಭಿವ್ಯಕ್ತಿಯಲ್ಲಿ ಸೀರೆ, ಒಡವೆಗಳ ವಿಶೇಷ ಸರಣಿಯೇ ತೆರೆದುಕೊಳ್ಳುವುದು. ಇದು ಕಾವ್ಯಕ್ಕೆ ಮೆರುಗು ತಂದಿದೆ.

ಹೀಗೆ, ನಾನಾ ರೀತಿಯಾಗಿ ಅತ್ತಿಗೆಯರಾದ ರುಕ್ಮಿಣಿ, ಭಾಮೆ, ಜಾಂಬವತಿಯರನ್ನು ಅಪಹಾಸ್ಯ ಮಾಡುವರು. ಅವರನ್ನು ಹೀಗಳೆದುದು ಸರ್ವದಾ ತಪ್ಪಾಯಿತೆಂದು, ತಮ್ಮ ಲಘುವಾದ ಹಾಸ್ಯ, ವಿನೋದಗಳನ್ನು ಮನಸ್ಸಿಗೆ ತಾರದೆ, ಪ್ರೀತಿಯಿಂದ ತಂದ ಉಡುಗೊರೆಗಳನ್ನು ಸ್ವೀಕರಿಸಿ ಎಂದು ಹಲವು ವಿಧದಲ್ಲಿ ಕೇಳಿಕೊಳ್ಳುತ್ತಾರೆ. ಹೀಗೆ, ವಿನಮ್ರಭಾವವನ್ನು ಪ್ರಕಟಪಡಿಸುತ್ತಾರೆ.

''ಸರಸಿಜಮುಖಿ ನಮ್ಮ ಹರುಷ ವಿನೋದವ
ವಿರಸ ಮಾಡದಲೆ ಮನದೊಳು
............. ರಾಮೇಶನ
ಅರಸಿ ನೀ ನಮಗೆ ದಯಮಾಡು ಪ್ರೀತಿಯ ಮಾಡು''

ಎಂದು ವಿನಮ್ರ ಭಾವದಿಂದ ರುಕ್ಮಿಣಿ, ಸತ್ಯಭಾಮೆಯರಲ್ಲೂ, ಕೃಷ್ಣನಲ್ಲೂ ಬೇಡಿಕೊಳ್ಳುತ್ತಾರೆ. ತಾವು ತಂದಿರುವ ಉಡುಗೊರೆಯನ್ನು ಒಬ್ಬಬ್ಬೊರಿಗೂ ಒಪ್ಪಿಸುವ ಪರಿಯು, ಆಪ್ಯಾಯಮಾನವಾಗಿದೆ. ಪ್ರೀತಿಯ ಉಡುಗೊರೆಯನ್ನು ತಮ್ಮ ಇಷ್ಟದೈವ ಕೃಷ್ಣನಿಗೆ, ಆತನ ಪತ್ನಿಯರಿಗೂ, ಮಕ್ಕಳಿಗೂ, ಪತ್ನಿಯರ ಇಷ್ಟಜನ ಸಖಿಯರಿಗೂ, ದಾಸಿಯರಿಗೂ, ಇಷ್ಟ ಪ್ರಾಣಿಗಳಿಗೂ ಹೀಗೆ ಉಡುಗೊರೆ ಪ್ರಧಾನವು ಸಾಲು ಸಾಲು ವರ್ಣನೆಗಳಲ್ಲಿವೆ. ಹಲವು ವಿಧದ ಒಡವೆಗಳೂ, ನಾನಾ ವಿಧದ ಸೀರೆಯ ನಮೂನೆಗಳು ಅಪ್ಪನವರ ಶಬ್ದ ಚಾತುರ್ಯವನ್ನು, ಸೌಂದರ್ಯ ಪ್ರಜ್ಞೆಯನ್ನು ಇಲ್ಲಿ ಎತ್ತಿ ತೋರಿಸುತ್ತವೆ. ಇದರೊಂದಿಗೆ ಹಲವು ರೀತಿಯ ವಾದ್ಯ ಪರಿಕರಗಳ ಚಿತ್ರಣವನ್ನು ನೀಡುತ್ತಾರೆ.

''ಲಕ್ಷಮಾಣಿಕ ಜಡಿದ ಅಕ್ಷಯ ಪದಕ ಮುಕುಟ'
ಚಂದ್ರನಂತೊಪ್ಪುವ ಚಂದ್ರಗಾವಿ ಸೀರೆ
.............
ತಂದೆ ಮಾಣಿಕದಾಭರಣ ಕುಂದಣದ ಕುಪ್ಪುಸವ
..............
ವರಗಿರಿವಾಸಗೆ ತುರಗ ತಾಪತಿಭೇರಿ
..............
ಅನರ್ಘ್ಯವಾಗಿದ್ದ ಅನಂತ ವಸ್ತ್ರಾಭರಣ........
ಗುಜ್ಜೆಯರ ಕಾಲಿಗೆ ತಕ್ಕ ವಜ್ರ ಕಲ್ಲನೆ ಪಿಡಿದು
..............
ನಳಿನಾಕ್ಷಿಯರಿಗೆ ಹೆಳಲು ಬಂಗಾರವ್ವಾಕಿ
ಹೊಳೆವೊ ಮಾಣಿಕದ ಸರವು ಸರಗಿಯನಿಟ್ಟು
ನೀಲಕುಂತಳೆಯರು ವಾಲೆಬುಗುಡಿಯನಿಟ್ಟು
ನೀಲ ಮಾಣಿಕದ ಸರಗಳು.....
...........''[೨೬]

ವಸ್ತ್ರಾಭರಣಗಳ ವರ್ಣನೆಯು ಭಾಷಾಭಿವ್ಯಕ್ತಿಗೆ ಹಿಡಿದ ಕನ್ನಡಿಯೆನ್ನಬಹುದು. ಅದರೊಂದಿಗೆ ಉಡುಗೊರೆಯ ನೆಪದಲ್ಲಿ 'ಸೀರೆ'ಗಳ ವರ್ಣನೆಯು ಅಮೋಘವಾದುದು.

''ಸೂರ್ಯರಾಗದ ಸೀರೆ ಸಾಲೆವಲಿಯ ಕುಪ್ಪಸ
ತೋರ ಮಾಣಿಕದ ನೆನಿದಂಡೆ
.........ತಂದೇವ
ನಾರಿ ರುಕ್ಮಿಣಿಯೆ ಉಡುಬಾರೆ
ಉದಯರಾಗದ ಸೀರೆ ಪದುಮರಾಗದ ಕುಪ್ಪಸ
ಪದುಮದ್ಹೂವಿನ ನೆನೆದಂಡೆ
..........ತಂದೇವ
ಪದುಮಾಕ್ಷಿ ಭಾವೆ ಉಡುಬಾರೆ
ಸೃಷ್ಟಿಗಧಿಕವಾದ ಪಟ್ಟಾವಳಿ ಸೀರೆ
...........
ಖಡ್ಡಿ ಪೈಠಣ ಸೀರೆ ದೊಡ್ಡ ಮುತ್ತಿನ ನೆನೆದಂಡೆ
ಕಡ್ಡಿಬಳೆದೋರೆ ನಡುವಿಟ್ಟ

.............

ಅತ್ತಿಹೂವಿನ ಸೀರೆ ಕುತನಿ ಕುಪ್ಪಸ

ಸುತ್ತು ಮುತ್ತಿನ ನೆನೆದಂಡೆ

.......... ತಂದೆವ

ಮೋತಿ ಚೂರಿನ ಸೀರೆ, ಜಾತಿ ಮುತ್ತಿನ ದಂಡೆ

ನೂತನವಾದ ಚವರಿಯ

ನೂತನವಾದ ಚವರಿ, ರಾಗಟೆ

...........

ಹತ್ತೆಂಟು ಸಾವಿರ ಸುತ್ತುವ ಮುಂಡಾಸ

ಸುಳಿ ಬುಳ್ಳಿಯಂತೊಪ್ಪುವ ಬಿಳಿ ಚೀಟಿನ ಜೂಲು

ಎಳೆಮಾವುಗಳ ನಡುವಿಟ್ಟು ರಂಗಯ್ಯನ ಗಿಳಿಗಳಿಗೆಲ್ಲಾ ಉಡುಗೊರೆ

ಅಕ್ಕರದಿಂದ ಹೊಸ ಚಿಕ್ಕ ಚೀಟಿನ ಜೂಲು

ತಕ್ಕ ಕುಲಾಯಿ ಮುರವಿಟ್ಟು ರುಕ್ಮಿಣಿಯ

ಬೆಕ್ಕಿಗೆ ಕೊಟ್ಟ ಉಡುಗೊರೆ"[೨೭]

ಅವ್ವ, ತನ್ನ ಕಾವ್ಯಸಾಮರ್ಥ್ಯವನ್ನು ಭಕ್ತಿಯ ಮೂಸೆಯಲ್ಲಿ ಹದಗೊಳಿಸಿ 'ರಂಗಯ್ಯ'ನಿಗೆ ಉಡುಗೊರೆ ನೀಡುವಾಗ ಕೊಡುವ ತರ ತರಹದ ವಿವಿಧ ನಮೂನೆಯ ಸೀರೆಯ ವರ್ಣನೆ, ಆಭರಣಗಳು, ಪುರುಷರ ಮುಂಡಾಸುಗಳ ಬಣ್ಣ, ವಿಸ್ತಾರಗಳೆಲ್ಲವೂ ಓದುಗರ ಮನಸ್ಸನ್ನು ಆಹ್ಲಾದಗೊಳಿಸುವಂತಿರುವವು. ಕೃಷ್ಣನ ಮಡದಿಯರೊಂದಿಗೆ, ಸಖಿಯರಿಗೆ, ದಾಸಿಯರಿಗೆ, ಪುತ್ರರಿಗೆ ಹೀಗೆ ಕೌಟುಂಬಿಕ ಪರಿಸರವನ್ನು ಪರಿಚಯಿಸುವಲ್ಲಿ ಅವರವರ ಇಷ್ಟದ ಉಡುಗೊರೆಗಳೆಲ್ಲವೂ ಅವರ ಕಾವ್ಯಾಭಿವ್ಯಕ್ತಿಗೆ ಸುಂದರ ಚೌಕಟ್ಟನ್ನು ಒದಗಿಸಿಕೊಟ್ಟಿರುವವು. ಬಣ್ಣಗಳ ವರ್ಣನೆ ರಂಜನೀಯವಾಗಿವೆ. ಅವುಗಳ ಒಂದಕ್ಕೊಂದು ಹದವಾದ ಜೋಡಣೆಯು ಆಕರ್ಷಕವಾಗಿದೆ.

ಎಲ್ಲರಿಗೂ ಉಡುಗೊರೆ ಕೊಟ್ಟರೂ 'ರಂಗಯ್ಯ'ನ ಮನಸ್ಸಿಗೆ ಸಮಾಧಾನವಿಲ್ಲ, ಕಾರಣ, ಆತ ಪ್ರೀತಿಸುವ ಗೊಲ್ಲನಾರಿಯರಿಗೆ ಉಡುಗೊರೆ ನೀಡಿಲ್ಲದಿರುವುದು. ಕುಬ್ಜಿಯಾದ ಸೊಟ್ಟ ಸ್ತ್ರೀಗೆ ಉಡುಗೊರೆ ನೀಡಿಲ್ಲ ಎನ್ನುವುದು ಅಸಹನೆಗೆ ಕಾರಣ. ಸಾಮಾಜಿಕವಾಗಿ ಅವಗಣನೆಗೆ ಗುರಿಯಾದವರನ್ನು ಬಿಟ್ಟು ಉಡುಗೊರೆ ನೀಡಿದುದು ಪರಿಪೂರ್ಣವೆನಿಸುವುದಿಲ್ಲ ಎಂಬುದನ್ನು ಸೂಚ್ಯವಾಗಿ ಅತೃಪ್ತಿ ವ್ಯಕ್ತಪಡಿಸುತ್ತಿರುವರು. ಏಕೆಂದರೆ, ಕೃಷ್ಣಭಕ್ತಿಯು ಭೂಮಿಯಲ್ಲಿ ಸಕಲ ಜೀವಸಂಕುಲಕ್ಕೂ ದೊರೆಯಬೇಕೆಂಬುದು ಕೀರ್ತನೆಗಳಲ್ಲಿನ ಇಂಗಿತವಾಗಿರುವುದು.

ಮುಂದುವರೆದು ಕೀರ್ತನೆಗಳಲ್ಲಿ 'ಮುಯ್ಯ' ಸ್ವೀಕರಿಸಲು ಬರುವ ರುಕ್ಮಿಣಿ, ಭಾಮೆಯರಿಗೆ ನೀಡುವ ಆಹ್ವಾನ. ಅವರೊಂದಿಗೆ ಪ್ರಾಣಿ, ಪಕ್ಷಿ ಸಂಕುಲಗಳನ್ನೆಲ್ಲ ಕರೆದು ತನ್ನಿ ಎಂಬುದು, ಜೀವಸಂಕುಲದ ಪ್ರೀತಿ. ಉಡುಗೊರೆಯು ಅತ್ತಿಗೆಯರಿಗೂ, ಅವರ ಪ್ರೀತಿಪಾತ್ರ ಸಖೀ ಜನಕ್ಕೂ, ಮುದ್ದು ಪ್ರಾಣಿ ಪಕ್ಷಿಗಳಿಗೂ ದೊರಕುವುದನ್ನು ಕಂಡು ಹರ್ಷಿಸುವರು. ಕೃಷ್ಣಭಕ್ತಿಯು ಸಕಲರನ್ನು ಸಕಲವನ್ನು ಆವರಿಸುವ ಪ್ರೀತಿಯ ಉಡುಗೊರೆಯಾಗಿರುವುದು. ಭಕ್ತಿ ಎಂಬುದು ಮನುಷ್ಯ ನಿಷ್ಠೆಯಲ್ಲೂ ಪ್ರಾಣಿ ಪಕ್ಷಿಗಳ ಪ್ರೀತಿಯಲ್ಲೂ ತುಂಬಿರುವುದು. ಅವ್ವನವರು ಪ್ರಕೃತಿ ಆರಾಧನೆಯಂತೆಯೇ, ಸಕಲ ಜೀವರಾಶಿಯನ್ನು ಮನದಣಿಯೇ ವರ್ಣಿಸುವರು. ಪ್ರಾಣಿ ಪ್ರೀತಿಯನ್ನು ವ್ಯಕ್ತಪಡಿಸುವುದು ಹೀಗೆ.

''ಸೀತೆಗೆ ಹಿಂದಕ್ಕೆ ಪ್ರೀತಿಯ ಬಡಿಸಿದ
ಕೋತಿಯ ಹಿಂಡು ಕರೆಸವ್ವ
ಕೋತಿಯ ಹಿಂಡು ಕರೆಸಿ ಕುಣಿಸುತ
ಮಡದಿ ಜಾಂಬವತಿ ಸಡಗರದಿ ಬರುವಾಗ
ಒಡಗೂಡಿ ಯಾರು ಬರಬೇಕು
............. ತವರೂರ
ಕರಡಿಯ ಹಿಂಡು ಕರೆಸವ್ವ ಸಖಿಯೆ
ಲಕುಮಿ ರಮಣನ ಚಿಕ್ಕ ಮಡದಿ ಭಾವೆ
ಅಕ್ಕರದಿಂದ ಬರುವಾಗ
..... ಒಡಗೂಡಿ ಬರುವಾಗ
ಬೆಕ್ಕಿನ ಹಿಂಡು ಬರಲೆವ್ವಾ ಸಖಿಯೆ
ಅವ್ವ ರುಕ್ಮಿಣಿ ನಿನಗೆ ದಿವ್ಯವಾಹನವಲ್ಲಿ
ಸಿಂಹಶಾರ್ದೂಲ ಕರೆಸವ್ವ
............
ಕೋಗಿಲ ಸ್ವರದಂತೆ ರಾಗದಿ ರಾಮೇಶನ
ಪಾಡಿಕೊಂಡಾಡಿ ಅರಿತಿಲ್ಲ
......... ಒಡಗೂಡಿ
ಕಾಗೆ ಕೂಗಾಡಿ ಬರಲೆವ್ವ ಸಖಿಯೆ''[೨೮]

ಹೀಗೆ, ಅವ್ವನವರು ತಮ್ಮ ಪ್ರತಿಭೆಯನ್ನು ಪ್ರಾಕೃತಿಕವಾಗಿ ಪ್ರಾಣಿಪಕ್ಷಿಗಳ ವರ್ಣನೆಯಲ್ಲಿ ತೋರಿದ್ದಾರೆ.

## ಮುಯ್ಯ ಹಿಂತಿರುಗಿಸುವ ಹಾಡುಗಳು

"ಮುಯ್ಯ" ಎಂಬುದು ಒಂದು ಸಾರಿ ನೀಡಿದಾಕ್ಷಣಕ್ಕೆ ಮುಗಿಯದೇ, ಮುಂದುವರಿಯುವ ಆಚರಣೆಯಾಗಿದೆ. ಮುಯ್ಯ ಹಿಂತಿರುಗಿಸುವ ಕಾರ್ಯದಿಂದ ಸಂಬಂಧಗಳು ಉತ್ತಮಗೊಳ್ಳುವಂತಿರುವುದು ವಿಶೇಷ.

ಅಪ್ಪನವರ ಕೀರ್ತನೆಗಳಲ್ಲಿ ಮುಯ್ಯ ಹಿಂತಿರುಗಿಸುವ ಕಾರ್ಯವು ಅತ್ಯಂತ ಗುರುತರವಾದದ್ದು. ಅಣ್ಣತಂಗಿಯರ, ಅತ್ತಿಗೆ, ನಾದಿನಿಯರ ಬಾಂಧವ್ಯದ ಭದ್ರಬಂಧವಾಗಿರುವ ಆಚರಣೆಯಾಗಿರುವುದು. ಇಲ್ಲಿ ವಿಶೇಷವಾಗಿ ಸುಭದ್ರೆ, ದ್ರೌಪದಿಯರು ಅಣ್ಣನ ನೋಡಲು ಒಂದು ನೆಪವಾಗಿ "ಮುಯ್ಯ ಒಯ್ಯೋಣ ಬಾರೆ" ಎಂದು ಸಂಭ್ರಮಿಸುವ ಭಕ್ತ ಸಮೂಹ ಭಗವಂತನನ್ನು ನೋಡಲು ಆತುರರಾಗಿರುವುದು. ಭಗವಂತನು ತನ್ನ ಭಕ್ತರ ಕಾಣಲು ಕಾತರನಾಗಿ "ಮುಯ್ಯ ಹಿಂತಿರುಗಿಸಲು" ಮತ್ತು ಭಕ್ತರ ಕೋರಿಕೆಯಂತೆ ಕೃಷ್ಣನು ಪತ್ನಿಯರೊಡಗೂಡಿ ಬರುವ ದೃಶ್ಯವು ಕಾವ್ಯದಲ್ಲಿ ಅರ್ಥಪೂರ್ಣ ಆಚರಣೆಯಾಗಿ ಅಲೌಕಿಕ ಸಂತೋಷ ನೀಡುವುದು. ಅನೇಕಾನೇಕ ವೈವಿಧ್ಯತೆಗಳಿಂದ ಭಕ್ತರು ಭಗವಂತನ ದರ್ಶನ ಮಾಡಲು ಅಪೇಕ್ಷಿಸಿದ್ದಾರೆ. ಭಗವಂತನು ನಿರ್ಮಲವಾದ ತನ್ನ ಕೃಪೆಯಿಂದ 'ಮುಯ್ಯ ಹಿಂತಿರುಗಿಸಲು' ಹೊರಡುವ ಸನ್ನಿವೇಶವು ಭಕ್ತರನ್ನು ಸಂತೋಷಪಡಿಸುವಂತಹದ್ದಾಗಿದೆ. ಕೃಷ್ಣನು ತನ್ನ ಪ್ರಿಯಭಕ್ತರಾದ ಪಾಂಡವರ ಉತ್ತಮ ಸ್ಥಿತಿಯನ್ನು ಕಂಡು ಹಾರೈಸುವುದು. ವಿಶೇಷವೆಂದರೆ, ಬಹುಪಾಲು ಇಲ್ಲಿನ ಕೀರ್ತನೆಗಳು ಕೋಲಾಟದ ಪದಗಳಾಗಿ, ಕೋಲು ಪದಗಳಲ್ಲಿನ ಪದಗುಚ್ಛವು ಪ್ರಾಸನಿಯಮಿತವಾಗಿದ್ದು, ಅಚ್ಚುಕಟ್ಟಾದ ಪದಬಂಧಗಳಿಂದ ಕಾವ್ಯವು ಸುಂದರವೂ ಸುಲಲಿತವೂ ಆಗಿರುವುದು.

'ಮುಯ್ಯ ಹಿಂತಿರುಗಿಸುವ ಸಲುವಾಗಿ ಕೃಷ್ಣನು ತನ್ನ ತಂಗಿಯರನ್ನು ಹಾಗೂ ಪ್ರಿಯಭಕ್ತರಾದ ಪಾಂಡವರನ್ನು ನೋಡಲು "ಹಸ್ತಿನಾವತಿಗೆ ದ್ವಾರಕೆಯಿಂದ ಬರುವನು. ಈ ಸಂದರ್ಭದಲ್ಲಿ, ಸತಿಯರಾದ ರುಕ್ಮಿಣಿ ಭಾಮೆಯರು, ತಮ್ಮನ್ನು ಮುಯ್ಯ ತಂದು ಒಪ್ಪಿಸುವ ನೆಪದಲ್ಲಿ, ಅತ್ತಿಗೆಯರ ಗುಣಗಳನ್ನು ಅಪಹಾಸ್ಯ ಮಾಡಿ, ವಾದದಲ್ಲಿ ಸೋಲಿಸಿದ ಸುಭದ್ರೆ ದ್ರೌಪತಿಯರನ್ನು ವಾದದಲ್ಲಿ ಗೆದ್ದು ಬರಬೇಕೆಂಬ ಹಂಬಲದಿಂದ ಹೊರಡಲು ಸಿದ್ಧರಾಗುವರು. ಗುರುಗಳ ಆಣತಿ ಬೇಡಿ, ಮೂಹೂರ್ತ ನೋಡಿ ಹಸ್ತಿನಾವತಿಗೆ ಹೊರಡಲು ಉದ್ಯುಕ್ತರಾಗುವರು.

"ಹರಿಯ ತಂಗಿಯರ ಗರುವಿನ ಮುಯ್ಯವ
ತಿರುಗಿಸಿ ಬಂದು ಉಣಬೇಕು ಕೋಲ
ತಿರುಗಿಸಿ ಬಂದು ಉಣಬೇಕು ಎನುತಲೆ
ಹರಿಣಾಕ್ಷಿ ಭಾಮೆ ನುಡಿದಳು ಕೋಲ

ಇಂತು ರಾಮೇಶನ ಕಾಂತೆಯರೆಂಬುವರ
ಪಂಥವ ಬಿಡಿಸಿ ಬರಬೇಕು ಕೋಲ
ಪಂಥವ ಬಿಡಿಸಿ ಬರಬೇಕು ಮುಯ್ಯದ
ಭ್ರಾಂತಿಯ ಹಿಡಿಸಿ ಕೊಡಬೇಕು ಕೋಲ"[೨೫]

ಹರಿಯ ಪತ್ನಿಯರು ಸುಭದ್ರಾ, ದ್ರೌಪದಿಯರ ಅಹಂಕಾರ ಮುರಿಯಲು ಪಂಥವ ಬಿಡಿಸಲು ಹೊರಟರು. ಕೃಷ್ಣನು ತನ್ನ ಭಕ್ತರ ಮನದಿಂಗಿತ ಅರಿತು ಹೊರಡುವ ರೀತಿಯು ಭಕ್ತರು ಸಂತೋಷಿಸುವುದನ್ನು ಭಗವಂತನು ಕಾಣಲು ಕಾತುರದಿಂದ ಹೊರಡುವನು. ಈ ಎಲ್ಲ ಸನ್ನಿವೇಶಗಳು ಮನೋಜ್ಞವಾಗಿ ಮೂಡಿಬಂದಿವೆ.

ಮುಯ್ಯ ತಿರುಗಿಸುವ ಸಂಭ್ರಮದಲ್ಲಿ ಪಾಂಡವರ ಪತ್ನಿಯರಿಗೂ, ಸಕಲ ಪರಿವಾರಕ್ಕೂ, ರಾಜರ ಪರಿವಾರಕ್ಕೂ ಉಡುಗೊರೆಗಳ ಮಹಾ ಸಂಭ್ರಮವೇ ಹರಿದುಬರುತ್ತದೆ. ದ್ವಾರಕೆಯಿಂದ ತಂದ ಮುಯ್ಯವನ್ನು ತಿರುಗಿಸಲು ಸುದ್ದಿ ತಿಳಿಸಲು ದೂತೆಯನ್ನು ಕಳುಹಿಸುವರು. ಆಕೆಯ, ಮಾತಿನಿಂದಲೇ ಸಂತುಷ್ಟರಾದ ರುಕ್ಮಿಣಿ ಭಾಮೆಯರು ದ್ರೌಪದಿಯ ಕುರಿತು ವಿಶ್ಲೇಷಣಾ ರೂಪದ ವಿವರಣೆಯಿಂದ ಹಾಡಿದ್ದಾರೆ. ಪಂಚಪತಿವ್ರತೆಯರ ಪಟ್ಟಿಯಲ್ಲಿ, ದ್ರೌಪದಿಯನ್ನು ಪ್ರಸ್ತಾಪಿಸುತ್ತಾ, ಪಂಚಪತಿಯರನ್ನು ಕೂಡಿ ಬಾಳಿದ್ದು ಸಾಮಾಜಿಕ ಅವಗಣನೆಗೆ ಗುರಿಯಾಗದಂತೆ ಆಕೆಯಲ್ಲಿ ಸೇರಿ ಹೋದ ಇತರೆ ಪಂಚಸ್ತ್ರೀಶಕ್ತಿಗಳನ್ನು ಸಹಜವೆಂಬಂತೆ ವಿವರಿಸಿರುವುದು, ಓದುಗಮನಸ್ಸುಗಳಿಗೆ ದ್ರೌಪದಿಯು ಭಕ್ತಿಪೂರ್ಣ ಸ್ತ್ರೀರೂಪವಾಗಿ ಮೂಡಿಬರುವಂತಾಗಿದೆ. ಹಾಗೂ ದಶಾವತಾರ ವರ್ಣನೆಯನ್ನು ಪ್ರತಿಯೊಬ್ಬ ಹರಿದಾಸರು ನಿರ್ವಹಿಸಿದ್ದಾರೆ. ಇದಕ್ಕೆ ಅವ್ವ ಹೊರತಾಗಿಲ್ಲ. ಆಕೆ 'ದಶಾವತಾರ'ವನ್ನು ಕೋಲಾಟ ಪದಗಳಲ್ಲಿ ವಿಸ್ತರಿಸಿದ್ದಾರೆ. ದಶಾವತಾರ ವರ್ಣನೆಯು ಆಭರಣಗಳ ಸಾಲುಪಟ್ಟಿಗಳ ಜೋಡಣೆಯೊಂದಿಗೆ ಹೊಂದಿಕೊಂಡು ಸುಂದರವಾದ ರೂಪ ನೀಡಿದ್ದಾರೆ. ಅವ್ವ, ಸಾಹಿತ್ಯಿಕ ರೀತಿಯಲ್ಲಿ ಒಡವೆಗಳ ವರ್ಣನೆಯೊಂದಿಗೆ ದಶಾವತಾರವನ್ನು ಪ್ರಸ್ತಾಪಿಸುವುದು ಹೀಗೆ,

''ಅಚ್ಚ ಮುತ್ತಿನ ಸರಗಳನಿಟ್ಟು(ಮತ್ಸ್ಯ)
ಕೃಷ್ಣ ಮಚ್ಚ ರೂಪದಿ ನಿಂತ ಕೋಲೆನ್ನಿ
ಹೇಮ ರತ್ನಾದಾಭರಣಗಳನ್ನಿಟ್ಟು ಕೃಷ್ಣ (ಕೂರ್ಮಾವತಾರ)
ಕೂರ್ಮರೂಪದಿ ನಿಂತ ಕೋಲೆನ್ನಿ
''ಪ್ರೇಮದಿ ರತ್ನದ ವಸ್ತ್ರಗಳಿಟ್ಟು
ಕೃಷ್ಣ ನರಸಿಂಹ ರೂಪದಿ ಬಂದ ಕೋಲೆನ್ನಿ(ನರಸಿಂಹವತಾರ)
ಶೀಘ್ರದಿ ರತ್ನದ ವಸ್ತ್ರಗಳಿಟ್ಟು

ಕೃಷ್ಣ ವಾಮನ ರೂಪದಿ ನಿಂತ ಕೋಲೆನ್ನಿ(ವಾಮನಾವತಾರ)

ಭರದಿ ಮುತ್ತಿನ ಸರಗಳಿಟ್ಟು ಕೃಷ್ಣ

ಭಾರ್ಗವ ರೂಪದಿ ನಿಂತ ಕೋಲೆನ್ನಿ(ಪರಶುರಾಮವತಾರ)

ನೂತನ ಮುತ್ತಿನ ಸರಗಳಿಟ್ಟು

ಕೃಷ್ಣ ಸೀತಾರಾಮನು ನಿಂತ ಕೋಲೆನ್ನಿ(ರಾಮಾವತಾರ)

ತಿದ್ದಿದ ರತ್ನದ ವಸ್ತ್ರಗಳಿಟ್ಟು

ಕೃಷ್ಣ ಮುದ್ದು ರೂಪ ನಿಂತ ಕೋಲೆನ್ನಿ(ಕೃಷ್ಣಾವತಾರ)

ಬದ್ಧವಾದ ಮಣಿಗಳನಿಟ್ಟು

ಕೃಷ್ಣಬುದ್ಧ ರೂಪದಿ ನಿಂತ ಕೋಲೆನ್ನಿ(ಬುದ್ಧವತಾರ)

ಹಲವು ರತ್ನವ ವಸ್ತ್ರಗಳಿಟ್ಟು

ಕೃಷ್ಣ ಚಲ್ವಕಲ್ಕಿನಿಂತ ಕೋಲೆನ್ನಿ"(ಕಲ್ಕಿಯವತಾರ)[೩೦]

ದಶಾವತಾರ ವರ್ಣನೆಯಲ್ಲಿ ಸಿರಿಯಾಭರಣಗಳಿಂದ ಅಲಂಕೃತಗೊಂಡು ಕೃಷ್ಣನು ತನ್ನ ಲೀಲೆ ತೋರಿದ್ದಾನೆ. ಹತ್ತು ಅವತಾರಗಳಿಂದ ಯುಗಯುಗಗಳಲ್ಲೂ ಸಮಾಜದ ಕಷ್ಟ ಕೋಟಲೆಗಳನ್ನು ನಿವಾರಿಸುವನೆಂಬ ನಂಬಿಕೆಯಿದೆ. ಹರಿದಾಸರಲ್ಲಿ ದಶಾವತಾರ ವರ್ಣನೆಯು ಸಹಜವಾಗಿರುವುದು. ಅಪ್ಪನವರು ತಮ್ಮ ಸಾಹಿತ್ಯಿಕ ಸಾಮರ್ಥ್ಯವನ್ನು ಮುತ್ತು, ರತ್ನ, ಮಾಣಿಕ್ಯ ಆಭರಣಗಳಿಂದ, ವರ್ಣಿಸುತ್ತಾ, ಪ್ರತಿಸಾಲಿನಲ್ಲೂ ಚಲ್ವ, ಮುದ್ದು, ಲಕ್ಷ್ಮೀಲೋಲ ಪ್ರೇಮದಿ... ಹೀಗೆ ಆಪ್ತವಾದ ಮಮತಾಮಯಿ ಮಾತೃಭಾವದಿಂದ ವರ್ಣಿಸುತ್ತಾರೆ.

ಎರಡೆರಡು ಸಾಲುಗಳಲ್ಲಿ ವರ್ಣಿಸಿರುವ ಅವತಾರಗಳಲ್ಲಿ ಪ್ರತಿಯೊಂದು ಅವತಾರದ ರೂಪಕ್ಕೂ ಅವರ್ಣನೀಯ ಭಾವ, ಆಭರಣಗಳಿಂದ ಅಲಂಕಾರಗೊಂಡ ಮತ್ಸ್ಯ, ಕೂರ್ಮ, ನರಸಿಂಹ, ವರಾಹ, ಪರಶುರಾಮ, ರಾಮಾವತಾರ, ವಾಮನ, ಕೃಷ್ಣ, ಬುದ್ಧ, ಕಲ್ಕಿ ಹೀಗೆ ಹತ್ತು ರೂಪಗಳನ್ನು ಚೆಲುವಿನ ಆಭರಣಗಳೊಂದಿಗೆ, ಸುಂದರವಾಗಿಸಿ ಹೇಳುವರು. ಕಾವ್ಯ ಸಾಮರ್ಥ್ಯವು ಅರಳಿರುವುದು ಆಭರಣಗಳಿಂದಷ್ಟೇ ಅಲ್ಲ, ಕಾವ್ಯಭಿವ್ಯಕ್ತಿಗೆ ವಾದ್ಯ ಪರಿಕರಗಳನ್ನು ಒಂದೊಂದು ವಾದ್ಯದ ಧ್ವನಿಗೂ ಒಂದೊಂದು ರೀತಿಯ ಭಾವ ವ್ಯಕ್ತಪಡಿಸುವ ರೀತಿಯು ಅನನ್ಯವಾದುದು. ''ನಾಗಲೋಕದ ಕಾಳಿ, ಜಂಬುದ್ವೀಪದ ಜಯಭೇರಿ ಹಾಗೂ ಕೃಷ್ಣನ ಬರುವನ್ನು ಸೂಸುವ ಸಂಭ್ರಮಕ್ಕೆ ಪೂರಕವೆಂಬಂತೆ, ''ಹಿಲಾಲು, ಬಾಣಬಿರುಸುಗಳಿಂದ ಮಿಂಚುವ, ಹೊಳೆಯುವ ಚಿತ್ರಣಗಳೊಂದಿಗೆ ಕೃಷ್ಣ ಭಕ್ತಿಗೆ ಜನರು ಸಂಭ್ರಮಿಸುವ ಪರಿಯೆ ತುಂಬ ಅನನ್ಯ ಹಾಗೂ ಅನ್ಯೋನ್ಯವಾದದ್ದಾಗಿದೆ.

ಕೋಲಾಟ ಪದಗಳನ್ನು ಮುಯ್ಯ ಕೊಡುವ ಹಾಡುಗಳಲ್ಲಿಯೇ ಗುರುತಿಸುವುದು. ಕೋಲು ಪದವು ಅತ್ಯಂತ ಅರ್ಥಪೂರ್ಣವಾದ ಕಾವ್ಯವಾಗಿ ಹೊಮ್ಮಿರುವುದು. ರುಕ್ಮಿಣಿಯು ಸುಭದ್ರ ದ್ರೌಪದಿಯರಿಗೆ

ಮುಯ್ಯ ಕೊಡುವ ಮುಂಚೆ ವ್ಯಾಸ ಮುನಿಗಳಿಗೆ ವಂದಿಸಿ ಆಶೀರ್ವಾದ ಪಡೆಯಲು ತಾವು ಹಾಕುವ ಕೋಲು, ಉತ್ತಮ ಜಲದೊಳು ತೊಳೆದು ಪೂಜಿಸುವರು. ಕೃಷ್ಣನು ರಾಸ ಲೀಲೆಯಲ್ಲಿ ವನಿತೆಯರ ಪೀಡಿಸಲು ಹಿಡಿದುಕೊಂಡ ಕೋಲನ್ನು ಭಕ್ತಿಯಿಂದ ಪೂಜಿಸಿ ಸುಭದ್ರ ದ್ರೌಪದಿಯರನ್ನು ವಾದದಲ್ಲಿ ಗೆಲ್ಲಬೇಕೆಂದು ಕೋಲಿಗೆ ಗಂಧ, ಅಕ್ಷತೆ, ಮಲ್ಲಿಗೆ, ಸಂಪಿಗೆ ಏರಿಸಿ, ಎಲ್ಲಾ ಫಲಗಳಿಟ್ಟು ಕೈಮುಗಿದು ಬೇಡಿಕೊಳ್ಳುವ ಮೂಲಕ ಕೃಷ್ಣಭಕ್ತಿಯು ಅನಾವರಣಗೊಂಡಿರುವುದು.

ಅವ್ವನವರ, ಕಾವ್ಯಭಿವ್ಯಕ್ತಿಗೆ ಭಕ್ತಿಯ ಹಿನ್ನೆಲೆಯಿದ್ದರೂ ಅಪೂರ್ವವಾದ ರೂಪಕಗಳಿಂದ ರಚಿಸಿರುವರು. ಕಾವ್ಯವು ಪುಂಗಿಯನಾದಕ್ಕೆ ಸೋಲುವ ನಾಗರೆಡೆಯಂತೆ, ಭಕ್ತಿಪೂರ್ವಕ ಮನಸ್ಸುಗಳು ಸೋಲುತ್ತಾ, ಪರವಶವಾಗುವ ಪರಿಯು ಅವ್ವನವರ ಹಾಡುಗಳಲ್ಲಿದೆ. ''ರಂಗನಂಘ್ರಿಗೆರಗುವಂತೆ ಭೃಂಗವಾಗುತಎರಗಿ ಭೃಂಗವಾಗುತ ತಮ್ಮ ಅಂಗ ಮರೆದು ಮುದದಿ ಎತ್ತುಂಗರಾಗುತ ಎತ್ತುಂಗರಾಗುತ''

ರಾಮೇಶನಲ್ಲಿ ಶರಣಾಗುವ ಮನಸ್ಸುಗಳು ''ತಮ್ಮ ಅಂಗ ಮರೆದು ಉತ್ತುಂಗರಾಗುವುದು'' ಮುಕ್ತಿ ಪಡೆಯುವ, ಶರೀರದ ಮೋಹ ಮರೆಯುವಂತಹದು ರಂಗಭಕ್ತಿ. ಅವ್ವ, ತನ್ನ ಭಕ್ತಿಗೆ ಉತ್ತುಂಗ ಸ್ಥಿತಿಯನ್ನು ಕಲ್ಪಿಸುತ್ತಾಳೆ. ಕೋಲು ಪೂಜಿಸಿ, ರಾಮೇಶನನ್ನು ಬೇಡಿಕೊಂಡು ಸುಭದ್ರ ದ್ರೌಪದಿಯರನ್ನು ಗೆಲ್ಲುವೆವೆಂಬ ಸಂಭ್ರಮವಿದೆ. ರುಕ್ಮಿಣಿ, ಭಾಮೆಯರಿಗಾದ ಸಂತೋಷವನ್ನು ತನ್ನ ಆಭರಣಗಳ ಮೂಲಕ ಪಟ್ಟಿ ಮಾಡುತ್ತಾರೆ. ಕಾವ್ಯಕ್ಕೆ ಅಲಂಕಾರವಾದ ಆಭರಣಗಳ ಸಾಲು ಸರಣಿಯೇ ಇಲ್ಲಿರುವುದು. ನಲಿಯುವ ಸಖಿಯರಿಗೆ ರುಕ್ಮಿಣಿಯು ಮುಯ್ಯ ಹಿಂತಿರುಗಿಸಲು ಹೊರಟ ಸನ್ನಿವೇಶವನ್ನು ರಮ್ಯವಾಗಿ ವಿಸ್ತರಿಸುತ್ತಾರೆ. ಸಖಿಯರು ಸಂತಸದಿಂದ ಸಿಂಗರಿಸಿಕೊಂಡು ಸಾಗುವ ಪರಿಯು ಕೃಷ್ಣನನ್ನು ಭಕ್ತಿಯಿಂದ ಭಜಿಸುವುದು. ಸಂಪ್ರದಾಯದ ಹೆಸರಿನಿಂದಲೂ, ಸಂಭ್ರಮಿಸುವ ಗುಣಗಳಾಗಿ ಅಪರೂಪದ ಆಭರಣಗಳನ್ನು ಹೆಸರಿಸುವುದು ಹೀಗೆ,

''ಹಸ್ತ ಕಡಗ ಹರಡಿ ದೋರೆ ಹವಳ ಕಂಕಣ
ಹಸ್ತಿಗಮನೆಯರು ಎತ್ತಿ ಕೋಲ ಹೊಯಿದಾರಮ್ಮಯ್ಯ
ಮುತ್ತಿನವಾಲೆ ಮೂಗುತಿ ಮುದ್ದು ಸುರಿಯುತ್ತ
ಜತ್ತಾಗಿ ಜಾಣೆಯರು ಕೋಲ ಹೊಯಿದಾರಮ್ಮಯ್ಯ
ಹೆರಳು ಬಂಗಾರ ಕ್ಯಾದಿಗೆ ಹೆಳಲು ಅಲೆಯುತ
ನಳಿನ ಮುಖಿಯರಿಟ್ಟ ಕೋಲ ಹೊಯಿದಾರಮ್ಮಯ್ಯ
ಚವರಿರಾಗಟೆ ಚಲ್ವಗೊಂಡ್ಯಛಂದಾಗಿ ಒಪ್ಪುತ
ಘೋರ ಮುತ್ತಿನ ಹಾರ ಪದಕ ಭಾರ ಧರಿಸುತ
ರಘುವೀರನ ಕೊಂಡಾಡಿ ಕೋಲ ಹೊಯಿದಾರಮ್ಮಯ್ಯ
ನಡುವಿಗೆ ಒಡ್ಯಾಣವಿಟ್ಟು ನಾರಿಯರೆಲ್ಲರೂ ತಮ್ಮ ಬಡನಡ

ಬಳಕುತ ಕೋಲ ಹೊಯಿದಾರಮ್ಮಯ್ಯ

ಉಟ್ಟು ಪೀತಾಂಬರ ಕಾಲಿಗಿಟ್ಟು ಗೆಜ್ಜೆಯು"

ನಮ್ಮ ದಿಟ್ಟರಮಿಅರಸನೆಂದು ಕೋಲ ಹೊಯಿದಾರಮ್ಮಯ್ಯ[೨೦]

ರುಕ್ಮಿಣಿಯು ಚೆಲುವಾದ ಕೃಷ್ಣನನ್ನು ಸ್ತುತಿಸಲು ಅಂದವಾದ ಒಡವೆಗಳನ್ನು ತೊಟ್ಟು ಸಂಭ್ರಮಿಸುವ ಈ ನಿಟ್ಟಿನಲ್ಲಿ ಭಕ್ತಿಯ ಅತಿಶಯತೆಯನ್ನು ಹೇಳಿರುವರು. ಅಲ್ಲಿ ಹೆಣ್ಣಿನ ಮನಸ್ಸುಗಳಿಗೆ ತಮ್ಮ ಆಭರಣದಷ್ಟೇ ಭಕ್ತಿಯು ಪ್ರಿಯವಾದುದು, ತಾವು ಉಟ್ಟು ತೊಟ್ಟು ನಲಿಯುವುದೆಲ್ಲವೂ ಭಕ್ತಿಯಾಗಿ ಮಾರ್ಪಾಡುವುದು ಅವರ ಕಾವ್ಯ ಶಕ್ತಿ ಎಂದು ಗುರುತಿಸಬಹುದು.

ಅವ್ವನವರು ಹೆಂಗಳೆಯರ ಮನಸ್ಸು ಕೌಟುಂಬಿಕವಾಗಿ, ಅದರಲ್ಲಿಯೂ ಬ್ರಾಹ್ಮಣ ಕುಟುಂಬದಲ್ಲಿ ಸ್ವತಂತ್ರವಾಗಿ ಸಂಗೀತ, ಕೋಲಾಟ, ಭಜನೆಗಳಲ್ಲಿ ಹೆಚ್ಚು ಕಾಲ ಕಳೆಯುವ ಸಂದರ್ಭವನ್ನು ಅತ್ಯಂತ ಸೂಕ್ತವಾಗಿ ಬಳಸಿಕೊಂಡಿದ್ದಾರೆ. ಹೆಂಗಳೆಯರಿಗೆ ದಿನನಿತ್ಯದ ಕೆಲಸ ಕಾರ್ಯಗಳಷ್ಟೇ ಮುಖ್ಯವಾದುದು ದೈವಿಕ ಪ್ರೀತಿ, ಇದಕ್ಕೆ ಪೂರಕವಾಗಿ ಹಬ್ಬಹರಿದಿನಗಳನ್ನು ಗುರುತಿಸಿಕೊಳ್ಳುತ್ತಾರೆ. ರುಕ್ಮಿಣಿ ಭಾಮೆಯರಿಗೆ ಕೃಷ್ಣನೊಡನೆ ಸುಭದ್ರ ದ್ರೌಪದಿಯರನ್ನು ಕಂಡು ಮುಯ್ಯ ಹಿಂತಿರುಗಿಸುವುದೇ ನೆಪ ಮಾಡಿಕೊಳ್ಳುವರು. ಈ ಸಂದರ್ಭ ತುಂಬ ಸೊಗಸಾಗಿದೆ. ತಾವು ಕೊಡುವ ಮುಯ್ಯದ ಸಂದರ್ಭದಲ್ಲಿ ಸುಭದ್ರೆ, ದ್ರೌಪದಿಯರನ್ನು ವಾದದಲ್ಲಿ ಗೆಲ್ಲಬೇಕೆಂದು ಗಣಪನನ್ನು, ಸರಸ್ವತಿಯನ್ನು ಸ್ತುತಿಸುವ, ಬೇಡುವ ರೀತಿಯಲ್ಲಿ ಹರಿಯ ಸಹಸ್ರನಾಮವನ್ನು ಸ್ಮರಿಸುವ ಜಾಣ್ಮೆ ತೋರಿದ್ದಾರೆ.

''ಕೇಶವ ನಾರಾಯಣ ಶ್ರೀಶಮಾಧವ

ಸರ್ವೇಶ ಗೋವಿಂದ ಗೆಲಿಸೆಂದು ಕೋಲ''(೧)

ಮಧುಸೂದನ ತ್ರಿವಿಕ್ರಮ ವಿಧಿಪಿತ ವಾಮನ

ಸುದತೆ ಶ್ರೀಧರ ಋಷಿಕೇಶ ಕೋಲ (೨)

ಪದ್ಮನಾಭ ದಾಮೋದರ ಮುದ್ದು ಸಂಕರ್ಷಣ

ವಸುದೇವ ನಮ್ಮ ಗೆಲಿಸೆಂದು ಕೋಲ (೩)

ಪುರುಷೋತ್ತಮ ಅಧೋಕ್ಷಜ ಹರುಷಾಗೊ ನರಸಿಂಹ

ಪುರುಷ ಸೂಕ್ತದಲೆ ಪ್ರತಿಪಾದ್ಯ ಕೋಲ

ಜನಾರ್ಧನ ಉಪೇಂದ್ರ ಘನಮಹಿಮ ಹರೆ ಕೃಷ್ಣ

ಮುನಿಜನ ವಂದ್ಯ ರಮಿಅರಸು ಕೋಲ[೨೧]

ಅವ್ವ, ತಾನು ಅನುಭವಿಸುವ ಭಕ್ತಿಯ ಸುಧೆಯನ್ನು ತನ್ನೊಡನಿರುವ ಭಕ್ತಿ ಸಮೂಹವನ್ನು ಆವರಿಸಲಿ ಎಂಬುದಾಗಿದೆ. ಅದಕ್ಕೆ ಹರಿ ಸಹಸ್ರನಾಮಾವಳಿಯಿಂದ ಸ್ತುತಿಸುತ್ತಾರೆ. ಇದರೊಂದಿಗೆ

ಹರಿನಾಮಾವಳಿಯನ್ನು ಹೇಳುತ್ತಾ, ದಶಾವತರವನ್ನು ಪ್ರಸ್ತಾಪಿಸಿದ್ದಾಳೆ. ಹೀಗೆ ತನ್ನ ಕಾವ್ಯಕ್ಕೆ ವಿಸ್ತಾರವಾದ ಕಥಾಚೌಕಟ್ಟು ನೀಡುವಳು. ರುಕ್ಮಿಣಿ, ಸತ್ಯಭಾಮೆಯರು ಮುಯ್ಯ ಹಿಂತಿರುಗಿಸಲು ಸಕಲ ದೇವಾಧಿದೇವತೆಗಳನ್ನು ಗುರುವಂದ್ಯರನ್ನು ಸ್ತುತಿಸುತ್ತಾ, ನಮಿಸುತಾ, ತಮ್ಮೆಲ್ಲ ಕಾರ್ಯವು ಯಶಸ್ಸು ಪಡೆಯಲೆಂದು ಹನುಮಂತನನ್ನು ಸ್ತುತಿಸುತ್ತಾರೆ. ಮುಂದೆ ಮಧ್ವರ ರೂಪದಲ್ಲಿ ಬದರಿಯಲ್ಲಿ ನೆಲೆಸಿದವನೆಂದು ನಮಿಸುವರು. ಭಾರತೀ ದೇವಿಯನ್ನು ನಮಿಸುತ್ತ ಮುಂದು ಸಾಗುವ ಚಿತ್ರಣವು ವಾದದಲ್ಲಿ ಗೆಲಿಸಲು ಬೇಕಾದ ಮನಸ್ಥೈರ್ಯವನ್ನು ಪಡೆಯುವ ಪ್ರಯತ್ನವನ್ನು ಬಹು ಸೊಗಸಾಗಿ ವರ್ಣಿಸಿರುವಳು. ಅಷ್ಟಲ್ಲದೇ, ಶ್ರೀಹರಿಯನ್ನು ಹೆಗಲಲ್ಲಿ ಧರಿಸುವ ಗರುಡನನ್ನು, ಒಡಲಲ್ಲಿ ಮಲಗಿಸಿಕೊಳ್ಳುವ ನಾಗೇಂದ್ರನನ್ನು, ನಂದಿವಾಹನ ಶಿವನನ್ನು, ಇಂದ್ರನನ್ನು ನಮಿಸಿ ಗೆಲ್ಲುವ ತವಕವನ್ನು ವ್ಯಕ್ತಪಡಿಸುವರು.

ತಮ್ಮ ಕಾವ್ಯದಲ್ಲಿ ಅನೇಕ ನದಿಗಳನ್ನು ಹೆಸರಿಸುತ್ತಾ ಭಾಗೀರಥಿ, ಗಂಗೆ, ತುಂಗೆ, ಕೃಷ್ಣ, ಮಾನಸ ಸರೋವರ ಹಾಗೂ ಭಾಗೀರಥಿಯು ಭೂಮಿಗೆ ಬಂದ ಕಥೆಯನ್ನು ಅತ್ಯಂತ ಚೊಕ್ಕವಾಗಿ ನಿರ್ವಹಿಸಿರುವಳು.

''ಭಗೀರಥ ಕರೆಯಲು ನಗದಲ್ಲಿ ಬಿದ್ದು ಕಾಶಿ
ನಗರಕ್ಕೆ ಬಂದ ರಮಿ ಮಗಳೆ ಬಲಗೊಂಬೆ''[೩೩]

ಎರಡು ಸಾಲಿನಲ್ಲೇ ಗಂಗೆ, ಭಾಗೀರಥಿಯಾಗಿ ಭಗೀರಥನ ತಪಸ್ಸಿಗೆ ಮೆಚ್ಚಿ ಭೂಮಿಗೆ ಬರಲು ಒಪ್ಪಿದಾಗ ಆಕೆಯ ರಭಸದ ಆಗಮನಕ್ಕೆ ಕಾಶಿಯ ವಿಶ್ವೇಶ್ವರನಲ್ಲಿ ಮೊರೆಯಿಟ್ಟಾಗ, ಭಗೀರಥನ ಪ್ರಾರ್ಥನೆಯು ನೆರವೇರಿಸಲು ಶಿವನು ತನ್ನ ಜಟೆಯಲ್ಲಿ ಗಂಗೆಯನ್ನು ಬಂಧಿಸುವ ಸುಂದರ ಚಿತ್ರಣವನ್ನು ಚಿಕ್ಕದಾಗಿ ಚೊಕ್ಕವಾಗಿ ಹೇಳುವರು ಕಾವ್ಯವು ನೇರವಾದ, ನಿರೂಪಣೆಯಾದರೂ ಇಡೀ ಪ್ರಸಂಗದ ಕಥೆ ಎರಡು ಸಾಲಿನಲ್ಲಿ ಕಟ್ಟಿಕೊಡುವ ಪದ ಸಾಮರ್ಥ್ಯವನ್ನಿಲ್ಲಿ ನಾವು ಗುರುತಿಸಬಹುದು.

''ಸತ್ಯವರ್ಯರೆಂಬ ಉತ್ತಮ ಗುರುಗಳ
ಹಸ್ತ ಕಮಲದಲೆ ನಮಿಸುವೆನೆಂಬ ರನ್ನದ
...........ಜಗದೊಳು
ಮೆರೆವ ಸತ್ಯಧರ್ಮರನು ಬಲಗೊಂಬೆ''[೩೪]

ಎಂದು ರುಕ್ಮಿಣಿ, ಸತ್ಯಭಾಮೆಯರು ಮುಯ್ಯ ಹಿಂತಿರುಗಿಸಲು ಹೊರಟ ಸಂದರ್ಭದಲ್ಲಿ ಹಾಡುತ್ತಿರುವುದು. ಅವರು ಗುರುಸ್ತುತಿಯನ್ನು ತನ್ನ ಕಟ್ಟಕಡೆಯ ದಿನಗಳಲ್ಲಿಯೂ ಗುರು ಪರಂಪರೆಯನ್ನು ಸ್ಮರಿಸಿರುವುದು ಆಕೆಯ ಭಕ್ತಿ ಪಾರಮ್ಯವನ್ನು ತೋರುವುದಾಗಿದೆ. ತನ್ನ ಸಾಹಿತ್ಯಿಕ ರಚನೆಗೆ ಭಕ್ತಿಯ ಹಿನ್ನಲೆಯಲ್ಲಿ ಕೌಟುಂಬಿಕ ಪರಿಸರವನ್ನು ಪುರಾಣ, ಮಹಾಭಾರತ, ರಾಮಾಯಣ ಕಥೆಗಳನ್ನು ತನ್ನ ಕಥಾ ಸಂಗತಿಗಳಲ್ಲಿ

ಸೇರಿಸಿಕೊಂಡಿದ್ದಾರೆ. ವಿಶಿಷ್ಟವಾದ ನೇರ, ನಿಂದಾಸ್ತುತಿಯಲ್ಲಿ ಕೀರ್ತನೆಗಳನ್ನು ರಚನೆ ಮಾಡಿರುವರು. ಹಾಗೆಯೇ, ಅವ್ವನವರಿಗೆ ಪ್ರಕೃತಿ ವರ್ಣನೆಯು ಸಾಹಿತ್ಯ ರಚನೆಗೆ ಇಂಬು ನೀಡಿತ್ತೆಂದು ಹೇಳಬಹುದು. ಕವಿ ಮನಸ್ಸಿನ ಪ್ರಕೃತಿ ಪ್ರಿಯಳು. ಆಕೆಗೆ ವಚನಕಾರ್ತಿ ಅಕ್ಕಮಹಾದೇವಿಯ ವಚನಗಳು ಪ್ರಭಾವ ಬೀರಿರಬಹುದೇನೋ ಎಂಬಷ್ಟರವರೆಗೆ ಪ್ರಕೃತಿಯ ಲೀಲಾಮಯ ವಿನ್ಯಾಸವನ್ನು ತನ್ನ ಪದ ನಿರ್ಮಿತಿಯಲ್ಲಿ ಕಟ್ಟಿಕೊಟ್ಟಿರುವುದು ಹೀಗೆ.

''ಬಾಗುವ ತೆಂಗಿನ ಮರ ನೋಡ
ರಂಗನ ಅಂಘ್ರಿಗೆರಗುವಂತೆ ಸಖಿಯೆ
ಶೃಂಗಾರದ ವನ ನೋಡ ಪಂಚರಂಗದ ಗಿಳಿನೋಡ
ಮಂಗಳಸ್ವರ ನೋಡ ಕೋಕಿಲ ರಂಗನ ಪಾಡುತಲಿವೆ''[೩೫]

ಭಕ್ತಿಯು ಅವ್ವನವರು ನೋಡುವ, ಕಾಣುವ ಪ್ರಕೃತಿಯಲ್ಲಿಯೂ ರೂಪುತಳೆಯುತ್ತಿರುವುದು, ಗಾಳಿಗೆ ತಲೆದೂಗುವ ತೆಂಗಿನ ಮರಗಳು ರಂಗನ ಪಾದಕ್ಕೆ ನಮಿಸುವಂತಿವೆ. ಕೋಗಿಲೆಗಳ ಸ್ವರವು ಮಂಗಳಕರವಾಗಿ ಹಾಡುವಂತಿವೆ. ಸುತ್ತಲಿನ ವನವೆಲ್ಲವೂ ಚಿಗುರಿದ ಎಲೆಗಳಿಂದಲೂ ಅರಳಿರುವ ಹೂಗಳಿಂದಲೂ ಪಲ್ಲವಿಸಿ ನಲಿನಲಿಯುತ್ತಿರುವುದು, ಹರಿಪಾದಕ್ಕೆ ನಮಿಸಲು ಆತುರಗೊಂಡಂತೆ ತೋರುತ್ತಿರುವುದು.

''ನಾಗ, ಪುನ್ನಾಗ ನೋಡ ಸಂಪಿಗೆ ಪರಿಮಳ ನೋಡ
ಹಾಂಗೆ ಕ್ಯಾದಿಗೆ ನೋಡ ಹರಿಪಾದಕ್ಹೋಗಿ ಎರಗುತಿವೆ (೫)
ಜಾಜಿ ಕುಸುಮ ನೋಡ ತುಳಸಿ ವಿರಾಜಿಸುವವವ ನೋಡ
ಸಹಜವನವ ನೋಡ ರಂಗನ ಪೂಜೆಗೆ ಒದಗುವಂತೆ (೬)
ಮಂದ ಮಾರುತ ನೋಡ ಪರಿಮಳ ತಂದು ಬೀಸುತಲಿದೆ
ಸುಂದರ ಲತೆ ನೋಡ ರಂಗಗೆ ಫಲ ತಂದು ಅರ್ಪಿಸುವಂತೆ (೭)
ಸಾಲು ಮರಗಳ ನೋಡ ರಂಗಗೆ ಫಲ ಮೇಲಾಡಿ ಮೆಲಿಸುವಂತೆ
ಲಾಲಿ ಮಣಿಯ ನೋಡ ರಾಮೇಶ ವಾಲೈಸಿ ಕರೆಯುತಿವೆ.'' (೮)[೩೬]

ಬೀಸುವ ಮಂದವಾದ ತಂಗಾಳಿಯು, ಸುಮಗಳ ಪರಿಮಳ ತಂದು ಬೀಸುತ್ತಿರುವಂತಿವೆ. ಸುಂದರವಾದ ತರುಲತೆಗಳು ರಂಗನಿಗೆ ಫಲತಂದು ಅರ್ಪಿಸುತ್ತಿರುವ ಚಿತ್ರಣವು 'ರಾಮೇಶ'ನನ್ನು ಓಲೈಸಿ, ಭಕ್ತಿಯನ್ನು ಅರ್ಪಿಸುತ್ತಿರುವುದು ಕಾಣುವ ನೋಟ ಎಲ್ಲವು ಭಕ್ತಿಯೇ ತುಂಬುತ್ತಿರುವಂತೆ ತಲ್ಲೀನವಾದ ಅವ್ವನವರ ಮನಸ್ಸು ಭಕ್ತಿ ಪಾರಮ್ಯತೆಯನ್ನು ಈ ಪರಿಯಾಗಿ ತೋರುತ್ತಿರುವುದು. ಅವರ ಕೀರ್ತನೆಗಳಲ್ಲಿ ನಾವು ಹರಿದಾಸರ ಕೀರ್ತನೆಗಳಲ್ಲಿ ಇರುವಂತಹ ಪಂಚವಿಧ ಭಕ್ತಿಯ ನಿರೂಪಣೆಯನ್ನು ಕಾಣಬಹುದು. ಏಕೆಂದರೆ, ಹರಿಯನ್ನು ದೈವವೆಂದೂ, ನಲ್ಲನೆಂದೂ, ಮಗುವೆಂದು, ದೊರೆಯೆಂದು ಭಕ್ತರು ಭಾವಿಸುವರು.

ಅವ್ವನವರ ಕೀರ್ತನೆಗಳಲ್ಲಿಯೂ ಭಕ್ತರು ರಮಿಅರಸು, ರಾಮೇಶನನ್ನು ಕಾಣುವ ಆತುರ, ಕಾತುರ, ಆಸೆ, ಆತಂಕ, ಕಳವಳ, ತೊಳಲಾಟ, ಬಯಕೆ, ದೈನ್ಯ, ಪರಸ್ಪರ ಕೆಣಕಿ ತಮ್ಮ ಇರುವನ್ನು ತೋರುವ ಕಾತುರಗಳನ್ನು ಅಪೂರ್ವವಾಗಿ ತನ್ನ ಸಾಹಿತ್ಯದಲ್ಲಿ ಹಿಡಿದಿಟ್ಟಿರುವರು. ಅವುಗಳನ್ನು ನಾವು ಪಂಚವಿಧ ಭಕ್ತಿಗಳಲ್ಲಿ ಗಮನಿಸಬಹುದಾಗಿದೆ.

೧. ದಾಸ್ಯಭಾವ : ''ಭಗವಂತನನ್ನು ಭಕ್ತಿ ಆರಾಧಿಸುವ ನಿಟ್ಟಿನಲ್ಲಿ ದೊರೆ, ಸ್ವಾಮಿ, ಒಡೆಯ ಮುಂತಾದ ವಿಶೇಷಣಗಳಿಂದ ಸಂಬೋಧಿಸಿ ಆರಾಧಿಸುವುದೇ ಈ ದಾಸ್ಯಭಾವದ ನಿರೂಪಣೆಯಾಗಿದೆ. ಶ್ರೀಹರಿಯನ್ನು ಒಡೆಯನೆಂದು ಸಂಬೋಧಿಸಿ ತಾನು ದಾಸನೆಂದು ಆರಾಧಿಸುವ ಭಕ್ತರೇ ಹರಿದಾಸರು. ಅವರ ಸಾಹಿತ್ಯವನ್ನು ದಾಸಸಾಹಿತ್ಯ ಎಂದು ಕರೆಯುವಲ್ಲಿ ಈ ಭಾವ ಅಡಕವಾಗಿದೆ. ಅವರು ಪರಮಾತ್ಮನ ಪಾದ ಸೇವೆಯನ್ನು ನೀಡುವಂತೆ ಬೇಡಿಕೊಳ್ಳುವರು. ''ನಾ ನಿನಗೇನು ಬೇಡುವುದಿಲ್ಲ ಎನ್ನ ಹೃದಯ ಕಮಲದೊಳು ನೆಲಸಿರು ಹರಿಯೆ' ಎಂದು ಶ್ರೀಪಾದರಾಜರು ರಂಗವಿಠಲನಲ್ಲಿ ಮೊರೆಯಿಟ್ಟಿದ್ದಾರೆ. 'ದಾಸರೆಂದರೆ ಪುರಂದರದಾಸರಯ್ಯ' ಎಂದು ಗುರುಗಳಿಂದಲೇ ಹೊಗಳಿಸಿಕೊಂಡ ಪುರಂದರ ದಾಸರು 'ದಾಸನ ಮಾಡಿಕೊ ಎನ್ನ ಇಷ್ಟ ಘಾಸಿ ಮಾಡುವರೇನೋ ಕರುಣಾ ಸಂಪನ್ನ' ಎಂದು ದೇವರಲ್ಲಿ ಮೊರೆಯಿಡುವುದನ್ನು ಕಾಣಬಹುದು.'' ಹಾಗೆಯೇ, ಎಲ್ಲ ಹರಿದಾಸರಂತೆ, ಅವ್ವನವರು ಕೂಡ 'ರಮಿಅರಸ'ನನ್ನು ಹೊಗಳುವ, ದಾಸರೆಲ್ಲರೂ ಸ್ತುತಿಸುವ ಸಂದರ್ಭವನ್ನು ಹೀಗೆ ವರ್ಣಿಸುವರು.

''ದಾಸರು ಬಗೆ ಬಗೆ ಸೋಸಿಲೆ ತಳವೂರಿ
ಶ್ರೀಶ ರಾಮೇಶನ ಅರಮನೆ ಮುಂದೆ''
''ಮುರಲೀಧರ ಮೋಹನಾಂಗ
ಕಾಯೋ ಕೃಪಾಂಗ
ದೇವ ನರಸಿಂಹ ಹೇ ಭವಭಂಗ''
''ಕಂಡು ಮನ ಹಿಗ್ಗೋದು
ರಂಗಯ್ಯನ ಕೊಂಡಾಡಿ
ಮನ ಉಬ್ಬೋದು''[೩೭]

ಅವ್ವ, ತನ್ನ ಕಾವ್ಯದಲ್ಲಿ ರಂಗನನ್ನು 'ರಮಿಅರಸು' ಎಂದು ಸಂಬೋಧಿಸುತ್ತಾ ಕೃಷ್ಣನನ್ನು 'ಕಾಯೋ ಕೃಪಾಂಗ' ಎಂದು ಬೇಡುತ್ತಾಳೆ. ಸೃಷ್ಟಿಯಲ್ಲಿ ಮಾನವನ ಭವದ ಭಂಗಗಳನ್ನೆಲ್ಲ ಪರಿಹರಿಸೋ ಎಂದು ಬೇಡಿಕೊಳ್ಳುತ್ತಿರುವರು. ಹರಿಸ್ತುತಿ ಜೀವನದ ಧ್ಯೇಯವಾಗಿಸಿಕೊಂಡ ಹರಿದಾಸರು 'ಭಕುತಿಯ ಪಾಲಿಸು ಜೀಯ - ಮುಂದೆ ಮುಕುತಿಗೊಡವೆ ಯಾಕೆ ನೀನೊಲಿದ ಮೇಲೆ' ಎಂದ್ಹೇಳುತ್ತಾರೆ. ನಿರಂತರವೂ ಭಕ್ತನಾಗಿ ಭಗವಂತನ ಸೇವೆಯಲ್ಲಿರುವ ಆನಂದ ಪಡೆಯಲು ಉತ್ಸುಕರಾಗಿರುವರು.

ಅವ್ವ, ತನ್ನ ಕಾವ್ಯದಲ್ಲಿ, ರಾಮೇಶನನ್ನು ಪಂಚ ಭಾವಗಳಲ್ಲಿ ಸ್ತುತಿಸಿದ್ದಾಳೆ. ಎಲ್ಲ ಹರಿದಾಸರಲ್ಲೂ ಕಾಣುವ ಭಗವಂತನನ್ನು, ದೊರೆ, ತಂದೆ, ಒಡೆಯ, ಎಂದೂ ಭಕ್ತರು ಅನವರತ ಭಗವನ್ನಾಮಸ್ಮರಣೆಯಲ್ಲಿ ತೊಡಗುವುದನ್ನು ನಾವು ಕಾಣಬಹುದಾಗಿದೆ.

''ಎಂಥ ಸುಕೃತವಮ್ಮ
ರಂಗನ ಕಾಂತೆಯರದಮ್ಮ
ಅನಂತ ದೇಶಗಳು ಇವನಂತ ತಿಳಿಯವು
ಈ ಕಾಂತೆಯರು ಒಲಿದರೆಂತು ಪೇಳಮ್ಮ''
''ಸುದ್ದಿ ಕೇಳಿ ಧರ್ಮರಾಯ ಗದ್ಗದಿ ನುಡಿಯನೆ ನುಡಿದಾನ
ಮುದ್ದು ಮುಖವ ನೋಡಿ
ಪಾದಕೆ ಬಿದ್ದು ಧನ್ಯರಾದೆವಮ್ಮ''

ಹೀಗೆ ಕಾವ್ಯದಲ್ಲಿ ಅತ್ಯಂತ ಭಕ್ತಿಯಿಂದಲೂ, ತನ್ನ ಪ್ರೀತಿಯ ದೇವನೆಂತಲೂ ಸಲುಗೆಯಿಂದಲೂ 'ನುಡಿಯನೆ ನುಡಿದಾನ' ಎಂದು ಅತ್ಯಂತ ಸಾವಧಾನವಾಗಿರುವ ಭಾವವಿದೆ. ಕೃಷ್ಣ ಭಕ್ತಿಗೆ ಅನನ್ಯವಾಗಿ ಶರಣಾಗಿಯೂ ತನ್ನ ಸರಳ ಸಹಜ ಗುಣಗಳಿಂದ ಹರಿಭಕ್ತಿಯು ದೊರಕಿದೆ. ತನಗೆ ಎಷ್ಟೋ ಕಾಲದಿಂದ ಬಂದ ಸುಕೃತವೆಂಬುದು ಮನ ಹಿಗ್ಗಿ ನಲಿಯುತ ರಂಗನನ್ನು ಹಾಡಿ ಸ್ತುತಿಸುವ ಚಿತ್ರಣವು ಭಕ್ತಿಯನ್ನು ಸೂಚಿಸುತ್ತಿರುವುದು. ಹಾಗೇ, ಕಾಯೋ ಕೃಪಾಂಗ ದೇವ ನರಸಿಂಹ ಹೇ ಭವಭಂಗ' ಎಂಬಲ್ಲಿ ಲೌಕಿಕ ಜೀವನದಲ್ಲಿನ ಕಷ್ಟಗಳನ್ನೆಲ್ಲ ಕಳೆಯೋ ಎಂದು ಹರಿಯಲ್ಲಿ ಆರ್ತಳಾಗಿ ಬೇಡಿಕೊಳ್ಳುತ್ತಿರುವಳು.

**೨. ಸಖ್ಯಭಾವ :** ಭಕ್ತ ಭಗವಂತರಲ್ಲಿ ಪರಸ್ಪರ ಐಕೋಭಾವ ಮೂಡುವುದೇ 'ಸಖ್ಯ ಭಾವ' ಭಕ್ತನು ಪರಮಾತ್ಮನನ್ನು ತನ್ನ ಸಂಗಾತಿಯೆಂತಲು, ಗೆಳೆಯ, ನಲ್ಲೆ, ಸಖೀ ಎಂಬ ಭಾವನೆಯಿಂದ ಆರಾಧಿಸುವನು. ಈ ರೀತಿಯ ಆರಾಧನೆಯು ಭಗವಂತನು ತನ್ನವನೆಂಬ ಭಾವದಿಂದ ಸಲುಗೆಯಿಂದ ಪ್ರಶ್ನಿಸುವ, ದಂಡಿಸುವ, ಮೂದಲಿಸುವ, ಪರಿಹಾಸ್ಯ ಮಾಡುವ ರೀತಿಯು ಹರಿದಾಸರಲ್ಲಿ ಕಂಡುಬರುವ ಅನ್ಯೋನ್ಯತೆಯ ಸಂಗತಿ. ಭಕ್ತ ಭಗವಂತರ ನಡುವಿನ ಈ ಸ್ನೇಹ ಸಲುಗೆಯು ಹರಿದಾಸ ಸಾಹಿತ್ಯದಲ್ಲಿ ಅತ್ಯಂತ ಮನೋಹರವಾಗಿ ಮೂಡಿಬಂದಿವೆ. ಕೃಷ್ಣಾರ್ಜುನರ ಸ್ನೇಹ, ಸಲಿಗೆಗಳು, ಇದಕ್ಕೆ ಉತ್ತಮೋತ್ತಮ ನಿದರ್ಶನಗಳೆಂದು ತಿಳಿಯಬಹುದಾಗಿದೆ. ಹರಿದಾಸರು ಭಗವಂತನನ್ನು 'ನಿಂದಾಸ್ತುತಿ'ಗಳ ಮಾಡುವ ಮೂಲಕ ಹರಿಸ್ಮರಣೆಗೆ ಒತ್ತುಕೊಟ್ಟಿದ್ದಾರೆ. ಹರಿಯನ್ನು ಟೀಕಿಸುವ, ಪರಿಹಾಸ್ಯ ಮಾಡುವ, ಆತನು ಒಲಿಯದಿದ್ದಾಗ ನಿಂದಿಸುವಲ್ಲಿ, ಇತರ ತೆರನಾದ ಸರಸದ ಪ್ರಸಂಗಗಳನ್ನು ನಾವು ಕಾಣಬಹುದಾಗಿದೆ. ಸಖ್ಯಭಾವವನ್ನು ಪ್ರತಿಪಾದಿಸುವಲ್ಲಿ ಹರಿದಾಸರು ರಚಿಸಿರುವ ನಿಂದಾಸ್ತುತಿಯ ಕೀರ್ತನೆಗಳು ಬಹಳ ಪ್ರಧಾನ ಪಾತ್ರ ವಹಿಸುತ್ತವೆ.

ಅವ್ವನವರು ತಮ್ಮ ರಚನೆಯನ್ನು ಬಹಳಷ್ಟು ನಿಂದಾಸ್ತುತಿಯ ತಂತ್ರದಲ್ಲಿ ರಚಿಸಿರುವರು. ಅವರ ನಿಂದಾಸ್ತುತಿಯು ಮಧುರವು, ಕಠಿಣ ಮಾತುಗಳ ತೀಕ್ಷ್ಣತೆಯೂ ಸೇರಿ ನೇರ ನುಡಿಗಳಲ್ಲಿಯೇ ಸಹಜ ಸುಂದರವಾಗಿ ಮೂಡಿಸಿರುವರು.

''ಶ್ರೀಧರನ ಪಾದದಲೆ ಮೋದ ಇಟ್ಟವಳಿಗೆ
ಆದರವಿಲ್ಲ ನೋಡಮ್ಮಯ್ಯ
ಏನೂ ಆದರವಿಲ್ಲ ನೋಡಮ್ಮಯ್ಯ
ಕಾಡುತ ಕೊಟ್ಟ ವೀಳ್ಯವ ಮಾಧವಗೆ
ಕೊಟ್ಟರೆ ಹೋದೀತು ಬುದ್ಧಿ ನೋಡಮ್ಮಯ್ಯ
ರುಕ್ಮಿಣಿಯಲ್ಲೇ ಹೋದೀತು ಬುದ್ಧಿ ನೋಡಮ್ಮಯ್ಯ''

ಎಂದು ರುಕ್ಮಿಣಿ, ಸತ್ಯಭಾಮೆಯರಲ್ಲಿ ಹುಟ್ಟುವ ಸವತಿ ಮತ್ಸರದ ಕಿಚ್ಚು ಅವ್ವನವರ ನಿಂದಾಸ್ತುತಿ ತಂತ್ರದಲ್ಲಿ ಅತ್ಯಂತ ಮನೋಹರವಾಗಿ ಮೂಡಿ ಬಂದಿರುವುದು

'ನಗುವರಲ್ಲವೊ ರಂಗ ನಾಚಿಕೆ ಇಲ್ಲವೊ'
ನಿನಗೆ ಹಗೆಯ ಮಾಡಿದವಳ ಬಗೆಯ ಕಾಣೆರಂಗ

ಭಕ್ತ, ಭಗವಂತರ ಮಧ್ಯೆ ನಡೆಯುವ ವಾಗ್ವಾದವು ಕ್ಷಣ ಮಾತ್ರದ್ದು ಎಂಬುದನ್ನು ಇಲ್ಲಿ ಸೂಚ್ಯವಾಗಿ ಹೇಳುತ್ತಾರೆ, ಭಕ್ತರ ಮುನಿಸನ್ನು ಬಹಳ ಬೇಗ ಮರೆತು ಅವರ ಭಕ್ತಿಗೆ ಸೋಲುವ ಅಂತಹ ಕರುಣಿ ಭಗವಂತನ ಚಿತ್ರಣವನ್ನು ಹಾಸ್ಯಮಯವಾಗಿಯೂ ಚಿತ್ರಿಸಿದ್ದಾಳೆ. ಮುಂದುವರೆದು,

''ಸಿಟ್ಟು ಬಿಟ್ಟಿಬ್ಬರು ಕೃಷ್ಣ ನಮ್ಮವನೆನ್ನಿ
ದಿಟ್ಟ ರಾಮೇಶ ಸಕಲೇಷ್ಟವೆನ್ನಿ
ಸರ್ವೇಷ್ಟವೆನ್ನಿ''
''ಬಾರೆ ರುಕ್ಮಿಣಿ ನಿನ್ನ ಮುಖ ತೋರೆ
ನಗೆ ಪಾಟಲಾಗದೆ
ಸಾರ ಶ್ರೀಕೃಷ್ಣನ ತೊಡೆಬಿಟ್ಟು
ಬಾರೆ ರುಕ್ಮಿಣಿ''

ಎಂಬ ಚಿತ್ರಣ ನೀಡುತ್ತಾರೆ. ರುಕ್ಮಿಣಿ ಕೃಷ್ಣ ಭಕ್ತರ ಮನಸ್ಸಿನ ಹೊಯ್ದಾಟವನ್ನು ಗಮನಿಸಿ ತನ್ನ ಬಿಟ್ಟು ಹೋದರೇನೂ ಎಂದು ಭಯದಿಂದ ಕೃಷ್ಣನ ತೊಡೆಯೇರಿ ಕುಳಿತಿರುವುದು. ಇಲ್ಲಿ ಅನನ್ಯವಾಗಿ ಕೃಷ್ಣನನ್ನು ಆರಾಧಿಸುತ್ತಿರುವುದನ್ನು ಶೃಂಗಾರಪೂರ್ಣ ಶೈಲಿಯಲ್ಲಿ ವರ್ಣಿಸಿರುವರು. ರಾಮೇಶನ ಪಟ್ಟದರಾಣಿಯರು, ಎಷ್ಟು ಶಾಣೇರೆಂದು ಅಷ್ಟೂರು ನಗುತಾರೆ ಬಹಳ ಎಂದು ಅವ್ವನವರು ತಾವು ಬಳಸುವ, ಆಡುಮಾತಿನ ಶೈಲಿಯಲ್ಲಿಯೇ ಹೇಳುತ್ತಾರೆ. ಕಾವ್ಯವನ್ನು ಗದ್ಯದ ಮಾದರಿಯಲ್ಲಿ ವಿಸ್ತರಿಸುತ್ತಾ, ಕೇಳುವ

ಮನಸ್ಸಿಗೆ ಅರ್ಥವಾಗುವಂತೆ ಕೃಷ್ಣ, ರುಕ್ಮಿಣಿ, ಸತ್ಯಭಾಮೆಯರ ಕೌಟುಂಬಿಕ ಚಿತ್ರಣದಿಂದ ಓದುಗರನ್ನು ಮುದಗೊಳಿಸುವಂತಿರುವುದೇ ಅವರ ಕಾವ್ಯದ ಗುಣ ವಿಶೇಷವೆನ್ನಬಹುದು.

''ಮಾನ್ಯ ಮಾನ್ಯರೊಳಗೆ ನೀನು
ಕನಿ ರುಕ್ಮಿಣಿಗಧಿಕವಾಗಿ
ಎನ್ನ ಹೀನ ನುಡಿದು ಹರಿಯ
ನೀ ಬೆನ್ನ ಬಿದ್ದು ಬಂದು ಕುಳಿತೆ''

ಸುಭದ್ರೆಯು ಮುಯ್ಯತರುವ ನೆಪದಲ್ಲಿ ಅತ್ತಿಗೆಯನ್ನು ಒಳಿತಾಗಿ ಹೊಗಳುತ್ತಾ ಹರಿಸ್ತುತಿಯನ್ನು ಸಂಪಾದಿಸಲು ರುಕ್ಮಿಣಿಯ ಬೆನ್ನಬಿದ್ದ ಚಿತ್ರಣವಿರುವುದು.

''ಮಾನಬಿಟ್ಟು ಮಂದಿಯೊಳಗೆ
ನಾನ ಮಾತು ಎನಗೆ ಆಡದಿ
ನೀನು ರಾಮೇಶನಂಘ್ರಿಯಲಿ
ಮೌನದಿಂದ ಬಂದು ಕುಳಿತೆ''

ಸತ್ಯಭಾಮೆಯ ಮಾತುಗಳಲ್ಲಿ ರುಕ್ಮಿಣಿಯನ್ನು ಓಲೈಸಿದ ಸುಭದ್ರೆಯ ಜಾಣತನವನ್ನು ಹೊಗಳುತ್ತಾರೆ. ಹರಿಸ್ತುತಿಗಾಗಿ ಭಕ್ತರು ಏನಾದರೊಂದು ನೆವ ಮಾಡಿ ಬಂದು ಸಾಧಿಸುವ ತಂತ್ರಗಾರಿಕೆಯನ್ನು ಇಲ್ಲಿ ಅವ್ವ ಸೂಚಿಸಿದ್ದಾರೆ.

೩. ಮಧುರಭಾವ : ಭಕ್ತ-ಭಗವಂತರಲ್ಲಿ ಸಂಗಾತಿಯ ಭಾವವನ್ನು ಆರೋಪಿಸಿಕೊಂಡು ಭಗವಂತನ ಬರುವಿಕೆಗಾಗಿ ಹಳಹಳಿಸುವ, ಕಾತರದಿ ಕಾಯುವ, ಅವನ ಅಗಲುವಿಕೆಯಿಂದ ಕಣ್ಣೀರು ಮಿಡಿಯುವುದು. ಕಣ್ಮನ ಸೆಳೆಯುವ ಭಗವಂತ ದರ್ಶನದಿಂದ ಪುಳಕಿತರಾಗುವುದು ಸರ್ವಸ್ವವೆಲ್ಲವನ್ನು ಕೃಷ್ಣನಿಗೆ ಅರ್ಪಿಸುವ ಸಮರ್ಪಣಾಭಾವವು ಇಲ್ಲಿ ಪರಮಾತ್ಮನನ್ನು ಗೆಳೆಯ, ನಲ್ಲ ಎಂದು ಹರಿದಾಸರು ಭಾವಿಸಿದರೆ, ಅವ್ವ, ತನ್ನ ನಿಂದಾಸ್ತುತಿ ತಂತ್ರಗಾರಿಕೆಯಿಂದ ಅತ್ತಿಗೆಯರಾದ ರುಕ್ಮಿಣಿ, ಸತ್ಯಭಾಮೆಯರ ಕಲಹ ಚಿತ್ರಣ ನೀಡುವ ಮೂಲಕ ಮಧುರ ಭಾವವನ್ನು ವ್ಯಕ್ತಪಡಿಸುತ್ತಾಳೆ.

''ಅಂದ ಮಾತು ಕೇಳಿರಾಯ ನಂದಬಟ್ಟುನಂದ ಭಾಷ್ಪ
ಬಿಂದು ಉದುರಿ ಬಿಗಿದು ಕಂಠ
ಛಂದದಿ ರೋಮಗಳು ಉಬ್ಬಿ''

ಎಂಬುದು ಶ್ರೀಕೃಷ್ಣನು ಮುಯ್ಯು ಹಿಂತಿರುಗಿಸಲು ಮಡದಿಯರೊಡಗೂಡಿ ಹಸ್ತಿನಾಪುರಕ್ಕೆ ಬಂದ ಸುದ್ದಿ ತಿಳಿದು ಧರ್ಮರಾಯನು ಗದ್ಗದ ಕಂಠದವನಾಗಿ ಕಂಠ ಬಿಗಿದು ಮಾತುಬಾರದೆ ತೊಳಲಾಡುವ ಚಿತ್ರಣದಿಂದ ಮಾತಿಗೆ ನಿಲುಕದ ಭಾವದ ಭಕ್ತಿಯು ವ್ಯಕ್ತವಾಗಿರುವುದು.

''ಎಂಥ ದಯವ ಮಾಡಿ ಕಾಂತೆಯರು ಬಂದಾರೆ
ಎಂತು ನಮ್ಮ ಪುಣ್ಯ ಫಲಿಸಿತು.
ಎಂತೆಮ್ಮ ಪುಣ್ಯ ಫಲಿಸಿತು
ಲಕ್ಷ್ಮಿಕಾಂತನೆ ಬಂದು ಮನೆತನಕ''

ಎಂಬುದಾಗಿ ಪಾಂಡವರು, ಸುಭದ್ರಾ, ದ್ರೌಪದಿಯು ಭಗವಂತನ ಬರುವಿಕೆಯಿಂದ ಹರ್ಷಚಿತ್ತರಾಗಿರುವರು.

೪. ವಾತ್ಸಲ್ಯ ಭಾವ : ಪರಮಾತ್ಮನನ್ನು ಭಕ್ತ ಲಾಲಿಸಿ, ಪೂಜಿಸಿ, ಕಂದನಂತೆ ಮುದ್ದುಗರೆಯುವ ಪರಿಪಾಟ ಹರಿದಾಸರಲ್ಲಿ ಕಂಡುಬರುವುದು. ತಾಯಿ-ಮಗುವಿನ ಮಮತಾಮಯಿ ಬಂಧನವನ್ನಿಲ್ಲಿ ನಾವು ಕಾಣಬಹುದಾಗಿದೆ. ಯಶೋಧೆ, ಕೃಷ್ಣರ ಮಮತೆಯನ್ನು ಕಾಣಬಹುದು. ಶ್ರೀಕೃಷ್ಣನ ಬಾಲಲೀಲೆಗಳನ್ನು ಸ್ತುತಿಸುವ ಅವ್ವ, ತನ್ನ 'ಜೋಗುಳದ ಹಾಡು''ಗಳಲ್ಲಿ ವಿಶೇಷವಾಗಿ ಹಾಡಿಹೊಗಳಿದ್ದಾಳೆ.

'ಜೋಗುಳದ ಹಾಡು' ಅವ್ವನವರ ಕೃತಿಗಳಲ್ಲಿ ವಿಶೇಷವಾದುದು. ಆದರೂ ಈ ಕೀರ್ತನೆಗಳನ್ನು ಅವ್ವನವರೇ ರಚಿಸಿದರೆಂಬುದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಅಂಕಿತ ಬಳಸಿಲ್ಲದೇ, ಅದು ಅವ್ವನವರದ್ದು ಎಂಬುದಕ್ಕೆ ಅಂಕಿತ ದೊರೆಯುವ ಮುಂಚಿನದಾಗಿರಬೇಕು ಎಂಬುದಾಗಿ ಹಣವಂತ ತಾಸಗಾಂವಕರ್ ಅಭಿಪ್ರಾಯಪಡುತ್ತಾರೆ.

''ಮುದ್ದು ರಂಗನ ಕಥೆ
ಬುದ್ಧಿ ಸಾಲದೆ ಅಪದ್ಧವೇ ಇರಲಿ
ಅತಿದಯದಿ ಕೋಲ
ಅಪದ್ಧವೆ ಇರಲಿ ಅತಿದಯದಿ ಪಾಂಡುರಂಗ
ವಿದ್ವಜ್ಜನವಂದ್ಯ ಕೈಕೊಳ್ಳೋ ಕೋಲ''

ತನ್ನ ಕಾವ್ಯಕ್ಕೆ 'ಮುದ್ದುರಂಗನ ಕಥೆ' ಎಂಬ ಮಮತೆ ವಾತ್ಸಲ್ಯ ಭಾವದಲ್ಲಿರುವುದು ತೋರಿದ್ದಾರೆ.

೫. ಶಾಂತಭಾವ : 'ಶಾಂತಭಾವ' ಎಂಬುದು ಪಂಚವಿಧ ಭಕ್ತಿಭಾವದಲ್ಲೊಂದು ಸಾಮಾನ್ಯವಾಗಿ ಹರಿದಾಸರು ಭಗವದ್ದರ್ಶನದ ಸಂದರ್ಭವನ್ನು ನಿರೂಪಿಸುವುದಕ್ಕೆ ಶಾಂತಭಾವವನ್ನು ಬಳಸಿಕೊಂಡಿದ್ದಾರೆ.

''ರಂಗನಂಘ್ರಿಗೆರಗುವಂತೆ ಭೃಂಗವಾಗುತ
ಎರಗಿ ಭೃಂಗವಾಗುತ ತಮ್ಮ
ಅಂಗ ಮರೆದು ಮುದದಿ
ಉತ್ತುಂಗರಾಗುತ ಉತ್ತುಂಗರಾಗುತ''

ಭಕ್ತರು ರಾಮೇಶನನ್ನು ಕಂಡು ಪೂರ್ಣಚಂದ್ರನಂತೆ ಹೊಳೆಯುವ ರಾಮೇಶನಲ್ಲಿ ಮನಸ್ಸಿಟ್ಟು ಸ್ಮರಿಸುತ್ತಾ, ಮುದದಿ ಎತ್ತಿ ಕೈ ಮುಗಿಯುತ್ತಾ, ರಂಗನ ಪಾದಕ್ಕೆ ಭೃಂಗದಂತೆ ಪುನಃ ಪುನಃ ನಮಿಸುತ್ತಾ, ಅಲ್ಲಿಯೇ ಸುತ್ತಿಸುಳಿವ ಭಕ್ತ ಮನಸ್ಸು ಉತ್ತುಂಗದ ಸ್ಥಿತಿ ತಲುಪದೇ ಶಾಂತಭಾವ ಅನುಭವಿಸುತ್ತದೆ.

''ಕೇಶವ ನಾರಾಯಣ ಶ್ರೀಶ ಮಾಧವ
ಸರ್ವೇಶ ಗೋವಿಂದಗೆಲಿಸೆಂದು ಕೋಲ
............ ವಿಷ್ಣುವಿನ
ಸೋಸಿಲೆ ಮೊದಲೆ ಬಲಗೊಂಚೆ

ಎಂದು ಅವ್ವ, ತನ್ನ ಕಾವ್ಯದಲ್ಲಿ ರಾಮೇಶನನ್ನು ಅತ್ಯಂತ ಸಂಭ್ರಮದಿಂದ ಕೀರ್ತಿಸುತ್ತಾ ಸಾಗುವ ಪರಿಯು, ಭಗವಂತನ ಮಹಿಮಾತಿಶಯಗಳನ್ನು ಪ್ರಶಾಂತ ಮನಸ್ಸಿನಿಂದ ಹಾಡಿ ಹೊಗಳುವುದೇ ಶಾಂತಭಾವ ಎಂದು ಹೇಳಬಹುದಾಗಿದೆ. ಈ ಎಲ್ಲಾ ಪಂಚ ವಿಧಗಳಲ್ಲಿಯೂ ತನ್ನ ಕಾವ್ಯ ಸಾಮರ್ಥ್ಯವನ್ನಿಲ್ಲಿ ಬಿಡಿಬಿಡಿಯಾಗಿ ಬಿಡಿಸಿ ಅರಳಿಸಿರುವುದು ಆಕೆಯ ಕಾವ್ಯ ಕೌಶಲ್ಯಕ್ಕೆ ನಿದರ್ಶನವಾಗಿರುವುದು.

**ದಶಾವತಾರ ಚಿತ್ರಣ**

ಭಾಗವತದಲ್ಲಿ ಬರುವ ಹರಿಯ ಮತ್ಸ್ಯ ಕೂರ್ಮಾದಿ ದಶಾವತಾರಗಳ ಸ್ತುತಿಯೂ ಶ್ರೀಪಾದರಾಜರಲ್ಲಿ ಕಾಣುತ್ತೇವೆ. ಭಗವಂತ ತನ್ನ ಲೀಲಾರ್ಥವಾಗಿ ಎತ್ತಿದನೆನ್ನಲಾಗಿರುವ ಸನತ್ಕುಮಾರಾದಿ ಇಪ್ಪತ್ತೊಂದು ಅವತಾರಗಳಲ್ಲಿ ಈ ಹತ್ತು ಅವತಾರಗಳು ಹೆಚ್ಚಿನ ಪ್ರಾಶಸ್ತ್ಯ ಪಡೆದಿವೆ.

''ಭಗವದ್ಗೀತೆಯಲ್ಲಿ ಭಗವಾನ್ ಕೃಷ್ಣ ಹೇಳಿರುವ
ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ''

ಹೀಗೆ, ಮಹಾವಿಷ್ಣುವಿನ ಪ್ರಸಿದ್ಧವಾದ ಹತ್ತು ಅವತಾರಗಳಲ್ಲಿ ಮೊದಲನೆಯದು 'ಮತ್ಸ್ಯಾವತಾರ'. ಸೋಮಕನೆಂಬ ರಾಕ್ಷಸ ವೇದಗಳನ್ನು ಕದ್ದು ಪ್ರಳಯ ಜಲದಲ್ಲಿ ಅಡಗಿದ್ದಾಗ ವಿಷ್ಣು ಮತ್ಸ್ಯರೂಪವನ್ನು ತಾಳಿ ವೇದಗಳನ್ನೆತ್ತಿ ತರುತ್ತಾನೆ. ಎರಡನೆಯದು ಕೂರ್ಮಾವತಾರ. ದೇವತೆಗಳು, ಅಸುರರು ಅಮೃತಕ್ಕಾಗಿ ಸಮುದ್ರ ಕಡೆಯುವಾಗ ಮಂದರ ಪರ್ವತವನ್ನು ಬೆನ್ನ ಮೇಲೆ ಹೊತ್ತು ನಿಲ್ಲುತ್ತಾನೆ. ಮೂರನೆಯದು ವರಹಾವತಾರ. ಉದ್ದೇಶ ಹಿರಣ್ಯಾಕ್ಷನ ಸಂಹರಿಸಿ ಭೂಮಿಯ ಉದ್ಧಾರ ಮಾಡುವುದು. ಹಿರಣ್ಯಾಕ್ಷನು ಭೂಮಿಯನ್ನು ಚಾಪೆಯಂತೆ ಸುತ್ತಿಕೊಂಡು ಸಮುದ್ರ ಪ್ರವೇಶ ಮಾಡಿದಾಗ ವಿಷ್ಣು ವರಾಹರೂಪಿ ಯಾಗಿ ತನ್ನ ಕೋರೆದಾಡೆಗಳಿಂದ ಭೂಮಿಯನ್ನೆತ್ತಿ ಹಿಂದಕ್ಕೆ ತರುತ್ತಾನೆ. ನಾಲ್ಕನೆಯದು ನರಸಿಂಹಾವತಾರ, ಅರ್ಧನರ, ಮತ್ತರ್ಧಸಿಂಹ; ಸಿಂಹದ ಮುಖ ಮನುಷ್ಯನ ಶರೀರ, ಭಯಂಕರ ರಾಕ್ಷಸನಾದ ಹಿರಣ್ಯಕಶಿಪು ವಿಷ್ಣುಭಕ್ತನಾದ ತನ್ನ ಮಗ ಪ್ರಹ್ಲಾದನನ್ನು 'ನಿನ್ನ ಹರಿಯು ಎಲ್ಲಿರುವನೆಂದು' ನಿಂದಿಸುತ್ತಿದ್ದಾಗ ಕಂಬದಲ್ಲಿ ವಿಷ್ಣು ಮೂಡಿ ಬಂದು ಅವನನ್ನು ಸಂಹರಿಸುವನು.

ಐದನೆಯದು ವಾಮನಾವತಾರ; ಕಶ್ಯಪ ಅದಿತಿಯರ ಹನ್ನೆರಡು ಮಕ್ಕಳಲ್ಲಿ ಚಿಕ್ಕವನು ವಾಮನ ಬಲ ಹಾಗೂ ಐಶ್ವರ್ಯ ಮದಗಳಿಂದ ಮೆರೆಯುತ್ತಿದ್ದ ಬಲಿ ಚಕ್ರವರ್ತಿಯ ಅಹಂಕಾರವನ್ನು ಅಡಗಿಸಲು ವಿಷ್ಣು ಕುಬ್ಜರೂಪಿ ವಾಮನಾವತಾರಿಯಾಗಿ ಪ್ರಕಟಗೊಳ್ಳುತ್ತಾನೆ. ಬಲಿಯು ಯಜ್ಞಮಾಡುತ್ತಿದ್ದ ಸಂದರ್ಭದಲ್ಲಿ ದಾನ ಬೇಡುವ ಕುಬ್ಜ ವಾಮನ ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಬೇಡುವನು. ಆಕಾಶ ಭೂಮಿಗಳನ್ನು ತನ್ನೆರಡು ಹೆಜ್ಜೆಗಳಿಂದ ಅಳೆದು, ಮೂರನೆಯ ಹೆಜ್ಜೆಯಿಡಲು ಜಾಗವನ್ನು ಕೇಳಿದಾಗ ಬಲಿಯು ತನ್ನ ತಲೆಯ ಮೇಲೆ ಮೂರನೆ ಹೆಜ್ಜೆಯಿಡಲು ಪ್ರಾರ್ಥಿಸುವನು. ಅಂತೆಯೇ ಬಲಿಯ ತಲೆಯ ಮೇಲೆ ಮೂರನೇ ಹೆಜ್ಜೆಯಿರಿಸಿದ ವಾಮನ ಅವನನ್ನು ಪಾತಾಳಕ್ಕೆ ತುಳಿದು ಬಿಡುತ್ತಾನೆ. ಆರನೆಯದು, ಪರಶುರಾಮಾವತಾರ, ಉನ್ಮತ್ತರಾಗಿದ್ದ ಕ್ಷತ್ರಿಯರ ಸೊಕ್ಕು ಮುರಿಯುವ ಉದ್ದೇಶದಿಂದ ವಿಷ್ಣು ಜಮದಗ್ನಿ ರೇಣುಕೆಯರ ಮಗನಾಗಿ ಜನಿಸುವನು. ಗಂಡುಗೊಡಲಿಯನ್ನು ಹಿಡಿದು ಸಮಸ್ತ ಲೋಕವನ್ನು ಸುತ್ತುತ್ತಾ ವೇದಮಾರ್ಗವನ್ನು ಬಿಟ್ಟು ಲೋಕ ಕಂಟಕರಾಗಿದ್ದ ಕ್ಷತ್ರಿಯರನ್ನು ಕೊಲ್ಲುತ್ತಾ, ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿದನು. ಭೃಗು ವಂಶಜನಾದ ಈತನಿಗೆ 'ಭಾರ್ಗವ'ನೆಂದೂ ಕರೆಯಲಾಗಿದೆ. ಏಳನೆಯದು ಪ್ರಸಿದ್ಧವಾದ ರಾಮಾವತಾರ. ವಿಷ್ಣು ಸೂರ್ಯವಂಶದ ದಶರಥ-ಕೌಸಲ್ಯಯರ ಮಗನಾಗಿ ಜನಿಸಿದನು. ಸುಬಾಹು ಮಾರೀಚ, ಖರದೂಷಣ, ತ್ರಿಶಿರಸ್ಸು, ಶುಂಭ, ನಿಶುಂಭ, ಕುಂಬಕರ್ಣ ರಾವಣಾದಿ ಅಸುರರನ್ನು ಕೊಲ್ಲುವ, ದುಷ್ಟ ಶಿಕ್ಷಣ ಶಿಷ್ಟ ರಕ್ಷಣೆಗಾಗಿ ಎತ್ತಿದ ಅವತಾರವಿದು. ಎಂಟನೆಯದು ಕೃಷ್ಣಾವತಾರ, ವಿಷ್ಣು ಯದುವಂಶದವರಾದ ವಸುದೇವ ದೇವಕಿಯರ ಎಂಟನೇ ಪುತ್ರನಾಗಿ ಜನಿಸುತ್ತಾನೆ.

ಶಿಶುಪಾಲ, ದಂತವಕ್ತ್ರ, ಕಂಸ, ಪೂತನಿ, ವೃಕ, ಧೇನುಕ ಚಾಣೂರ ಮುಷ್ಟಿಕಾದಿ ದುಷ್ಟರಾಕ್ಷಸರ ಮರ್ದನಕ್ಕಾಗಿಯೇ ಎತ್ತಿದ ಅವತಾರ. ಒಂಭತ್ತನೆಯದು ಬುದ್ಧಾವತಾರ. ಕಲಿಯುಗದ ಆರಂಭಕಾಲದಲ್ಲಿ ರಾಕ್ಷಸರು ವೈದಿಕ ಧರ್ಮದಲ್ಲಿ ಹೆಚ್ಚಿನ ಶ್ರದ್ಧೆ ನಂಬಿಕೆಗಳನ್ನಿಟ್ಟು, ಮಯನಿರ್ಮಿತ ತ್ರಿಪುರಗಳಿಂದ ಲೋಕ ಕಾರ್ಯದಲ್ಲಿ ತೊಡಗಿದ್ದಾಗ, ಅವರೆಲ್ಲರಿಗೂ ಪಾಷಂಡ ಧರ್ಮವನ್ನು ಬೋಧಿಸಿ ದಾರಿತಪ್ಪಿಸುವ ಸಲುವಾಗಿ ಎತ್ತಿದ ಅವತಾರವಿದು. ಹತ್ತನೆಯದು ಕಲ್ಕ್ಯಾವತಾರ, ತಪಸ್ಸಿನಿಂದ ಶಿವನನ್ನು ಮೆಚ್ಚಿಸಿದ ವಿಷ್ಣು ಅವನಿಂದ ಪಡೆದ ಕುದುರೆಯನ್ನೇರಿ ಕತ್ತಿ ಹಾಗೂ ಗಿಳಿಗಳನ್ನು ಹಿಡಿದು, ಕೊಬ್ಬಿನಿಂದ ಮೆರೆಯುತ್ತಿದ್ದ ಕಲಿಯ ಹುಟ್ಟಡಗಿಸುವ ಸಲುವಾಗಿ ಎತ್ತಿದ ಅವತಾರ. ಹೀಗೆ ಹತ್ತಾವತಾರಗಳನ್ನು ಹರಿದಾಸರೆಲ್ಲರೂ ತಮ್ಮ ಕೃತಿಗಳಲ್ಲಿ ಚಿತ್ರಿಸುವುದು ಒಂದು ಸಂಪ್ರದಾಯವಾಗಿಯೇ ಮೂಡಿಬಂದಿರುವುದನ್ನು ಗಮನಿಸಬಹುದು.'' ಅಂತೆಯೇ ಮಗುವಿನ ತೊಟ್ಟಿಲಿಡುವುದೇ ಮೊದಲಾದ ಸಂಪ್ರದಾಯಗಳನ್ನು ಕುರಿತ ಕೀರ್ತನೆಗಳಲ್ಲಿ ಹರಿಯ ದಶಾವತಾರ ಹಾಸು ಹೊಕ್ಕಾಗಿ ಚಿತ್ರಿಸಲಾಗಿದೆ.

''ಶ್ರೀಪಾದರಾಜರು 'ಲಾಲಿ ಗೋವಿಂದ ಲಾಲಿ ಕೌಸಲ್ಯಬಾಲ ಶ್ರೀರಾಮ ಲಾಲಿ' ಎಂದು ಪ್ರಾರಂಭವಾಗುವ ತಮ್ಮ ಒಂದು ಕೀರ್ತನೆಯಲ್ಲಿ ಮುತ್ತದೈಯರೆಲ್ಲಾ ಸಡಗರ ಸಂಭ್ರಮಗಳಿಂದ ಉಯ್ಯಾಲೆ ರಚಿಸಿ ತೂಗಿದರೆಂದಿದ್ದಾರೆ. ''ಇದರಂತೆಯೇ ಮಹಿಳಾ ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಹರಿಯ ದಶಾವತಾರ ಸ್ತುತಿಯನ್ನು ಬಹು ರಮ್ಯವಾಗಿ ಅಲಂಕಾರ, ಆಭರಣಗಳಿಂದ ಶೃಂಗರಿಸಿ ಸ್ತುತಿಸುವ ಮೂಲಕ ತಮ್ಮ ಭಕ್ತಿಯನ್ನು ಮೆರೆದಿರುವರು.

ಭಕ್ತ-ಭಗವಂತರಲ್ಲಿ ತಾಯಿ-ಮಗುವಿನ ಸಂಬಂಧವನ್ನು ಕಲ್ಪಿಸಿಕೊಂಡು ತಾವು ಯಶೋಧೆಯಾಗಿ, ಒಬ್ಬ ಗೋಪಿಯಾಗಿ ಮಗು ಕೃಷ್ಣನನ್ನು ಅಪ್ಪಿ ಮುದ್ದಾಡುವುದು, ಹಾಡಿ, ಊಡಿಸಿ, ಅಲಂಕರಿಸಿ ಸಂಭ್ರಮಿಸುವ ಪರಿಯು 'ವಾತ್ಸಲ್ಯ ಭಕ್ತಿ' ಅಥವಾ 'ವಾತ್ಸಲ್ಯಭಾವ' ಎಂದು ಕರೆಯಲಾಗಿದೆ. ಶ್ರೀಪಾದರಾಜರು, ಭಾಗವತದ ದಶಮಸ್ಕಂಧದಲ್ಲಿ ಬರುವ ಕೃಷ್ಣನ ಬಾಲ್ಯದ ವರ್ಣನೆ ಹರಿಭಕ್ತರೆಲ್ಲರಿಗೂ ರಸಗವಳ. ಹರಿದಾಸರಲ್ಲಿ ಆದ್ಯಪ್ರವರ್ತಕರೆನಿಸಿರುವ ಶ್ರೀಪಾದರಾಜರಲ್ಲಿಯೇ ಈ ವಾತ್ಸಲ್ಯಭಾವದ ವಾಹಿನಿಯು ಉಕ್ಕಿ ಹರಿದಿರುವುದು. ಮಗು ಕೃಷ್ಣನನ್ನು 'ಪೋಪು ಹೋಗೋಣ ಬಾರೋ ರಂಗ ಪೋಪು ಹೋಗೋಣ ಬಾರೋ ಕೃಷ್ಣ| - ಎಂದು ಕರೆಯುವಲ್ಲಿ ಶ್ರೀಪಾದರಾಜರು ತಾವು ಯಶೋಧೆಯೆ ಆಗಿಬಿಟ್ಟಿದ್ದಾರೆ.''

ಗಲಗಲಿ ಅವ್ವನವರು ಕೂಡ ತಮ್ಮ ಕೀರ್ತನೆಯಲ್ಲಿ ಹಿರಿಯರು ಹಾಕಿಕೊಟ್ಟ ಹರಿಯ ದಶಾವತಾರ ವರ್ಣನೆ ಹಾಗೂ ಶ್ರೀಕೃಷ್ಣನ ಬಾಲ್ಯದ ವರ್ಣನೆಯನ್ನು ಬಹು ಸ್ವಾರಸ್ಯವಾಗಿ ಹಾಡಿದ್ದಾರೆ. ಅವರ ದಶಾವತಾರ ಗಳೆಲ್ಲಾ ಅವ್ವನವರ ಮುಯ್ಯದ ಹಾಡುಗಳಲ್ಲಿ ಅತ್ಯಂತ ಭಕ್ತಿಪೂರ್ವಕವಾಗಿ ಮೂಡಿಬಂದಿವೆ. ಮತ್ತು ಆಕೆ ತನ್ನ ಕಾವ್ಯ ನಿರ್ಮಿತಿಗೆ ಹರಿದಾಸರ ಅನುಭವಗಳನ್ನು ತನ್ನ ಅನುಭವದಲ್ಲಿ ಭಾವಿಸಿಕೊಂಡು ನಿರ್ಮಿಸಿದ ಕೀರ್ತನೆಗಳೆಲ್ಲವೂ ಭಾವ ಸಮೃದ್ಧಿಯಿಂದ ಕೂಡಿವೆ. ಮಾನವ ಸಹಜ ಸಂಬಂಧಗಳ ನಡಾವಳಿಯಿಂದಲೂ ದೇವ ಮಾನವ ಬದುಕಿನ ರೀತಿ-ನೀತಿಗಳನ್ನು ಸಂಪ್ರದಾಯದ ಹೆಸರಿನಲ್ಲಿ ಒಂದೇ ರೇಖೆಯಲ್ಲಿ ನೋಡಲು ಪ್ರಯತ್ನಿಸಿರುವರು. ಭಗವಂತನ ಹತ್ತವತಾರಗಳಲ್ಲಿ ಒಂದಾದ ಕೃಷ್ಣಾವತಾರವನ್ನು ತನ್ನ ಕಾವ್ಯದಲ್ಲಿ ಬಹು ಸೊಗಸಾಗಿ ವರ್ಣಿಸಿರುವಳು. ಆದರೂ ಈ ಕೃತಿಯು ಅವ್ವನವರ 'ಜೋಗುಳದ ಹಾಡು' ಎಂದು ಗುರುತಿಸುವಲ್ಲಿ ವಿದ್ವಾಂಸರು ಖಚಿತವಾಗಿ ಹೇಳುವುದು ಕಷ್ಟ(ಸಮಗ್ರ ದಾಸ ಸಾಹಿತ್ಯ, ಸಂಪುಟ ೭) ಎಂದಿರುವರು ಮೊದಲಿಗೆ ಈ ಕೃತಿಯಲ್ಲಿನ ಹಾಡುಗಳು ಅವ್ವನವರ ಅಂಕಿತವಿಲ್ಲದೆ, ''ಜೋ..ಜೋ.. ಎಂದು ಪ್ರಾರಂಭವಾದ ಹಾಡು ''ಜೋ...ಜೋ..'' ಎಂದು ಮುಕ್ತಾಯವಾಗುವಲ್ಲಿ ಅಂಕಿತದ ಅನಿವಾರ್ಯತೆ ಬರದೆ ಹೋಗಿರಬಹುದು. ಆದರೂ ಅವ್ವನವರ ಕೀರ್ತನೆಗಳೆಂದೂ ನಾವು ಅವರು ವರ್ಣಿಸಿರುವ ದಶಾವತಾರದ ವರ್ಣನೆ ಹಾಗೂ ಆಭರಣ, ಅಲಂಕಾರಗಳ ಸಂಭ್ರಮಗಳಿಂದ ಅವು ಅವ್ವನವರ ಹಾಡುಗಳೆಂದು ಗುರುತಿಸಬಹುದಾಗಿದೆ.

ಅವ್ವ, ತನ್ನ 'ಜೋಗುಳದ ಹಾಡು' ಕೀರ್ತನೆಯಲ್ಲಿ ಶ್ರೀಕೃಷ್ಣನ ಬಾಲ್ಯದ ಪ್ರಾರಂಭದಿಂದಲೂ ವರ್ಣಿಸಿದ್ದು, ೫೨ ನುಡಿಗಳಿಂದ ರಚಿತವಾಗಿರುವ ಈ ಹಾಡಿನಲ್ಲಿ ಬಾಲ ಗೋಪಾಲನನ್ನು ವಿಧಿವತ್ತಾಗಿ ತೊಟ್ಟಿಲಿನಲ್ಲಿ ಮಲಗಿಸಿ ಜೋಗುಳ ಹಾಡಿದ ಪ್ರಸ್ತಾಪವಿದೆ. ಕೃಷ್ಣ ಹುಟ್ಟಿದ ಕೂಡಲೇ ಕಂಸನ ಭಯದಿಂದ ವಸುದೇವ ಅವನನ್ನೆತ್ತಿಕೊಂಡು ಗೋಕುಲದಲ್ಲಿ ಯಶೋಧೆಯ ಬಳಿಯಲ್ಲಿಟ್ಟು, ಯಶೋಧೆಯ ಬಳಿಯಲ್ಲಿದ್ದ ಹೆಣ್ಣು ಕೂಸನ್ನು ಒಯ್ದು ದೇವಕಿಯ ಬಳಿಯಲ್ಲಿಟ್ಟನೆಂಬುದರಿಂದ ಕೀರ್ತನೆ ಪ್ರಾರಂಭವಾಗುತ್ತದೆ. ಕ್ರಮವಾಗಿ ಲೌಕಿಕದಲ್ಲಿ ಮಗುವಿಗೆ ಹುಟ್ಟಿದಾರಭ್ಯ ನಡೆಸುವ ಜಾತಕರ್ಮಗಳನ್ನು, ತೊಟ್ಟಿಲಿಡುವ ಶಾಸ್ತ್ರಗಳನ್ನು ಹಂತ ಹಂತವಾಗಿ ಕಣ್ಣಿಗೆ ಕಟ್ಟುವಂತೆ ವರ್ಣಿಸುವಲ್ಲಿ ತಮ್ಮ ಕಾವ್ಯ ಸಾಮರ್ಥ್ಯ ಮೆರೆದಿದ್ದಾರೆ.

ಶ್ರೀಕೃಷ್ಣನು ಗೋಕುಲದಲ್ಲಿ ಯಶೋಧೆ, ನಂದಗೋಪನ ಮಗುವಾಗಿ, ಚೆಂದದ ಮಗುವಿಗೆ ನಡೆಸುವ ಸಂಪ್ರದಾಯ ಜಾತಕರ್ಮಗಳನ್ನು ಒಂದೊಂದಾಗಿ ಬಿಡಿಸಿ ಹಾಡಿರುವರು.

''ನಂದಗೋಪನು ಕೇಳಿ ಆನಂದಬಟ್ಟು
ಚಂದದಲೆ ವಿಪ್ರರ ಕರೆಸಿದರಷ್ಟು
ಕಂದನ ವದನದಿ ಮದವು ತಂದಿಟ್ಟ
ಸುಂದರ ನಾಭಿನಾಲವ ಛೇದಿಸಿಟ್ಟ ಜೋ..ಜೋ..''

ದ್ವಾರಕೆಯಲ್ಲಿ ಕೃಷ್ಣ ಮಗುವಾಗಿ ಯಶೋಧೆಯ ಮಡಿಲಲ್ಲಿ ಕಣ್ಣುಬಿಡಲು ಆತನಿಗೆ ಹೆಸರಿಡುವ ಶಾಸ್ತ್ರಕ್ಕಿಂತಲೂ ಮುಂಚೆ 'ನಾಭಿನಾಲವ ಛೇದಿಸಿ' ಎಂಬುದು ಅವ್ವನವರ ಭಾಷೆಯಲ್ಲಿ ಲೀಲಾಮಯವಾಗಿ ಮೂಡಿಬಂದಿದೆ. ಅನಂತರ ಮಗುವಿಗೆ ಗಂಗೋದಕ ಎರೆದು ಜಾತಕರ್ಮ ಮಾಡಿ ತಾಯಿ, ಮಗುವಿಬ್ಬರಿಗೂ ಹಣೆಗೆ ರಕ್ಷೆಯಿಟ್ಟು ಹರಸುವ ಸಂದರ್ಭ ಅತ್ಯಂತ ಸುಂದರವಾದ ವರ್ಣನೆಯಾಗಿದೆ. ಹೀಗೆ ಹತ್ತು ದಿನಗಳಲ್ಲಿ ನಡೆಯುವ ನಿತ್ಯ ಉತ್ಸವ, ಪೂಜೆಗಳಲ್ಲಿ ವರ್ಣಿತವಾಗುವ ಕಾರ್ಯಕ್ರಮವು ಅವರೊಡನೆಯೇ ಬಾಲ ಕೃಷ್ಣನು ತನ್ನ ಬಾಲ್ಯದಾಟದಲ್ಲಿಯೇ ಪೂತನಿಯನ್ನು ಕೊಂದುದನ್ನು, ತನ್ನ ಹಾಡಿನಲ್ಲಿ ಹಿಡಿದಿಟ್ಟಿದ್ದಾಳೆ. ಹಾಗೆಯೇ, ಅವ್ವ ತನ್ನ ಕಲ್ಪನೆಯಲ್ಲಿ ಕೃಷ್ಣನ ತೊಟ್ಟಿಲು ತೂಗುವುದು ಈ ರೀತಿಯಲ್ಲಿ

''ಅತಿ-ಬ್ಯಾಗ ವಿಶ್ವಕರ್ಮನ ಕರೆಸಿದಳು
ರತ್ನ ಮಾಣಿಕ ಮುತ್ತುಗಳ ತೆತ್ತಿಸಿದಳು
ಮತಿಯಿಂದ ದಶರೂಪಗಳ ರಚಿಸಿಹಳು
ಮನ್ಮಥನ ಪಿತನು ಪವಡಿಸುವ ತೊಟ್ಟಿಲೊಳು ಜೋ ಜೋ...''
''ಶೃತಿ-ತತಿ-ಮಯವಾದ ರತ್ನದ ಕಾಲು
ದೇವತೆಗಳ ತುಂಬಿದ್ದ ಜತೆಯಾದ ಕೀಲು

ಚತುರನ ಕುಶಲಕ್ಕೆ ಆದಳು ಲೋಲು

ಅತಿ-ನೂತನವಾದ ಉಡುಗೊರೆ ಕೊಡಿಸಿದರು ಜೋ ಜೋ

ಕೃಷ್ಣನ ತೊಟ್ಟಿಲಿಗೆ ವಿಶ್ವಕರ್ಮನ ಕರೆಸಿ ಯಶೋಧೆಯು ತನ್ನ ಕಂದ ಮಲಗುವ ತೊಟ್ಟಿಲನ್ನು ವಿಷ್ಣುವಿನ ದಶರೂಪಗಳನ್ನು ಚಿತ್ರಿಸುವಂತೆ ಮಾಡಿ, ಅಂದದ ತೊಟ್ಟಿಲಿಗೆ ಸುಂದರವಾದ ದೇವತೆಗಳ ಚಿತ್ರದ ಕೀಲು ಮಾಡಿಸುವ ಮೂಲಕ ಕೃಷ್ಣ ಪ್ರೀತಿಯನ್ನು ತೋರಿದ್ದಾರೆ. ದೇವಾನುದೇವತೆಗಳೆಲ್ಲರೂ ಕೃಷ್ಣನನ್ನು ಒಲೈಸುವಂತೆ ಮಾಡಿದ್ದಾರೆ. ಕೃಷ್ಣನನ್ನು ಹೀಗೆ ವರ್ಣಿಸಿದ್ದಾಳೆ.

''ಹಾಲ್ಗಡಗ ಗೆಜ್ಜೆ ನೀಲದೊಡ್ಯಾಣವು

ಸಾಲು ಬೆರಳಿಗೆ ಸರಪಳಿ ಉಂಗುರವು

ಮೇಲಾದ ಅರಳೆಲೆ ಅಸಲಿ ಗುಂಡು ಬಿಂದಲಿಯು

ಬಾಲಗೆ ಇಟ್ಟರು ಬಾಲಸುಂದರಿಯರು ಜೋ ಜೋ

ಹಸುರಂಗಿ ಕುಂಚಿಗೆ ಮಿಸುನಿ ಟೊಪ್ಪಿಗೆಯು

ಬಿಸಜಾಕ್ಷಿ ಇಟ್ಟಳು ನೊಸಲ ಕಸ್ತೂರಿಯು

ಏಸವೊ ಮಾಣಿಕ ರತ್ನ ವಸ್ತ್ರ ಪರಿಪರಿಯು

ಶಿಶುವಿಗಿಟ್ಟು ಗೋಪಿ ಆದಳು ಸುಖಿಯು ಜೋ ಜೋ''[೨೯]

ಬಾಲಗೋಪಾಲನನ್ನು ಚೆಂದಾದ ವಸ್ತ್ರಭರಣಗಳಿಂದ ಅಲಂಕರಿಸುವಂತೆ ತಾಯಿ ಯಶೋಧೆಯ ಹಸಿ ಬಾಣಂತಿಯ ಸೊಗಸು, ತಾಯ್ತನ ಸುಖದ ಬಿನ್ನಾಣದ ನಡೆಯನ್ನು, ಬಾಣಂತಿಗಾಗಿಯೇ ನಡೆಸುವ ಉಪಚಾರ ಎಲ್ಲವನ್ನೂ ಸ್ವಾರಸ್ಯವಾಗಿ ಹೆಣೆದಿದ್ದಾಳೆ.

ಶ್ರೀಕೃಷ್ಣನ ಬಾಲಲೀಲೆಯ ವರ್ಣನೆಯಲ್ಲಿ ಸಂಭ್ರಮದ ನಾಮಕರಣದ ದಿನ ಸಡಗರದಿಂದ ಮಾಡಿದ ಊಟ ಉಪಚಾರಗಳನ್ನು ಅವ್ವ ಹೀಗೆ ವಿಸ್ತರಿಸುತ್ತಾಳೆ.

''ಖಂಡಗ ಉಸುಳಿ ಮಾಡಿ ಹಂಡೆ ತುಂಬಿಟ್ಟು

ಗುಂಡಪ್ಪಗ ಬ್ಯಾಗ ಮುತ್ತುಸರ ಕಟ್ಟಿಟ್ಟು

ದುಂಡು ಅಪ್ಪ ಉಸುಳೆ ತಂದಿಟ್ಟು

ಪುಂಡರೀಕಾಕ್ಷನ ಕರೆಸಿದರಷ್ಟು ಜೋ ಜೋ

ಕೃಷ್ಣನ ನಾಮಕರಣದಲ್ಲಿ ಭಾಗಿಯಾದ ನಾರಿಯರು ಹೊತ್ತ ಕಲಶವ ಇಳಿಸುವಾಗ ಹೆಸರ್ಹೇಳಿ ಒಳ ಬರಬೇಕೆಂಬ ಸಂಪ್ರದಾಯವು ಒಂದು ರೀತಿ ಬಾಗಿಲು ಕಟ್ಟೋ ಹಾಡು ಇದ್ದಂತೆಯೇ, ಗಂಡನ ಹೆಸರ್ಹೇಳಿದಾಗ ದಾರಿ ಬಿಡುವ ಕ್ರಮವದು. ಪಾರ್ವತಿಯು ಹೊತ್ತ ಕೊಡ ಇಳಿಸುವಾಗ ಹೆಸರ್ಹೇಳಿದರೆ ಬಿಡುವರೆಂದಾಗ, ಸೃಷ್ಟಿಸುವ ಚಿತ್ರಣ ಬಹು ಸರಸವಾಗಿರುವುದು.

"ಅಷ್ಟು ನಾರಿಯರು ಕೊಡ ಹಿಡಿದಾರು ಬಾಗಿ
ದಿಟ್ಟ ಪಾರ್ವತಿ ಮೆಟ್ಟು ಕಾಯ್ದಳು ಹೋಗಿ
ಶ್ರೇಷ್ಠ ಕುಟುಂಬ ಯಾರದೆಂದು ಕೂಗಿ
ಮೆಟ್ಟಿ ಯಾರದೆಂದು ನೋಡಿ ಹರುಷಾಗಿ ಜೋ ಜೋ
ಒಡೆಯ ಎನ್ನರಸ ಈ ಮೃಡನು ತಾನೆಂದು
ಕಡುಬ್ಯಾಗ ಪಾರ್ವತಿ ನುಡಿದಳು ಬಂದು
ಬಿಡು ಬಿಡು ನಂದಗೋಪನ ಕುಟುಂಬವೆಂದು
ಹಿಡಿದವರು ಹೆಸರ್ಹೇಳಿ ನಡೆದರು ಹೀಗೆಂದು"
ಜೋ.. ಜೊ...

ಎಂಬುದಾಗಿ ಅವ್ವ, ತನ್ನ ಕಾವ್ಯಕ್ಕೆ ಕೃಷ್ಣನ ತೂಗಲು ಬಂದ ಮುತ್ತೈದೆಯರ ಸಂತೋಷವನ್ನು ಬಣ್ಣಿಸಿದ್ದಾರೆ. ಪಾವರ್ತಿಯು ನಸುನಾಚಿ ದೂರ ನಿಂತರೆ, ಆಕೆಯನ್ನು ಸೆಳೆಯುವ ತಂತ್ರವೆಂದರೆ ಶ್ರೇಷ್ಠ ಕುಟುಂಬ ಯಾರೆದೆಂದು ಕೂಗಿದಾಗ ಕಡುಬ್ಯಾಗ ಪಾರ್ವತಿ ನುಡಿದಳು ಬಂದು ಎಂಬುದು ಸರಸಮಯವಾಗಿದೆ.

ಅವ್ವ ತನ್ನ 'ಸೇತುಬಂಧನದ ಕೀರ್ತನೆ'ಯಲ್ಲಿ ರಾಮಭಕ್ತ ಹನುಮಂತನನ್ನು, ಕೃಷ್ಣಭಕ್ತ ಪಾರ್ಥನನ್ನು ಅವರವರ ಭಕ್ತಿಗಾಗಿ ಉಂಟಾದ ವಾದದಲ್ಲಿ ಹನುಮಂತ ಪಾರ್ಥರಿಬ್ಬರೂ ಪಂದ್ಯ ಕಟ್ಟಿಕೊಳ್ಳುವರು. ಹೀಗೆ ವಾದದಲ್ಲಿ ಹನುಮಂತ ಗೆದ್ದರೆ, ಪಾರ್ಥ ಅಗ್ನಿ ಪ್ರವೇಶಿಸುವನೆಂತೂ, ಪಾರ್ಥ ಗೆದ್ದು ಹನುಮಂತ ಸೋತರೆ ಪಾರ್ಥನ ರಥದಲ್ಲಿ ನಿನ್ನ ದೂತನಾಗುವೆಂದು ಪಂಥ ಕಟ್ಟಿದ್ದರು. ಇಲ್ಲಿ ಕೀರ್ತನೆ ಆರಂಭವಾಗುವುದು ಪಾರ್ಥನು ಕ್ಷೇತ್ರ ಯಾತ್ರೆಗಳ ಮಾಡುತ ಹೊರಟ ಸಂದರ್ಭದಲ್ಲಿ ದಾರಿಗಡ್ಡವಾಗಿ ಕುಳಿತ ವಾಯುಸುತನನ್ನು ಕಂಡು ಅರ್ಜುನನು ಪುಂಡತನದಿಂದ ತನ್ನ ಗಾಂಢೀವವನ್ನು ಹೆಮ್ಮೆಯಿಂದ ನೋಡುತ್ತಾ, ಹನುಮಂತನನ್ನು ಕಂಡು ಎಷ್ಟಾದರಾಗಲಿ ಮರ್ಕಟವೆಂದು ಪರಿಹಾಸ್ಯದಲ್ಲಿ ನಗುತ್ತಿರುವನು. ರಾಮಧ್ಯಾನದಲ್ಲಿ ತಲ್ಲೀನನಾಗಿದ್ದ ಹನುಮಂತ ತನ್ನೆದುರು ಅಪಹಾಸ್ಯದಲ್ಲಿ ತೊಡಗಿದ್ದ ಅರ್ಜುನನ್ನು ಕಂಡು ನೀನಿನ್ನು ಎಳಸು, ನೀನು ವಿನಾಕಾರಣ ಅಹಂಕಾರ ಪಡಬೇಡವೆಂದು ಮಾರುತಿಯು ಪ್ರತಿ ನುಡಿದನು. ಹೀಗೆ ಇಬ್ಬರ ನಡುವೆ ರಾಮ ಹೆಚ್ಚು, ಕೃಷ್ಣ ಹೆಚ್ಚು ಎನ್ನುವಂತೆ ಅರ್ಜುನ, ಹನುಮಂತರಿಬ್ಬರೂ ತಮ್ಮ ಸ್ವಾಮಿಯರ ಗುಣಗಳನ್ನು ಹಾಡಿ ಹೊಗಳ ಲಾರಂಭಿಸಿದರು. ಈ ವಾಗ್ವಾದ ಮುಂದುವರಿದು ಹನುಮಂತ ಅರ್ಜುನನ್ನು ಕುರಿತು ನಿನ್ನ ಸ್ವಾಮಿ(ಕೃಷ್ಣ)ಯ ಚರಿತವನ್ನು ಇಡೀ ಭೂಲೋಕವೇ ತಿಳಿದಿರುವುದು ಎಂದು ಹೇಳುತ್ತಾ, ಕೃಷ್ಣನ ಬಾಲ್ಯದ ತುಂಟಾಟಗಳನ್ನು, ಗೋವುಗಳ ಕಾಯುವ ಗೋಪಾಲಕನೆಂದೂ, ಗರುಡ ವಾಹನವೆಂದು, ದ್ರೌಪದಿಗೆ ಪಂಚ ಪತಿಯರನ್ನು ಕರುಣಿಸಿದವನು. ಹೀಗೆ ಪುಂಖಾನುಪುಂಖವಾಗಿ ಹನುಮಂತ ಕೃಷ್ಣನನ್ನು ಹೀಗಳೆಯುಲಾರಂಭಿಸಿದುದನ್ನು ಕೇಳದೆ, ಅರ್ಜುನನು

ಕೋಪದಿಂದ ಅವುಡುಗಚ್ಚಿ ಮಾರುತಿಯ ದೇವ ರಾಮಚಂದ್ರನನ್ನು ಕುರಿತು ತಾನೂ ಹೀಗಳೆಯಲಾರಂಭಿಸಿದನು.

"ನಿನ್ನ ಸ್ವಾಮಿ ಏನು ಮಾಡಿದನು
ಕೇಳೋ ಮರ್ಕಟ ಪರಾಕ್ರಮ
ತನ್ನ ಹೆಂಡತಿಯ ದೈತ್ಯರೊಳಿರಿಸಿ
ಕುಳಿತುಕೊಂಡು ಮೂಲ್ಯಾಗ ಸುಮ್ಮ"

ಎಂದು ಹೆಂಡತಿಯನ್ನು ಕಾಡಿಗಟ್ಟಿದವನು, ತಂದೆಯ ಮಾತನ್ನು ನಡೆಸಲಿಕ್ಕಾಗಿ ವನವಾಸಕ್ಕೆ ಹೊರಟು ತಂದೆಯ ಪ್ರಾಣ ರಕ್ಷಿಸದವನು. ತನ್ನ ಮಕ್ಕಳನ್ನೇ ಗುರುತಿಸಲಾರದೆ, ಅವರಿಂದಲೇ ಸೋತು ಮಡದಿಯ ಬಳಿ ಬಂದವನು ಎಂದು ಅರ್ಜುನನು ಮಾರುತಿಯನ್ನು ಹಂಗಿಸಿ ನುಡಿದನು.

ಹೀಗೆ ಇಬ್ಬರಿಗೂ ಉಂಟಾದ ಸ್ವಾಮಿಭಕ್ತಿಗಾಗಿ ನಡೆದ ವಾದ ಸರಣಿಯಲ್ಲಿ ಹನುಮಂತನು ಅರ್ಜುನ ಕಟ್ಟುವ ಶರಗಳ ಸೇತುವೆಯನ್ನು ಮುರಿಯಬೇಕೆಂಬುದು ಪಂಥವಾಗಿತ್ತು. ಈ ಪಂಥದಲ್ಲಿ ಹನುಮಂತನು ನಿಶ್ಚಲ ಮನಸ್ಸಿನಿಂದ ರಾಮನನ್ನು ಮನಸ್ಸಿನಲ್ಲಿ ಧ್ಯಾನಿಸಿ ದಿಟ್ಟತನದಿಂದ 'ಜೈರಾಮ'ನೆಂದು ಹಾರಿದನು. ಆಂಜನೇಯ ಹಾರಿದ ರಭಸಕ್ಕೆ ಕ್ಷಣ ಮಾತ್ರದಲ್ಲಿ 'ಖಡ್ ಖಡಲ್' ಎಂಬ ಝೇಂಕಾರ ಶತಕೋಟಿ ಸಿಡಿಲಿನಂತೆ ಅಪ್ಪಳಿಸಿತು ದೊಡ್ಡಸಪ್ಪಳವಾಗಿ ಸೇತುವೆಯ ಅರ್ಧಭಾಗ ಒಡೆದು ಬಿತ್ತು.

ಇಲ್ಲಿ ಅವ್ವ ಕೊಡುವ ಸಾಂದರ್ಭಿಕ ಚಿತ್ರಣ ಸಮಯೋಚಿತವೂ ಸಮಂಜಸವೂ ಆಗಿರುವುದು.

"ಕಡಲೊಳಗಿನ ಮೀನು
ಮೊಸಳೆಗಳು ಮಡಿದವು
ಅರ್ಧಕ್ಷಣದೊಳಗೆ
ಬ್ರಹ್ಮಾಂಡವೆ ಸ್ಫೋಟವಾಗುವಂತೆ"

ಅರ್ಜುನ ಕಟ್ಟಿದ ಆತ್ಮವಿಶ್ವಾಸದ ಶರಗಳ ಸೇತುವೆ ಕ್ಷಣ ಮಾತ್ರದಲ್ಲಿ ಮುರಿದು ಬಿದ್ದು, ಮಾರುತಿಯ ಬ್ರಹ್ಮಚರ್ಯದ ಶಕ್ತಿಯರಿತು, ಅರ್ಜುನನು ಪಂಥ ಕಟ್ಟಿಕೊಂಡಂತೆಯು ಅಗ್ನಿಪ್ರವೇಶಿಸಲು ಸಿದ್ಧನಾದನು. ಆಗ ಪಾರ್ಥನ ಆರಾಧ್ಯದೈವ ಕೃಷ್ಣನು ಒಬ್ಬ ವಯೋವೃದ್ಧನ ವೇಷದಲ್ಲಿ ಕಾಣಿಸಿಕೊಂಡು, ತನ್ನ ಭಕ್ತರ ದೀನವಾಣಿಗೆ ಕಿವಿಗೊಡುವನೆಂಬಂತೆ ಕೇವಲ ಒಂದು ಬುದ್ಧಿಹೀನ ಮರ್ಕಟನ ಮಾತಿಗೆ ದೇಹವನ್ನು ಅಗ್ನಿಗೆ ಅರ್ಪಿಸಬೇಡವೋ ಎಂಬುದಾಗಿ ಹೇಳುತ್ತಾನೆ. ರಾಮಭಕ್ತನು ನಾನೂ ಕೂಡ, ಮನಸ್ಸಿನಲ್ಲಿ ಭಕ್ತಿಯ ತುಂಬಿ ಏಳು ಬಾಲಕ. ಚಿತ್ತವನ್ನು ಸಮಾಧಾನವಾಗಿಸಿಕೊಂಡು ಮತ್ತೊಮ್ಮೆ ಸೇತುವೆ ಕಟ್ಟು ಎಂದು ಹುರಿದುಂಬಿಸುವನು. ಆ ವಯೋವೃದ್ಧನ ಮಾತಿಗೆ ಮನ್ನಣೆ ನೀಡುತ್ತಾ, ಅರ್ಜುನನು ಮನಸ್ಸಿನಲ್ಲಿ ಶ್ರೀಕೃಷ್ಣನ ಧ್ಯಾನ ಮಾಡುತ್ತಾ ಒಂದೊಂದೇ ಶರಗಳಿಂದ ಜಗಿಯಾಗಿ ಸೇತುವೆ

ನಿರ್ಮಾಣ ಮಾಡಿದನು. ಪಕ್ಷಿವಾಹನನಾದ ಕೃಷ್ಣನು ತನ್ನ ಮಾಯೆಯಿಂದ ಸೇತುವೆಗೆ ನಡುಭಾಗದಲ್ಲಿ ಚಕ್ರ ಇರಿಸಿದನು. ಇದನ್ನು ತಿಳಿಯದ ಮಾರುತಿ ಅರ್ಜುನ ಕಟ್ಟಿದ ಸೇತುವೆ ಮೇಲೆ ಜಿಗಿದು ಹಾರಿ ನಿಂತನು. ಆದರೆ ಈ ಬಾರಿ ಸೇತುವೆ ಮುರಿಯದೆ, ಹಾಗೆ ಹನುಮಂತನು ಸೇತುವೆ ಮೇಲಿನಿಂದಲೇ ಉರುಳಿ ಬಿದ್ದು ಜ್ಞಾನ ತಪ್ಪಿದನು.

ಅಂತರ, ಆ ವಯೋವೃದ್ಧನು ರಾಮಚಂದ್ರನ ರೂಪವನ್ನು ತೋರಿದಾಗ ಹನುಮಂತನು ಆನಂದದಿಂದ ಕುಣಿ ಕುಣಿದು ಭಜನೆ ಪಾಡುತ ಪ್ರಭು ರಾಮಚಂದ್ರನ ಸ್ತುತಿಸುವನು. ಹನುಮಭಕ್ತಿಯ ಕಂಡ ಅರ್ಜುನನು ಕೂಡ ಮೂಕವಿಸ್ಮಿತನಾಗಿ ನೋಡುತ್ತಿದ್ದಂತೆಯೇ ಕಪಿವೀರ ಮಾರುತಿಯು ತನ್ನ ಇಚ್ಛೆಯಂತೆಯೇ ಪಾರ್ಥನ ರಥದ ಧ್ವಜದಲ್ಲಿ ಬಂದು ಕುಳಿತುಕೊಳ್ಳುವೆನೆಂದು ಅಭಯ ನೀಡುವಲ್ಲಿ ಈ ಕೀರ್ತನೆಯು ಸೌಹಾರ್ದ ರೀತಿಯಲ್ಲಿ ಕೊನೆಗೊಳ್ಳುತ್ತದೆ. ರಾಮಭಕ್ತ, ಕೃಷ್ಣಭಕ್ತರಿಬ್ಬರೂ ಶ್ರೀರಾಮೇಶನ ಸ್ಮರಿಸುತ್ತಾ ಮುಂದೆ ಸಾಗುವ ಚಿತ್ರಣದೊಂದಿಗೆ ಈ ಕೀರ್ತನೆ ಕೊನೆಗೊಳ್ಳುತ್ತದೆ.

ಅವ್ವ, ವಿವರಿಸುವ ಈ ಮೇಲಿನ ಎರಡು ಪ್ರಸಂಗಗಳಲ್ಲಿಯೂ ಭಕ್ತರ ದೀನ ಕರೆಗೆ ಓಗೊಟ್ಟು ಬರುವ ಭಗವಂತನು ಕಾಲಕಾಲಕ್ಕೆ ಭಕ್ತರ ಅತಿಶಯವಾದ ಭಕ್ತಿ, ಅಹಂಕಾರಕ್ಕೆ ಕಾರಣವಾದರೆ, ಭಗವಂತನು ಹಾಗೆಯೇ ಕಾಲಾನುಕಾಲಕ್ಕೆ ತಕ್ಕ ಪಾಠವನ್ನು ಕಲಿಸುವನು.

ಒಟ್ಟಾರೆಯಾಗಿ ಹೇಳಬಹುದಾದರೆ ಗಲಗಲಿ ಅವ್ವ ಲೌಕಿಕ ವ್ಯವಹಾರದೊಂದಿಗೆ ಅಲೌಕಿಕ ಭಕ್ತಿಯನ್ನು ಆಚರಿಸಬಹುದಾದ ಹಲವು ಸರಳ ಮಾರ್ಗೋಪಾಯಗಳನ್ನು ತಿಳಿಸಿಕೊಡುವರು. ವಿಶೇಷವಾಗಿ ತುಂಬು ಕುಟುಂಬದ ಸ್ತ್ರೀಯರು ತಮ್ಮ ಬಂಧು-ಬಾಂಧವರೊಂದಿಗೆ ಆಚರಿಸಬಹುದಾದ ಭಕ್ತಿಯ ಅನೇಕ ಮಾರ್ಗೋಪಾಯಗಳು ಈ ಅಧ್ಯಾಯದಲ್ಲಿವೆ. ಅವಿಭಕ್ತ ಕುಟುಂಬದ, ಅವಿಭಕ್ತ ಪ್ರಜ್ಞೆಯಲ್ಲಿ ಆಚರಿಸಲ್ಪಡುವ ಭಕ್ತಿಯ ಆಚರಣೆಗಳು ಮಾನವರ ಮನಸ್ಸನ್ನು ಹೇಗೆ ತಿಳಿಗೊಳಿಸಬಲ್ಲವು ಎಂಬುದನ್ನು ಅನೇಕ ನಿದರ್ಶನಗಳ ಮೂಲಕ ಸಮರ್ಥಿಸಿ ತೋರಿಸಿದ್ದಾರೆ. ಭಾಗವತ ಧರ್ಮದ ನೆಲೆಯಿಂದ ಬಂದ ಅವ್ವ ಶ್ರೀಕೃಷ್ಣ ಭಕ್ತಿಯನ್ನು ಕೇಂದ್ರವಾಗಿರಿಸಿಕೊಂಡಾಗ್ಯೂ ಆ ಭಕ್ತಿಯನ್ನು ಸಾರ್ವತ್ರೀಕರಿಸುವುದು ಇಲ್ಲಿಯ ವಿಶೇಷ. ಅಲ್ಲದೆ, ಭಕ್ತಿ ಕುರಿತ ಆಚರಣೆಗಳ ಅನೇಕ ಸಂದರ್ಭಗಳಲ್ಲಿ ಕೌಟುಂಬಿಕ ಸ್ತ್ರೀಯರ ಮಾನಸಿಕ ಸಂಕಥನವನ್ನು ಸೂಕ್ಷ್ಮವಾಗಿ ಕಟ್ಟಿಕೊಟ್ಟಿದ್ದಾರೆ. ಆ ಮೂಲಕ ಮುಂದಿನ ಮಹಿಳಾ ಹರಿದಾಸರಿಗೆ ಮಾರ್ಗಸೂಚಿಯಾಗಿದ್ದಾರೆ.

**ಅಡಿಟಿಪ್ಪಣಿಗಳು**

೧. ಎಚ್ಕೆಸ್ಕೆ, ದಾಸರ ಸಾಹಿತ್ಯ ದರ್ಶನ, ಸಮಗ್ರ ದಾಸ ಸಾಹಿತ್ಯದ ಪ್ರಥಮ ಗ್ರಂಥ, ಮಂಗಳ ಭಾರತಿ ಪ್ರಕಾಶನ, ಮೈಸೂರು

೨. ಹಣಮಂತ ತಾಸಗಾಂವಕರ, ಗಲಗಲಿ ಅವ್ವನವರ ಕೀರ್ತನೆಗಳು, ಸಂಪುಟ ೭, ಪು.೧೧

೩. ಅದೇ, ಪು.೪

೪. ಅದೇ, ಪು.೬

೫. ಅದೇ, ಪು.೧೪

೬. ಅದೇ, ಪು.೨೧

೭. ಅದೇ, ಪು.೧೫

೮. ಅದೇ, ಪು.೧೭

೯. ಅದೇ, ಪು.೨೩

೧೦. ಅದೇ, ಪು.೨೪

೧೧. ಅದೇ, ಪು.೨೮

೧೨. ಅದೇ, ಪು.೩೬

೧೩. ಅದೇ, ಪು.೩೭

೧೪. ಅದೇ, ಪು.೨೪

೧೫. ಅದೇ, ಪು.೨೮

೧೬. ಅದೇ, ಪು.೬೫

೧೭. ಅದೇ, ಪು.೭೬

೧೮. ಅದೇ, ಪು.೭೭

೧೯. ಅದೇ, ಪು.೮೯

೨೦. ಅದೇ, ಪು.೯೧

೨೧. ಅದೇ, ಪು.೧೧೪

೨೨. ಅದೇ, ಪು.೧೧೮

೨೩. ಅದೇ, ಪು.೧೨೦

೨೪. ಅದೇ, ಪು.೧೨೬

೨೫. ಅದೇ, ಪು.೧೨೭

೨೬. ಅದೇ, ಪು.೧೩೨

೨೭. ಅದೇ, ಪು.೧೩೪

೨೮. ಅದೇ, ಪು.೧೩೯

೨೯. ಅದೇ, ಪು.೧೪೩

೩೦. ಅದೇ, ಪು.೧೫೪

೩೧. ಅದೇ, ಪು.೧೬೮

೩೨. ಅದೇ, ಪು.೧೭೧

೩೩. ಅದೇ, ಪು.೧೭೬

೩೪. ಅದೇ, ಪು.೧೭೯

೩೫. ಅದೇ, ಪು.೧೮೧

೩೬. ಅದೇ, ಪು.೧೮೨

೩೭. ಅದೇ, ಪು.೩೮

೩೮. ಉಷಾರಾಣಿ ಪಿ., ಹೆಳವನಕಟ್ಟೆ ಗಿರಿಯಮ್ಮನ ಜೀವನ ಮತ್ತು ಕೃತಿಗಳು, 'ಅಪ್ರಕಟಿಕ ಸಂಶೋಧನ ಕೃತಿ', ಪು.೬೭

೩೯. ಹಣಮಂತ ತಾಸಗಾವಂಕರ, ಪೂರ್ವೋಕ್ತ, ಪು.೩೩೩

೬

# ಗಲಗಲಿ ಅವ್ವನವರ ಕೀರ್ತನೆಗಳು: ಭಾಷೆ ಮತ್ತು ಶೈಲಿ

'ಭಾಷೆಯ'ಯು ಮಾನವ ಸಮಾಜದ ಬಹುಮುಖ್ಯ ಅಂಗವಾಗಿರುವುದು. ಹಾಗೂ ಸಮಾಜದ ನಡುವಿನ ಸಂವಹನ ಸಾಧ್ಯತೆಗೆ ಭಾಷೆಯು ಅಡಿಗಲ್ಲಾಗಿರುವುದು. ಅರ್ಥಸಹಿತವಾಗಿ ಮಾತಿನ ಜಾಡು ಮಾನವ ಸಮಾಜದ ಭಾಷಿಕ ಬೆಳವಣಿಗೆ ಜೊತೆಗೆ ಸಾಮಾಜಿಕ ಅಭಿವೃದ್ಧಿಯನ್ನು ಸೂಚಿಸುವಂತಹದ್ದು. ಮಾನವರ ಸಾಮಾಜಿಕ ಬದುಕಿನ ಸ್ವತಂತ್ರವಾದ ಅಭಿವ್ಯಕ್ತಿಯ ಮೂರ್ತರೂಪವಾಗಿದೆ.

ದಾಸ ಸಾಹಿತ್ಯದ ಪ್ರಚಾರವನ್ನು ಆಡುಮಾತಿನ ಧಾಟಿಯಲ್ಲಿ ಪ್ರಾರಂಭಿಸಿ ಹರಿದಾಸರು ತಮ್ಮ ಲೋಕಜ್ಞಾನ, ತತ್ವದರ್ಶನ, ಧಾರ್ಮಿಕ ವಿಚಾರಗಳನ್ನು ಒಳಗೊಂಡ ದೇಸಿ ಮಾದರಿಯಲ್ಲಿ ಪ್ರಚಾರ ಮಾಡಲಾರಂಭಿಸಿದರು. ದಾಸರ ಈ ಆಡುಮಾತಿನ ಬಳಕೆಗೆ ವಚನ ಸಾಹಿತ್ಯವು ಮೂಲ ಪ್ರೇರಣೆ ಎಂಬುದು ಐತಿಹಾಸಿಕ ಸತ್ಯವಷ್ಟೇ. ಆದರೂ ಭಾಷೆಯು ದಾಸರು ಬಳಸಿಕೊಂಡಿರುವಂತೆ ಗೇಯಗುಣದ, ಲಯಬದ್ಧಗತಿಯನ್ನೊಳಗೊಂಡ ಪದ್ಯದ ರಚನೆ, ಪ್ರಾಸದ ಬಳಕೆ, ಅರ್ಥಬದ್ಧವಾದ ಹಾಡುಗಳು, ವಾಚಕರಲ್ಲಿ ಆಸಕ್ತಿ ಉಳಿಸುತ್ತವೆ. ಆಡುಮಾತಿನ ಧಾಟಿ ಹೆಚ್ಚು ಸಹಕಾರಿಯೂ, ಆಪ್ತಭಾವ ಮೂಡಲು ಸಹಾಯಕವಾಗಿದೆ.

ಸಮಾಜದ ಅಂಕುಡೊಂಕು ತಿದ್ದುವ, ಧಾರ್ಮಿಕವಾಗಿ ನೀತಿ-ನಿಯಮಗಳನ್ನು ಹೇಳುವುವು. ಸರಳವಾದ ಭಕ್ತಿಯನ್ನು ತಿಳಿಸುವುದು. ಜೀವನ ಮೌಲ್ಯಗಳನ್ನು ಪಾಲಿಸುವ ಹಿತೋಪದೇಶದಂತೆ ದಾಸರ ನುಡಿಗಳು ಅನುಭವ ಜನ್ಯವಾದವು. ಹರಿದಾಸರು ಅನುಭವದಿಂದ ಕಂಡುಕೊಂಡ ಬದುಕಿನ ಮೌಲ್ಯಗಳಿಗೆ ದಾರಿ ತೋರುವಂತಿವೆ. ಸತ್ಯಯುತವಾದ ಗೀತೆಗಳ ರಚನೆಯು ದಾಸಸಾಹಿತ್ಯದ ಮುಖ್ಯ ನೆಲೆಯಾಯಿತು. ಹೀಗೆ ಮುಖ್ಯವಾಹಿನಿಯಲ್ಲಿ ಹರಿಯುವ ದಾಸವಾಣಿ ತನ್ನ ಸುತ್ತಲಿನ ಪರಿಸರದಿಂದಲೂ, ಸಾಮಾಜಿಕ ಹಿನ್ನೆಲೆಯಿಂದಲೂ ಜನರ ಭಾಷೆಗೆ ಒತ್ತುಕೊಟ್ಟಿತು. ಬದುಕಿನಲ್ಲಿ ಹಾದು ಬರುವ ಅನೇಕ ಅನುಭವಗಳನ್ನು ಹಿಡಿದಿಡಲು ಸಮರ್ಥವಾಯಿತು.

ಜನಸಮುದಾಯದ ಆಡು ನುಡಿಗಳು, ಗಾದೆಗಳು, ಶಕುನಗಳು, ಶುಭ ಸಮಾರಂಭಗಳಲ್ಲಿ ನಡೆಯುವ ವಿಧಿ-ವಿಧಾನಗಳು, ಶಾಸ್ತ್ರ ಸಂಪ್ರದಾಯಗಳು ದಾಸ ಸಾಹಿತ್ಯದ ಸತ್ವವಾಗಿವೆ. ಇಲ್ಲಿ ಜನರು ತೊಡಗಿಸಿಕೊಳ್ಳುವ ಹಬ್ಬ-ಹರಿದಿನಗಳಲ್ಲಿನ ರೀತಿ-ನೀತಿಗಳು ವಿಶೇಷವಾಗಿವೆ. ಅವರ ಸಂಭ್ರಮಾಚರಣೆಯ ಆತುರ-ಕಾತುರಗಳು, ಆಹಾರ-ತಿನಿಸುಗಳ ವೈವಿಧ್ಯಮಯತೆ, ಉಡುಗೆ-ತೊಡುಗೆ ವಿಶಿಷ್ಟವಾದವು. ಅಲಂಕಾರದ ಆಭರಣಗಳು ವರ್ಣಿತಗೊಂಡು ಒಂದು ಕಾಲಮಾನದ ಸಾಮಾಜಿಕ ಸಂಸ್ಕೃತಿಯನ್ನು ಹಿಡಿದಿಡುವಲ್ಲಿ ಪ್ರಮುಖವಾದ ಪಾತ್ರವಹಿಸುತ್ತವೆ.

''ಹರಿದಾಸರ ಅಭಿವ್ಯಕ್ತಿಗೆ ಸಂಗೀತದ ತಾಳಲಯಗಳುಳ್ಳ ಪ್ರಾದೇಶಿಕ ಭಾಷೆಯಲ್ಲಿ ಹಾಡುಗಳು ಕೇಳುಗರಲ್ಲಿ ಸಮ್ಮೋಹಕತೆಯನ್ನು ಉಳಸಿರುವುವು. ಈ ಕ್ರಿಯೆಯು ಭಾಷೆಯ ಸೃಜನಶೀಲತೆಯ ನೆಲೆಯಲ್ಲಿ ನಡೆಯುತ್ತದೆ. ಇಂತಹ ಸಂದರ್ಭದಲ್ಲಿ, ಅಂದಿನ ಸಾಮಾಜಿಕ ಸ್ಥಿತಿಗತಿಗೆ ಅನುಸಾರವಾಗಿ ದಾಸರು ಬಳಸಿರುವ ಭಾಷಾ ಪ್ರಯೋಗ ಮತ್ತು ಸಂಗೀತವು ಕಾಲ ಸರಿದಂತೆ, ಹಿಂದಿನ ಬಳಕೆಯಲ್ಲಿನ ಪ್ರಯೋಗವಾದ ಪದಗಳು ಪ್ರಸ್ತುತದಲ್ಲಿ ಹಳೆಯ ಪದಗಳಿಗೆ ಹೊಸ ಅರ್ಥ ಕಲ್ಪಿಸುವ ಪ್ರಕ್ರಿಯೆ, ಹೊಸ ವಾಕ್ಯಗಳ ರಚನೆಗಳು ಸಿದ್ಧವಾಗುತ್ತವೆ.

''ದುರ್ಜನರ ಸಂಗ ಎಂದಿಗೂ ಒಲ್ಲೆನು ಇಂಥ
ಸಜ್ಜನ ಸಂಗದೊಳಗಿರಿಸೆನ್ನ ರಂಗ
ಉಂಡ ಮನೆಗೆರಡು ಎಣಿಸುವಾತನ ಸಂಗ
ಕೊಂಡೆಯವ ಪೇಳಿ ಕಾದಿಸುವವನ ಸಂಗ
ತಂದೆ ತಾಯನು ಬೈದು ಬಾದಿಸುವವನ ಸಂಗ
ನಿಂದಕರ ಸಂಗ ಬಹುಭಂಗ ರಂಗ''

ಕನಕದಾಸರ ಈ ಕೀರ್ತನೆ ಅರ್ಥಪೂರ್ಣವಾಗಿದೆ.[೦] ಹರಿದಾಸ ಸಾಹಿತ್ಯದಲ್ಲಿ ಆಡುನುಡಿಗೆ ನೀಡಿರುವ ಪ್ರಾಮುಖ್ಯತೆ ಹಿರಿದಾದ್ದು. ಇಲ್ಲಿ ಪುರಂದರದಾಸರು ಪ್ರಮುಖರು. ಅವರು ಜನಭಾಷೆಗೆ ತಮ್ಮದೇ ಆದ ಅನುಭವದ ಅನೇಕ ಹೊಳಹುಗಳುಳ್ಳ ಬದುಕಿನ ಅರ್ಥ ನೀಡಿದ್ದಾರೆ. ಅವರು ಬಳಸುವ ದಿನನಿತ್ಯದ ಸಂಗತಿಗಳು, ಪದಗಳ ಅರ್ಥಪೂರ್ಣ ಸಾಧ್ಯತೆಗಳಿಗೆ ನೀಡುವ ವ್ಯಾಖ್ಯಾನ ಎಂತಹವರಲ್ಲೂ, ಕೇಳುವ, ಆಲಿಸುವ ವಿಚಾರಗಳಿಗೆ ಸತ್ವಪೂರ್ಣ ರಚನೆಗಳಾಗಿವೆ.

"ಕಿಚ್ಚಿಗೆ ಇರುವೆ ಮುತ್ತುವುದೆ"
'ಬರಿದೆ ನೀ ಬಯಸದಿರು ಇಹಲೋಕ ಸುಖವೆಂಬ ಅರಗಿನ ಪಾಯಸ'
ಕಲ್ಲು ಗೋವಿನ ಹಾಲ ಕರು ಬಯಸುವಂತೆ

ಹಸಿವೆಗಾರದೆ ಬೆಕ್ಕು ಹತ್ತಿಯನು ಮೆದ್ದಂತೆ'

'ಕೋಳಿಗೆ ಏತಕ್ಕೆ ಹೊನ್ನ ಪಂಜರವು'

ಈ ಸಾಲುಗಳಲ್ಲಿ ಬರುವ ಅರ್ಥಪೂರ್ಣ ಪ್ರತಿಮೆಗಳು, ಹೊಸಭಾವದೊಡನೆ ಕಾವ್ಯದ ಮೂಲಭಾವಕ್ಕೆ ಪೂರಕವಾಗಿ, ಒದಗಿಬಂದು ಪ್ರಯೋಜನಯುತ ಪರಿಣಾಮವುಂಟು ಮಾಡುವುದು. ಪುರಂದರದಾಸರು ಜನಭಾಷೆಯ ನಾಣ್ಣುಡಿಗಳ ಅರ್ಥಗಳೊಂದಿಗೆ ನಿಜಭಾವ ದರ್ಶನ ಮಾಡಿಸಿದ್ದಾರೆ.''[೨] ಜನರ ಬದುಕನ್ನು ಹತ್ತಿರದಿಂದ ಕಂಡುಕೊಳ್ಳುವ ಹರಿದಾಸರು ಕೈಯಲ್ಲಿ ತಾಳ ಚಿಟಿಗೆಗಳನ್ನು ಹಿಡಿದು, ಕಾಲಿಗೆ ಗೆಜ್ಜೆ ಕಟ್ಟಿ ಬೀದಿಯಲ್ಲಿ ಸಾಗಿದರು. ಈ ನಿಟ್ಟಿನಲ್ಲಿ ಹರಿದಾಸರ ಪ್ರಯತ್ನವು, ಭಕ್ತಿ ಸರಳ ಮಾರ್ಗದ ಕಡೆಗೆ ಜನರನ್ನು ಕೊಂಡೊಯ್ಯುವುದು. ಇಲ್ಲಿ ಮಹಿಳಾ ಹರಿದಾಸರದ್ದು ಮತ್ತೊಂದು ರೀತಿಯ ಪ್ರಯತ್ನವೆನ್ನಬಹುದು. ಮಹಿಳಾ ಹರಿದಾಸರ ಸಾಹಿತ್ಯ ರಚನೆಯು ಸವಾಲಿನ ಕೆಲಸ. ಕುಟುಂಬವೇ ಬದುಕಿನ ಸರ್ವಸಾಧ್ಯತೆಯಾಗಿರುವುದು. ಇಂತಲ್ಲಿ, ಮಹಿಳಾ ಹರಿದಾಸರು ರಚಿಸಿರುವ ಕೀರ್ತನೆಗಳು ಅವರ ಭಾವ ಪ್ರಪಂಚದ ಭಕ್ತಿ, ವೈರಾಗ್ಯ, ಸಡಗರ ಸಂಭ್ರಮಗಳಿಗೆ ರೂಪು ನೀಡಿವೆ. ಪ್ರಥಮ ಮಹಿಳಾ ಹರಿದಾಸರಾದ ಗಲಗಲಿ ಅವ್ವನವರ ಬದುಕು ಬರಹಗಳು ಈ ನಿಟ್ಟಿನಲ್ಲಿ ಪ್ರಮುಖವಾಗುತ್ತವೆ.

''ವಂಶಪಾರಂಪರ್ಯವಾದ ಪಂಡಿತ್ತೋತ್ತಮ ಮನೆತನ. ಇಲ್ಲಿ ದೇವಭಾಷೆಯಾದ ಸಂಸ್ಕೃತಕ್ಕೆ ಅಗ್ರಸ್ಥಾನ. ಹೀಗೆ ಪಂಡಿತ ಪರಂಪರೆಯು ಸಾಗಿ ಬಂತೇ ಹೊರತು ಹರಿದಾಸ ಪರಂಪರೆಯಲ್ಲ. ಅಂದು ಆಳರಸರ ಭಾಷೆಗೆ ಸಿಕ್ಕ ಮಾನ್ಯತೆ ಜನಭಾಷೆಯಾದ ಕನ್ನಡವು ಲಿಂಗಾಯತ ಮನೆಮಠಗಳಲ್ಲಿ ಬಳಕೆಯಷ್ಟಕ್ಕೆ ಸೀಮಿತವಾಗಿತ್ತು. ಜನರು ಮರಾಠಿ ಭಾಷೆಯ 'ವಾರಕರಿ' ಸಂಪ್ರದಾಯವನ್ನು ರೂಢಿಸಿಕೊಂಡು ಅಭಂಗಗಳನ್ನು ಹಾಡುತ್ತಿದ್ದರು. ಇಂತಹ ಸಂದರ್ಭದಲ್ಲಿ ಅವ್ವ, ತಮ್ಮ ಮನೆಭಾಷೆ ಸಂಸ್ಕೃತಮಯ ವೆನಿಸಿದ್ದರೂ, ಜನರ ಆಡು ಭಾಷೆ ಕನ್ನಡದಲ್ಲಿ ಕೀರ್ತನೆ ರಚನೆ ಮಾಡಿ ಮಹಿಳಾ ಹರಿದಾಸರು ಕನ್ನಡ ಅಭಿಮಾನಿಗಳೆನಿಸಿದ್ದಾರೆ.''[೩] ಜನ ಭಾಷೆಯಲ್ಲಿ ಹಾಡುಗಳನ್ನು ರಚಿಸಿ, ಭಕ್ತಿ ಸಾಧನೆಗೆ ಹೊಸ ದಾರಿ ಕಂಡುಕೊಂಡಿರುವುದು ಹರಿದಾಸರ ಸಾಧನೆಯಾಗಿರುವುದು. ಅವ್ವನವರು ತಮ್ಮ ಮನೆಯ ಪರಿಸರವು ಸದಾ ಪಂಡಿತೋತ್ತಮರ ವಾದ ಸರಣಿಯಲ್ಲಿ ತುಂಬಿರುವ ಸಂದರ್ಭದಲ್ಲಿಯೇ ಕನ್ನಡದ ಕೀರ್ತನೆ ರಚಿಸಿರುವುದು ಅವರ, ಕನ್ನಡಾಭಿಮಾನ ಹೆಗ್ಗಳಿಕೆಯಾಗಿರುವುದು.

ತಮ್ಮ ರಚನೆಯಲ್ಲಿ ನಿಡಿದಾದ ಸಂಪ್ರದಾಯದ ರೀತಿ-ರಿವಾಜುಗಳನ್ನು ಬಳಸಿಕೊಂಡಿದ್ದಾರೆ. ಸಂಪ್ರದಾಯಬದ್ಧ ಕೌಟುಂಬಿಕ ವಾತಾವರಣದಲ್ಲಿ ನಡೆಯುವ ಸಮಾರಂಭಗಳನ್ನೇ ತಮ್ಮ ಕಾವ್ಯದ ಮೂಲ ವಸ್ತುವಾಗಿಸಿದರು. ಅವರ ಪಾಂಡಿತ್ಯ ಪೂರ್ಣವಾದ ವಿದ್ವತ್, ಆಕೆ ಸಂಸ್ಕೃತದಲ್ಲಿ ಕೇಳಿ ತಿಳಿದ ವಿಚಾರಗಳನ್ನು, ವಿಷಯ ಸಂಪನ್ನತೆಯು ಕನ್ನಡ ಭಾಷೆಯ ಕೀರ್ತನೆಗಳಾಗಿ ರೂಪು ಪಡೆದಿರುವುದು ಆಕೆಯ ಕನ್ನಡ ಭಾಷಾಭಿಮಾನ ಹಾಗೂ ಅವರ ಭಾಷಾ ಸಾಧನೆಯ ಪ್ರಮುಖ ಹಂತವಾಗಿದೆ.

ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಭಕ್ತ-ಭಗವಂತರ ನಡುವೆ ಇರುವ ಅನ್ಯೋನ್ಯತೆಯನ್ನು ಸಾಧಿಸಿರುವರು. ಅಂತೆಯೇ, ಅವ್ವನವರು ತಮ್ಮ ಹಾಡುಗಳಿಗೆ ಭಕ್ತ-ಭಗವಂತರ ನಡುವೆ ಇರುವ ಸಮತಾಭಾವವನ್ನಿಲ್ಲಿ ನೀಡಿರುವುದು ಅವರ ಕೀರ್ತನೆಗಳಲ್ಲಿ ಬಹುಮುಖ್ಯವಾದುದು. 'ಮುಯ್ಯದ ಹಾಡುಗಳು' ಈ ಮುಯ್ಯದ ಪದ್ಧತಿಯು ಉತ್ತರ ಕರ್ನಾಟಕದಲ್ಲಿ ರೂಢಿಯಲ್ಲಿರುವುದು ಮುಯ್ಯದ ಪದಗಳ ಉದ್ದೇಶವೇ "ಇಂದಿರಾಪತಿ ಮಹಿಮೆಯ ಛಂದದಿ ಎಲ್ಲಾ ರಚಿಸುವೆ" 'ಮುಯ್ಯ' ಮದುವೆ ಇನ್ನಿತರ ಶುಭಸಮಾರಂಭಗಳಲ್ಲಿ ಉಡುಗೊರೆ ನೀಡುವ ಸಂಪ್ರದಾಯ. ಅವ್ವ ಈ ಪದ್ಧತಿಯನ್ನು ತಮ್ಮ ಹಾಡುಗಳ ವಿಶೇಷತೆಯಾಗಿಸಿದ್ದಾರೆ. 'ಮುಯ್ಯ-ಮುಯಿ-ಮುಯ್ಯಿ=ಮುಯ್ಯಾ ಪರಸ್ಪರ ಕೊಡುಕೊಳ್ಳುವಿಕೆ ಯಿಂದ ಮಾನವರ ಸಂಬಂಧ ಉತ್ತಮವಾಗಿಸುವುದು. ಈ ಪದಗಳಲ್ಲಿ ಮುಖ್ಯವಾಗಿ ಎರಡು ರೀತಿಯ ಭಾವಗಳನ್ನಿಲ್ಲಿ ಗಮನಿಸುತ್ತೇವೆ.

೧. ಮುಯ್ಯ ಕೊಡುವ ಹಾಡುಗಳು

೨. ಮುಯ್ಯ ಹಿಂತಿರುಗಿಸುವ ಹಾಡುಗಳು

**೧. ಮುಯ್ಯ ಕೊಡುವ ಹಾಡುಗಳು :** ಮೊಲದನೆಯದಾಗಿ ಹೆಂಗಸರ ಹಾಡುಗಳು ಮತ್ತು ಗಂಡಸರ ಹಾಡುಗಳು ಎಂದು ವಿಭಾಗಿಸಿದರೆ ಹಾಡಿನ ಭಾವಾರ್ಥಗಳು ಕೇಳುಗರಲ್ಲಿ ಬಹುಕಾಲ ಉಳಿದುಬಿಡುವ ಸ್ವಾರಸ್ಯಕರ ಸಂಗತಿಗಳನ್ನು ಒಳಗೊಂಡಿವೆ. ಈ ಹಾಡಿನಲ್ಲಿ ಪ್ರತಿಯೊಂದು ಪಾತ್ರಗಳ ಗುಣಾವಗುಣ ವಿಶೇಷತೆಯನ್ನು ಹೇಳುವಾಗ ಅವ್ವ ತನ್ನ ಕಾವ್ಯ ನಿರ್ಮಿತಿಯನ್ನು ದಾಟಿ ತಾವೇ ಆ ಪಾತ್ರವಾಗಿರುವ ಭಾವತನ್ಮಯತೆ ಕಾಣಿಸುವುದು. ಅವ್ವನವರ ಈ ತಾದ್ಯಾತ್ಮ ರಚನೆಯಿಂದಲೇ ಇಂದಿಗೂ ಈ ಹಾಡುಗಳು ಜನಮಾನಸದಲ್ಲಿ ರೂಢಿಯಲ್ಲಿರುವವು. ಮುಯ್ಯದ ಮೊದಲರ್ಧ ಭಾಗ ಎಂದರೆ ಮುಯ್ಯ ಕೊಡುವ ಸಂದರ್ಭಗಳಲ್ಲಿ ಮಹಾಭಾರತದ ಪ್ರಾರಂಭದ ಹಂತಗಳ ಚಿತ್ರಣವು, ಮುಯ್ಯ ಹಿಂತಿರುಗಿಸುವ ಹಾಡುಗಳಲ್ಲಿ ಮಹಾಭಾರತದ ಕೊನೆಯ ಹಂತ, ಎಂದರೆ ಪಾಂಡವರ ರಾಜ್ಯಾಡಳಿತದ ಸಮಯವನ್ನು ಚಿತ್ರಿಸಿದ್ದಾರೆ.

ಅವ್ವ, ತಮ್ಮ ಕಾವ್ಯಕ್ಕೆ ಮಹಾಭಾರತದ ಬಹುತೇಕ ಸಂಗತಿಗಳನ್ನು ಆಯ್ದುಕೊಂಡು ಪ್ರತಿಯೊಂದು ಸನ್ನಿವೇಶದ ಅನಾವರಣದೊಡನೆ ಸ್ತ್ರೀಪರ ಕಾಳಜಿಯನ್ನು, ದ್ವೈತ ಸಿದ್ಧಾಂತದ ಮಹತ್ವವನ್ನು ಅತ್ಯಂತ ಸರಳ ಸುಂದರವಾಗಿ ಮೂಡಿಸಿದ್ದಾಳೆ. "ಹರಿದಾಸರು ತಮ್ಮ ಅನುಭವದ ಮೂಲಕ ಶಬ್ದಾರ್ಥಗಳ ಸ್ವರೂಪವನ್ನು ಕಂಡುಕೊಂಡು, ಆದಾಗ್ಯೂ ತಾವು ರಚಿಸಿರುವ ಶಬ್ದ ಮತ್ತು ಅರ್ಥಗಳು ಕಾಲಾನು ಸಂದರ್ಭದಲ್ಲಿ ಬೇರೆ ಬೇರೆ ಅರ್ಥ ಸಾಧ್ಯತೆಗಳನ್ನು ಪಡೆಯಬಲ್ಲವು ಎಂಬುದನ್ನು ದಾಸರು ಕೀರ್ತನೆಗಳ ರಚನೆಯಿಂದ ಶೋಧನೆಯ ಪಥವನ್ನು ತಿಳಿಸಿದ್ದಾರೆ. ಬಹುಶಃ ಈ ಬಗೆಯ ಆಲೋಚನೆಯು ಸಮೂಹಪ್ರಜ್ಞೆಯಿಂದ ಮೂಡಿರಬೇಕು."[೪]

ಹರಿದಾಸರ ಈ ಚಿಂತನೆಯ ದಾರಿಯಲ್ಲಿ ಸಾಗಿದವರು, ಮಹಿಳಾ ಹರಿದಾಸರು. ಅವ್ವನವರು ಸಹ ಕನ್ನಡ ಮತ್ತು ಸಂಸ್ಕೃತ ಉಭಯ ಭಾಷೆಗಳನ್ನು ಚೆನ್ನಾಗಿ ಬಲ್ಲವರು. ಅವರ ಸಂಸ್ಕೃತ ಪಾಂಡಿತ್ಯವು ಕನ್ನಡ ಭಾಷೆಯಲ್ಲಿ ಮೂಡುವುದೇ ಅವ್ವನವರ ಕನ್ನಡ ಪ್ರೀತಿಯಾಗಿರುವುದು. ಅವ್ವನವರಿಗೆ ಕಾವ್ಯ ಕಟ್ಟುವ ಕಾರ್ಯಕ್ಕೆ ಜನಪದರ ಹಾಡು, ಕುಣಿತ, ಹಸೆಗಳು ಕೋಲಾಟಗಳು ಪ್ರೇರಣೆ ನೀಡಿರಬೇಕು.

ಅವರ ಕೀರ್ತನೆಗಳ ಭಾಷೆಯು ಬಹುಲಾಲಿತ್ಯದಿಂದ ಕೂಡಿವೆ. ಇದು ಅವರ ಸಂದರ್ಭೋಚಿತ ವಾದ ವಸ್ತು ಆಯ್ಕೆಯೂ ಕಾರಣವಾಗಿರಬೇಕು. ಮುಯ್ಯದ ಹಾಡುಗಳ ಸಂದರ್ಭವು ಕಾವ್ಯಕ್ಕೆ ಹೇಳಿ ಮಾಡಿಸಿದ ಪ್ರಕಾರವೆನಿಸುತ್ತದೆ. ಮುಯ್ಯ ಒಯ್ಯುವ ಸಂದರ್ಭಕ್ಕೆ ಅವ್ವ ನೀಡುವ ಸಂಬಂಧಗಳ ಅನಾವರಣವು ಬಿಗಿಯಾಗಿದ್ದು, ಬೀಗರ ನಡುವಿನ ಪಂದ್ಯವೇರ್ಪಡಿಸುವುದು. ಈ ಮುಯ್ಯದ ಸಂದರ್ಭವು ದೀರ್ಘವಾದ ಕಥನ ಕಾವ್ಯಗಳಾಗಿ ರಚಿತವಾಗಿವೆ. ಇಡೀ ಒಂದು ಸಂಗತಿಯನ್ನು ಉತ್ಕೃಷ್ಟವಾದ ಹಾಗೂ ವರ್ಣನೆಗಳಿಂದ, ಸರಸ ಸಂಭ್ರಮದ ಪದಲಾಲಿತ್ಯದಿಂದ ರಚಿಸಲಾಗಿದೆ.

ಅವ್ವ ಬಳಸುವ ವ್ಯಂಗ್ಯ, ವಿಡಂಬನೆಗಳಲ್ಲಿ ಕೃಷ್ಣಾರ್ಜುನರ ನಡುವಿನ ಸಂವಾದವು ಸುಂದರವಾಗಿ ಮೂಡಿಬಂದಿವೆ. ದೇಸಿರಚನೆಯೆಂಬುದು ದಾಸ ಸಾಹಿತ್ಯಕ್ಕೆ ವಚನ ಸಾಹಿತ್ಯದಿಂದ ದಕ್ಕಿರುವುದೆಂದಾದರೂ, ಈ ದೇಸಿಯತೆಯ ರೂಪಕ್ಕೆ ತಮ್ಮ ಸಾಹಿತ್ಯವನ್ನು ಗೇಯಗುಣ ಗದ್ಯದಿಂದ ದೂರಸರಿದೂ, ಲಯಬದ್ಧವಾದ ರಾಗತಾಳಗಳಲ್ಲಿ ವಸ್ತು ವಿಷಯವನ್ನು ಹಿಡಿದಿಡುವಲ್ಲಿ ದಾಸ ಸಾಹಿತ್ಯ ಸಮರ್ಥವಾಗಿರುವುದು. "ಹರಿದಾಸರು ಬಳಸುವ ಭಾಷೆಯಲ್ಲಿ ರಚಿಸಿದ ಕೀರ್ತನೆಗಳು ಸಾಮಾಜಿಕ ವೈಚಾರಿಕ ಸಾಧನೆಗೆ ಕಾರಣವಾದವು. ಎಲ್ಲಿ ಭಾಷೆ ಬದಲಾಗುತ್ತದೋ ಅಲ್ಲಿ ಹೊಸ ಚಿಂತನಾಕ್ರಮವೊಂದು ರೂಪುತಳೆಯುತ್ತದೆ. ಸಾಮಾಜಿಕವಾಗಿ ಹೊಸ ಸಂವೇದನೆಗಳನ್ನು ರೂಢಿಸುವ, ಮುನ್ನ ಭಾಷೆ ತಾನೇ ಒಂದು ಬಗೆಯ ಸಂಸ್ಕರಣಕ್ಕೆ ಒಳಗಾಗುತ್ತದೆ. ಜನಭಾಷೆಯಾಗುವತ್ತ ಸಾಗಿದ ಹರಿದಾಸ ಸಾಹಿತ್ಯವು ಐತಿಹಾಸಿಕ ದಾಖಲೆಗಳಾಗುವುದು ಹೊಸ ಸಮಾಜ ನಿರೀಕ್ಷಣೆಯಲ್ಲಿ, ಹೊಸ ಸಂವೇದನೆಗಳು ಭಾಷೆಯ ಮೂಲಕ ರೂಪು ಪಡೆಯುತ್ತವೆ."[೫] ಹೀಗೆ ತಮ್ಮ ಅಭಿವ್ಯಕ್ತ ಕ್ರಮವನ್ನು ರೂಢಿಸಿಕೊಂಡು ಸಾಗಿದ ಹರಿದಾಸರ ಸಾಹಿತ್ಯ ರಚನೆಗೆ ಸಮಾಜವೇ ಮೂಲ ನೆಲೆಯಾಯಿತು. ಅವ್ವನವರ ಕೀರ್ತನೆಗಳು ಪೌರಾಣಿಕ ಹಿನ್ನೆಲೆಯುಳ್ಳವು. ಮುಯ್ಯಾದ ಹಾಡುಗಳು ಶುಭಪ್ರಸಂಗಗಳ ಸೊಗಸಾದ ಮೋಜಿನ ಮರ್ಯಾದೆಯ ಸನ್ನಿವೇಶಗಳಾಗಿವೆ. ಆದರೆ ಅವರು ಬಳಸಿರುವ 'ನಿಂದಾಸ್ತುತಿ' ತಂತ್ರದ ಹಾಡುಗಳು ಎರಡು ಪಕ್ಷಗಳು ಪರಸ್ಪರ ರೇಗಾಡಿ, ಹಂಗಿಸುವ ದೃಶ್ಯಗಳ ಸಾಲು ಸಾಲು ವರ್ಣನೆಗಳಾಗಿವೆ. ಇಲ್ಲಿ ಅವ್ವನವರು ದ್ವಾರಕಾಪುರದ ವರ್ಣನೆ, ಅತ್ತಿಗೆ-ನಾದಿನಿ, ಭಾವ-ಮೈದುನರ ನಡುವೆ ನಡೆಯುವ ವಾಗ್ವಾದಗಳು ಪ್ರಶ್ನೋತ್ತರದಲ್ಲೂ, ತೆಗಳುವ, ಅಣಕವಾಡುವ ಅನಂತರ ಸಮಾಧಾನಿಸುವ ಪರಿಯು ಸರಸಮಯವಾಗಿವೆ.

''ಅವ್ವನವರ ರಚನೆಗಳಾಗಿ, ಮುಯ್ಯದ ಹಾಡುಗಳೊಂದಿಗೆ, ಜೋಗುಳದ ಪದ, 'ಸೇತುಬಂಧನ' ಎಂಬ ದೀರ್ಘಕವನವು ಇವರದ್ದೆಂದು ಹೇಳಿದರೂ ಅದಕ್ಕೆ ಅಂಕಿತವಿಲ್ಲದಿರುವುದು ಬಹುಶಃ ಅಂಕಿತ ದೊರೆಯುವ ಮುಂಚಿತವಾಗಿ ರಚಿಸಿದ ಮೊದಲನೆ ಕೀರ್ತನೆಯೂ ಆಗಿರಬಹುದು.''[೬]

'ಸೇತು ಬಂಧನ'ದ ಹಾಡು ರಾಮಭಕ್ತ ಹನುಮಂತನಿಗೂ, ಕೃಷ್ಣಭಕ್ತ ಅರ್ಜುನರ ನಡುವಿನ ವಾಕ್ಸಮರ. ರಾಮ ಹೆಚ್ಚು, ಕೃಷ್ಣ ಹೆಚ್ಚು ಎಂಬ ಹೆಗ್ಗಳಿಕೆಯಲ್ಲಿ ಸಂವಾದವು ಆರಂಭವಾಗುವುದು. ಇಬ್ಬರ ನಡುವೆ ನಂಬಿಕೆ, ಭಕ್ತಿಗಳ ಪರೀಕ್ಷೆಗಳು ನಡೆಯುತ್ತವೆ. ಕೊನೆಗೆ ಹನುಮಂತನ ಭಕ್ತಿಯ ಸಾಮರ್ಥ್ಯವಾಗಿ ಅರ್ಜುನ ಕಟ್ಟಿದ ಶರಸೇತು 'ಕಡಿಲ್' ಎಂದು ಕುಸಿದುಬೀಳುತ್ತದೆ. ಅರ್ಜುನನು ಭಕ್ತಿಯಿಂದ ಕೃಷ್ಣನನ್ನು ನೆನೆದಾಗ, ಕೃಷ್ಣನು ತನ್ನ ಚಕ್ರವನ್ನು ಸೇತುವೆಯ ನಡುವೆ ಇರಿಸುತ್ತಾನೆ. ಆಗ ಸೇತುವೆ ಮೇಲೆ ಹನುಮಂತ ಧುಮುಕಿದರೂ ಮುರಿಯದೆ, ಅರ್ಜುನನು ಪಂಥದಲ್ಲಿ ಮೇಲುಗೈ ಸಾಧಿಸುತ್ತಾನೆ. ಪಂಥದಲ್ಲಿ ಕೊಟ್ಟ ಮಾತಿನಂತೆ ಹನುಮಂತನು ಅರ್ಜುನನ ರಥದ ಧ್ವಜದಲ್ಲಿ ನೆಲೆಸಿದನು ಎಂಬುದಾಗಿ ಮುಕ್ತಾಯವಾಗುತ್ತದೆ. ಇಲ್ಲಿ ಅವ್ವ ಶಿಷ್ಟ ಕನ್ನಡ ಭಾಷೆಯಲ್ಲಿಯೇ ರಚನೆ ಮಾಡಿದ್ದರೂ, ಅವರ ಭಾಷೆಗೆ ಲಲಿತವಾದ ಜನಪದರ ನುಡಿಗಟ್ಟು ಸೇರಿ ಹಾಡಿನ ಲಯ ಮನನೀಯವಾಗಿರುತ್ತದೆ. ಮುಯ್ಯ ಒಯ್ಯುವ ಕೀರ್ತನೆಗಳಲ್ಲಿ ದ್ವಾರಕಾಪುರ ವರ್ಣನೆ, ದೂತೆಹಾಡು, ಬನದವರ್ಣನೆ, ಪಾಂಡವರ ಶಕ್ತಿಪ್ರದರ್ಶನ, ಕೃಷ್ಣ ಭಕ್ತಿಪ್ರದರ್ಶನ ಎಂಬುದಾಗಿವೆ. ಗಂಡಸರ, ಹೆಂಗಸರ ಹಾಡುಗಳಾಗಿಯೂ ವಿಭಾಗಿಸಿಕೊಂಡರೆ, ಉಡುಗೊರೆಯು ಅತ್ಯಂತ ಸಮಯೋಚಿತ ಸಂದರ್ಭಗಳಲ್ಲಿ ವ್ಯಕ್ತವಾಗಿದೆ.

ಹಸ್ತಿನಾವತಿಯ ರಾಜವೈಭೋಗದಲ್ಲಿ ಸುಭದ್ರೆ ಪತಿಗೃಹದಲ್ಲಿದ್ದು, ತನ್ನ ತವರಿನ, ಅಣ್ಣಂದಿರನ್ನು ಅಲ್ಲಿನ ತವರಿನ ಭಾಗ್ಯವನ್ನು ನೆನಸಿಕೊಳ್ಳುತ್ತಾಳೆ. ತಿಂಗಳೊಂದರಲ್ಲಿ ಬಂದು ಕಾಣುತ್ತೇನೆಂಬ ಅಣ್ಣನ ವಾಗ್ದಾನವನ್ನು ನೆನೆದು, ಅಣ್ಣನ ನೆನಪು ತೀವ್ರವಾಗಿ, ತಮ್ಮ ವೈಭವದಲ್ಲಿ ಅಣ್ಣಂದಿರು ತನ್ನನ್ನು ಮರೆತಿದ್ದಾರೆ. ಮುಯ್ಯ ಒಯ್ದುದಾದರೂ ನೋಡಿ ಬರಬೇಕು ಎಂದು ಪತಿಯನ್ನು ಒಪ್ಪಿಸುವಳು. ಸುಭದ್ರ ದ್ರೌಪದಿಯರು ದ್ವಾರಕೆಗೆ ಹೊರಡುವ ಸಡಗರದ ಚಿತ್ರಣವನ್ನಿಲ್ಲಿ ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ. ಹೀಗೆ ಮುಯ್ಯ ಪಡೆದ ರುಕ್ಮಿಣಿ-ಸತ್ಯಭಾಮೆಯರು ಮುಯ್ಯ ಹಿಂತಿರುಗಿಸಲು ಅಯೋಧ್ಯೆಗೆ ಬರುವ ಸಂಭ್ರಮವಿದೆ. ಸರಿರಾತ್ರಿಯಲ್ಲಿ ಮುಯ್ಯ ಸ್ವೀಕರಿಸಲು ಬಂದ ತಂಗಿಯರನ್ನು ಸ್ವಾಗತಿಸಲಿಲ್ಲ ಎಂಬ ಅಣಕದ ನುಡಿಗಳಿಗೆ ರುಕ್ಮಿಣಿ-ಭಾಮೆಯರ ಮಾತಿನಲ್ಲಿ ಪ್ರತಿವಾದವು ಸೃಷ್ಟಿಯಾಗುವುದು. ಮಹಾಭಾರತದ ಪಾಂಡವರ ವನವಾಸ, ದ್ರೌಪದಿ ಪ್ರಕರಣ, ಅರ್ಜುನನ ಪ್ರತಾಪಗಳ ಅವಹೇಳನ, ಪಾಂಡವರ ಗುಣಾವಗುಣಗಳ ತೆಗಳಿಕೆ ಇತ್ಯಾದಿ. ಒಂದೊಂದು ರಸಮಯ ಸನ್ನಿವೇಶಗಳಾಗಿ ಸಿರಿ ಸಂಭ್ರಮ ಅವಕಾಶಗಳಾಗಿ ಪ್ರಕಟಗೊಂಡಿವೆ.

ಈ ಹಾಡುಗಳಲ್ಲಿ ಅತ್ತಿಗೆ-ನಾದಿನಿಯರ ಸರಸ ಸಂಭಾಷಣೆಯಿದೆ. ಕೃಷ್ಣ-ಪಾಂಡವರ ನಡುವೆ ನಡೆಯುವ ಸಂಭಾಷಣೆಗಳಲ್ಲಿ ಕೃಷ್ಣಭಕ್ತಿಯು ಪ್ರಮುಖವಾಗಿದೆ. ಭಕ್ತರ ಪ್ರೀತಿಯನ್ನು ಮನೋಜ್ಞವಾದ ವರ್ಣನೆಗಳಿಂದ ಅಲಂಕರಿಸಿದ್ದಾರೆ. ಅವ್ವ, ರಚಿಸಿರುವ ಹಾಡುಗಳಿಗೆ ಭಕ್ತಿಯೇ ಮೂಲ ಕಾರಣವಾದರು, ಹಾಡುಗಳ ರೂಪಕ್ಕೆ ಒದಗಿರುವ ಸಂಗತಿಗಳು ಭಾವ ಪ್ರಧಾನವಾದವು. ಭಕ್ತಿಯು ಭಾವಪೂರ್ಣವಾಗಿ ವ್ಯಕ್ತಗೊಳ್ಳಲು, ನಿರ್ಮಿಸಿರುವ ಪರಿಸರವು ಸಾಮಾಜಿಕವಾಗಿ ಗುರುತಿಸುವ ಕೌಟುಂಬಿಕ ಪಾತ್ರಗಳಲ್ಲಿಯೇ ಎನ್ನುವುದು ವಿಶೇಷವಾಗಿದೆ. ''ಸ್ತುತಿಪರವಾದ ಗೀತೆಗಳು 'ಕೀರ್ತನೆ'ಗಳೆಂಬ ಹೆಸರು ಪಡೆದಿವೆ. ಹರಿದಾಸರ ರಚನೆಗಳು ಸುಳಾದಿ, ಉಗಾಭೋಗಾ, ಬಿಡಿಹಾಡುಗಳು' ಎಂಬುದಾಗಿ ವಿಂಗಡಿಸಲಾಗಿದೆ.[೭] ಕೀರ್ತನೆಗಳು ಕ್ರಮವಾಗಿ ಪಲ್ಲವಿ, ಅನುಪಲ್ಲವಿ ಮತ್ತು ನುಡಿ ಇದು ಕೀರ್ತನೆಯ ಬಾಹ್ಯ ಸ್ವರೂಪ. ಅವ್ವನವರ ಹಾಡುಗಳ ಅಂತಃಸ್ವರೂಪವು ಭಕ್ತಿಪ್ರಧಾನವಾದುದು. ಅವರ ಹಾಡುಗಳಿಗೆ ನಿತ್ಯ ನಡೆಯುವ ಆಚರಣೆಗಳು ಅನುಭವಪೂರಿತವಾಗಿವೆ. ಹೆಂಗಸರ ಹಾಡುಗಳಲ್ಲಿ ತವರಿನ ಬಯಕೆಯಿಂದ ಉತ್ಸುಕವಾಗಿ ದ್ವಾರಕೆಗೆ ಸಾಗಿಬರುವ ಚಿತ್ರಣವು ಅತ್ಯಂತ ಸುಂದರವಾಗಿ ಮೂಡಿಬಂದಿದೆ.

ಹರಿದಾಸರ ಹಾಡಿನ ಲಯ ಅವರ ಅನುಭವಕ್ಕೆ ತಕ್ಕಂತೆ ರಚನೆಯಾಗಿವೆ. ಕೇಳುಗರನ್ನು ಕುಣಿಸುವ, ಹಾಡಿಸುವ ಶಕ್ತಿ ಆ ಹಾಡಿನದಾಗಿರುತ್ತದೆ. ಭಾವಪರವಶತೆಯನ್ನು ಸಾಧಿಸುವ ಕೀರ್ತನೆಗಳಲ್ಲಿ ಆಯಾಯ ಸಂದರ್ಭ ಸಂಗತಿಗಳನ್ನು ವಿವರಿಸುವ, ತನ್ಮಯ ಗುಣವನ್ನು ಕಾಣಬಹುದಾಗಿದೆ. ''ಪ್ರತಿಯೊಬ್ಬ ದಾಸರು ತಮ್ಮ ಅನುಭವಜನ್ಯವಾದ ಸತ್ವದಿಂದ ಕೀರ್ತನೆ ರಚಿಸಿದ್ದಾರೆ. ಹಾಡಿನಲ್ಲಿ ಪಲ್ಲವಿಯಾಗಿ ರೂಪು ಪಡೆಯುತ್ತದೆ. ಮುಂದೆ ಅನುಪಲ್ಲವಿ ಅನಂತರದ ನುಡಿ ಹಾಡನ್ನು ಘೋಷಿಸುತ್ತದೆ. ನುಡಿಗಳು ಹೆಚ್ಚಾಗಿ ನಾಲ್ಕು ಸಾಲಿನವು. ಸಾಮಾನ್ಯವಾಗಿ ಮೂರು, ಐದು, ಏಳು ಹೀಗೆ ಬೆಸಸಂಖ್ಯೆಯಲ್ಲಿರುತ್ತವೆ. ಹತ್ತಾರು ನುಡಿಗಳುಳ್ಳ ರಚನೆಯ ಕೀರ್ತನೆಗಳಿದ್ದರೂ ಬಹುತೇಕ ಮೂರರಿಂದ ಐದು ನುಡಿಗಳ ಕೀರ್ತನೆಗಳೇ ಹೆಚ್ಚು''[೮] ಅವ್ವ, ತಮ್ಮ ಕೀರ್ತನೆಯಲ್ಲೂ ಪಲ್ಲವಿ, ಅನುಪಲ್ಲವಿಗಳನ್ನು ಬಳಸಿದ್ದಾರೆ, ಅನಂತರದಲ್ಲಿ ನಾಲ್ಕು ಸಾಲಿನ ನುಡಿಗಳು ಪಲ್ಲವಿಯ ಸಾಲುಗಳನ್ನು ಸಮರ್ಥಿಸುತ್ತವೆ. ಮೂರು, ಐದು, ಏಳು ಹೀಗೆ ಬೆಸ ಸಂಖ್ಯೆಯಲ್ಲೂ ಕೆಲವೊಮ್ಮೆ ಸರಿಸಂಖ್ಯೆಯಲ್ಲೂ ಅಂದರೆ ಆರು ನುಡಿಗಳಲ್ಲೂ ಕೀರ್ತನೆಗಳು ರಚನೆಯಾಗಿರುವುದು ಕಾಣಬಹುದು.

ಅವ್ವ, ತಮ್ಮ ಹಾಡುಗಳಿಗೆ ಪೌರಾಣಿಕ, ಮಹಾಭಾರತ, ರಾಮಾಯಣ, ಭಾಗವತದ ಅನೇಕ ಸಂಗತಿಗಳನ್ನು ಮಹಿಳಾ ವಲಯದ ಅನುಭವಗಳೊಂದಿಗೆ ಸಮೀಕರಿಸಿ ವಿಷಯ ಒದಗಿಸಿಕೊಂಡಿದ್ದಾಳೆ. ದೀರ್ಘ ಕಥನ ಕಾವ್ಯಗಳು ಅವ್ವನವರ ಮುಖ್ಯ ಹಾಡಿನ ರೂಪಗಳಾಗಿವೆ. ಮುಖ್ಯ ಒಬ್ಬು ಕೀರ್ತನೆಗಳಲ್ಲಿ ದ್ವಾರಕಾಪುರದ ವರ್ಣನೆ ವಿಶೇಷವಾಗಿರುವುದು. ''ಈ ಹಾಡುಗಳಲ್ಲಿ ಹೆಂಗಸರ ಹಾಡು,

ಗಂಡಸರ ಹಾಡು, ದೂತೆ ಹಾಡು, ವನದ ವರ್ಣನೆ, ಪಾಂಡವರ-ಯಾದವರ ನಡುವಿನ ಅನ್ಯೋನ್ಯತೆಗೆ ಉಡುಗೊರೆಗಳು ಪದಗಳಲ್ಲಿ ರಚಿತಗೊಂಡಿವೆ. ಕೃಷ್ಣ ರುಕ್ಮಿಣಿಯರು ಯಾದವರ ಸಹಿತಾಗಿ ಬಂದು ಉಡುಗೊರೆ ಮರಳಿಸಿದ್ದನ್ನು ಭಕ್ತಿಯಿಂದ ನೆನೆಯುವುದೇ ಮುಯ್ಯ ಹಿಂತಿರುಗಿಸುವ ಹಾಡಿನ ತಿರುಳು. ಇದಕ್ಕೆ ಗುರುಗಳ ಆಶೀರ್ವಾದ ಬೇಡುವರು."[6] ಅವ್ವ, ತಮ್ಮ ಹಾಡುಗಳಿಗೆ ಗುರುಗಳ ಆಶೀರ್ವಾದ ಪಡೆಯುವರು. ಅನಂತರ ಸುಭದ್ರೆ ದ್ರೌಪದಿಯರು ಉತ್ತಮ ಶುಭ ತಿಥಿ, ಮೂಹೂರ್ತ, ನಕ್ಷತ್ರಗಳನ್ನು ಕೇಳಿ ತಿಳಿಯುವುರು. ಪ್ರಯಾಣದ ವೇಳೆ ಶುಭಶಕುನಗಳನ್ನು ಹಾಡಿನಲ್ಲಿ ಉದ್ಧರಿಸುವುದು. ಅವರ ಸಂಪ್ರದಾಯಶೀಲ ಮನಸ್ಸು ಧಾರ್ಮಿಕ ಕಾರ್ಯಗಳಲ್ಲಿ ಮಿಡಿಯುವ ಸದಾಶಯವು ಆ ಹಾಡುಗಳಲ್ಲಿ ಜೀವನ್ಮುಖಿಯಾಗಿವೆ.

ಸಂಭ್ರಮ ಸಡಗರಗಳಿಂದ ತಯಾರಾಗಿರುವ ದ್ರೌಪದಿ, ಸುಭದ್ರೆಯರ ಮುಯ್ಯ ತರುವ ಹಾಡುಗಳು ನಿರೀಕ್ಷೆಯ ಭಾವದಲ್ಲಿ ರಚನೆಯಾಗಿವೆ. ಮುಯ್ಯಾ ಒಯ್ಯುರ ಒಮ್ಮೆ ನೋಡಿರಬರಬೇಕೆಂಬ ತವಕ ತಲ್ಲಣಗಳನ್ನು ತಮ್ಮ ರಚನೆಯಲ್ಲಿ ವಿಸ್ತಾರವಾದ ವರ್ಣನೆಗಳಿಂದ ಬಳಸಿಕೊಂಡಿದ್ದಾರೆ. ಅವ್ವ, ತನ್ನ ಕಾಲದಲ್ಲಿ ನಡೆಯುತ್ತಿದ್ದ ವಿಶೇಷ ಸಮಾರಂಭಗಳ ಮಹತ್ವವನ್ನು ಸಾರುವ ದನಿಯಾಗಿದ್ದಾಳೆ.

ಅಷ್ಟಲ್ಲದೇ, ಸಾಮಾಜಿಕವಾಗಿ ಬಹುಚರ್ಚಿತವಾಗಿದ್ದ ದ್ವೈತಸಿದ್ಧಾಂತ ಮತ್ತು ಅದ್ವೈತ ಸಿದ್ಧಾಂತಗಳ ಧೋರಣೆಗಳನ್ನು ಸುಲಭ, ಸರಳ ರೀತಿ, ನೀತಿಗಳಲ್ಲಿ ವಿವರಿಸಿದ್ದಾರೆ. ಅವ್ವ ನೀಡುವ ಸಾದೃಶ್ಯ ಚಿತ್ರಣವೊಂದು ಹೀಗಿದೆ.

''ಅದ್ವೈತವಾದಿ ನಿನ್ನ ಬುದ್ಧಿ ಕೌಶಲ್ಯ
ನೋಡಿ ವಿದ್ವಾಂಸರೆಲ್ಲ ನಗುತಾರೆ
ಹಿಟ್ಟು ಬೂದಿಯೊಂದೆ ರೊಟ್ಟಿ ಮುಚ್ಚಳವೊಂದೆ!
ಕಟ್ಟಿಗೆಯೊಂದೆ ಕಬ್ಬೊಂದೆ ಎಂದರೆ!
ದಿಟ್ಟ ರಾಮೇಶ ನಗುತಾನೆ ರನ್ನದ ಕೋಲ''
ದ್ವೈತ ಸಿದ್ಧಾಂತದ ಹಿರಿಮೆಯನ್ನು ಅವ್ವ ಹಾಡುವುದು ಹೀಗೆ,
''ಮತದೊಳು ಮಧ್ವಮತ ವ್ರತದೊಳು ಹರಿದಿನ ಕಥೆಯೊಳು ಭಾಗವತವೆನ್ನಿ ರಾಮೇಶನ
ಅತಿಭಕ್ತರ ನಡುವೆ ಪಥವೆನ್ನಿ ಕೋಲ''

ಮಧ್ವಮತದ ಹಿನ್ನಲೆಯಲ್ಲಿ ಭಾಗವತ, ರಾಮಾಯಣ, ಮಹಾಭಾರತದ ಪ್ರಸಂಗಗಳನ್ನು ವರ್ಣಿಸುವರು. ಇಲ್ಲಿ ಅವ್ವ ಹನುಮ, ಭೀಮ, ಮಧ್ವರು, ಆಚಾರ್ಯತ್ರಯರ ಮಹಿಮೆಗಳನ್ನು ಬಹು ಸೊಗಸಾಗಿ ವಿಸ್ತರಿಸಿದ್ದಾರೆ. ಅವರ ರಚನೆಯ ಈ ಹಾಡುಗಳು ಇಂದಿಗೂ ಹೆಂಗಳೆಯರ ಹಾಡುಗಳಲ್ಲಿರುವುದು ವಿಶೇಷವಾಗಿದೆ.

‘‘ಹನುಮ ಭೀಮ ಮಧ್ವಮುನಿರಾಯ
ಮಾರುತ ಘನಮಹಿಮ ಭಕ್ತವಿರಕ್ತ
ನಿನ್ನ ಪಾದ ವನಜವ ಮೊದಲೆ ಬಲಗೊಂಬೆ’’

ಎಂದು ಹಾಡುವ ಅವ್ವ, ಮಾಧ್ವಮತದ ಸರಳ, ನೀತಿಗಳನ್ನು ಜನಸಾಮಾನ್ಯರಿಗೂ ಅರ್ಥವಾಗುವಂತೆ ಹಾಡಿದ್ದಾಳೆ. ದ್ವೈತಮತ ಪ್ರತಿಪಾದನೆಗೆ ಅವರು ಬಳಸುವ ದ್ವಾರಕೆಯ ವರ್ಣನೆ ಶೃಂಗಾರಪೂರ್ಣವಾಗಿದೆ. ಸಕಲ ಸಂಪತ್ತು ಕೂಡಿರುವ ತಾಣವೆಂದೂ ಅಲ್ಲಿನ ವನಗಳ ವರ್ಣನೆ, ಕೃಷ್ಣ ಸಭೆಯ ಅಲಂಕಾರಗಳೂ ಕೇಳುಗರ ಕಣ್ಮನಗಳನ್ನು ತೃಪ್ತಿಪಡಿಸುವ, ಇಂಪಾದ, ಸೊಗಸುಹಾಡುಗಳೆನಿಸುತ್ತವೆ.

ಅವರು ತಮ್ಮ ಮನೆಯ ಪರಿಸರದಲ್ಲಿ ನಡೆಯುತ್ತಿದ್ದ ಪಂಡಿತ್ತೋತ್ತಮರ ವಾದ-ವಿವಾದಗಳನ್ನೆಲ್ಲ ಆಸಕ್ತಿಯಿಂದ ಗಮನಿಸುತ್ತಿದ್ದರು. ದ್ವೈತ-ಅದ್ವೈತ ಸಿದ್ಧಾಂತಗಳ ತರತಮಭಾವನೆಗಳ ವಿವೇಚನೆ ಅವರಿಗೆ ಸಾಧ್ಯವಾಗಿತ್ತು. ಹೀಗೆ ಈ ಎಲ್ಲ ವಿಚಾರಗಳನ್ನು ಕೇಳಿ ತಿಳಿಯುವ, ತಿಳಿದು ವಿಶ್ಲೇಷಿಸುವ ಕ್ರಮ ಅವರಿಗೆ ದೊರೆತ ಶಾಸ್ತ್ರ ಶಿಕ್ಷಣದ ಪ್ರಭಾವವಾಗಿದೆ. ಆದರೆ ಅವ್ವ, ತಿಳಿದುಕೊಂಡಷ್ಟಕ್ಕೆ ವಿಚಾರವನ್ನು ಬಿಡದೆ, ತನ್ನ ಅನುಭವ ಹಾಗೂ ಅಧ್ಯಾತ್ಮ ತಿಳಿವಳಿಕೆಗಳಿಂದ ಹಾಡುಕಟ್ಟಿದ್ದಾಳೆ. ಎಲ್ಲ ಕಾಲಕ್ಕೂ ಈ ಕೀರ್ತನೆಗಳ ಮೂಲಕ ಭಕ್ತಿ ಎಂಬುದು ವೈರಾಗ್ಯದ ನಡೆಯಷ್ಟೇ ಅಲ್ಲ, ಅಲ್ಲೊಂದು ಬದುಕನ್ನು ನಿರಂತರವಾಗಿಸುವ ಜೀವನ ಪ್ರೀತಿಯನ್ನು ಪರಿಚಯಿಸುತ್ತಾರೆ. ಭಕ್ತಿ, ಬದುಕಿನ ಅವಿಭಾಜ್ಯ ಅಂಗವಾಗಿ ಮೈತಳೆದಿರುವುದು. ಅವ್ವನವರ ಹಾಡುಗಳಲ್ಲಿ ತುಂಬಿಬರುವ ಸಡಗರ ಸಂಭ್ರಮಗಳು ತುಂಬು ಬದುಕಿನ ಭರವಸೆಯಾಗಿರುವುದು. ಅವರ ಭಾವ ಪ್ರಪಂಚ ಭಕ್ತಿಯಿಂದ ಸ್ಫೂರ್ತಿ ಪಡೆದಿರುವುದು. ಅವ್ವನವರ ಕೀರ್ತನೆಗಳನ್ನು ಮುಯ್ಯದ ಹಾಡುಗಳು, ದೀರ್ಘ ಕಥನಗಳು ಒಳಗೊಂಡಿದ್ದರೆ, ಕೋಲು ಪದಗಳು ಕೂಡ ಅವರ ವಿಶೇಷ ರಚನೆಯೆನಿಸುತ್ತವೆ. ಈ ಕೋಲು ಪದಗಳು ಜನಪದರ ಪ್ರಭಾವದಿಂದ ರಚನೆಯಾಗಿರಬೇಕು.

‘‘ಮುಯ್ಯಾ’’-ಮುಯಿ-ಮುಯ್ಯ-ಮುಯ್ಯಾ-ಉಡುಗೊರೆ, ಕಾಣಿಕೆ ಎಂದರ್ಥ. ‘ಮುಯ್ಯಾ’ ಎಂದರೆ ‘‘ಮುಯಿ, ಮುಯ್ಯೆ ಎಂಬುದು, ಪರಸ್ಪರ ಕೊಡು-ಕೊಳ್ಳುವಿಕೆ, ಇದು ಸಾಮಾನ್ಯವಾಗಿ ಮದುವೆ ಸಂದರ್ಭಗಳಲ್ಲಿ ರೂಢಿಯಲ್ಲಿರುವುದು. ಉಡುಗೊರೆಗೆ ಪ್ರತಿ ಉಡುಗೊರೆ ನೀಡುವ ವಾಡಿಕೆಯು ಜನ ಸಾಮಾನ್ಯರಲ್ಲಿದೆ. ಇಂತಹ ಉಡುಗೊರೆಯು ಮದುಮಕ್ಕಳಿಗೆ ನೀಡುವ ಸಂಪ್ರದಾಯವು ಪರಂಪರೆಯಿಂದಲೂ ನಡೆದು ಬಂದಿರುವುದು. ಈ ಉಡುಗೊರೆಗಳು ಬಹುತೇಕ ಅವರವರ ಮನೆಗಳಿಂದ ತರುವುದು, ‘ಮದುವೆಯ ಮುಯ್ಯಾ ಸೀರೆ’’ ಎಂಬುದು ಕಿಟಲ್‌ರವರ ಅಭಿಪ್ರಾಯವಾಗಿದೆ. ಅವ್ವನವರ ‘ಕೋಲು ಪದ’ಗಳು ಕೂಡ ವಿಶೇಷವಾದವುಗಳು. ಕೋಲುಪದ ಏಕಕಾಲಕ್ಕೆ ಕುಣಿತ ಮತ್ತು ಆಟಗಳಿಂದ ಕೂಡಿದ ವಿಶಿಷ್ಟ ಜನಪದ ಗೀತ ಪ್ರಕಾರ ಕೋಲು ಪದವಾಗಿದೆ.

ಮುಯ್ಯದ ಹಾಡುಗಳು ಇಡಿಯಾಗಿ ಒಂದು ಕಥನ ಪ್ರಸಂಗವನ್ನು ಹಾಡುವಂತೆ ರಚನೆಯಾಗಿವೆ. ಕೋಲಹಾಡುಗಳು ಸಂದರ್ಭಾನುಸಾರಿಯಾಗಿ ಬರುವ ಸಂಭ್ರಮದಲ್ಲಿ ತನ್ಮಯರಾಗಿ ಹಾಡುವ, ಭಗವಂತನ ನಾಮಸ್ಮರಣೆ ಭಜಿಸುವ ಹಾಡುಗಳಾಗಿವೆ. ಈ ಹಾಡುಗಳಲ್ಲಿ ನಾವು ವಿಭಾಗಕ್ರಮವನ್ನು ಅನುಸರಿಸುವುದು ಕೀರ್ತನೆಗಳಲ್ಲಿ ವಿಂಗಡಣೆಯನ್ನು ಅರ್ಥಮಾಡಿಕೊಳ್ಳಲು ಸಹಕಾರಿಯಾಗಿರುವುದು.

ಅವ್ವನವರ ಮುಯ್ಯದ ಹಾಡುಗಳಲ್ಲಿ ಪ್ರಮುಖವಾಗಿ ಎರಡು ಭಾಗಗಳಿವೆ.

೧. ಮುಯ್ಯ ಒಯ್ದು ಹಾಡುಗಳು - ಭಾಗ - ೧

೨. ಮುಯ್ಯ ತಿರುಗಿಸಿದ ಹಾಡುಗಳು - ಭಾಗ - ೨

ಭಾಗ-೧ರಲ್ಲಿ ದೇವಾನುದೇವತೆಗಳಲ್ಲಿ, ಗುರುಹಿರಿಯರಲ್ಲಿ ಬೇಡುವ ''ಆಶೀರ್ವಾದವು 'ಬಲಗೊಂಡು' ಹಾಡುಗಳಲ್ಲಿ, ವನದ ಹಾಡುಗಳು, ದ್ವಾರಕಪುರದ ವರ್ಣನೆ, ದೂತೆ ಹಾಡು, ಹೆಂಗಸರ ಹಾಡುಗಳು - ಗಂಡಸರ ಹಾಡುಗಳು ಉಡುಗೊರೆ ನೀಡುವ ಹಾಡುಗಳು ಎಂಬುದಾಗಿ ವಿಭಾಗಿಸಬಹುದಾಗಿದೆ. ಈ ಹಾಡುಗಳಲ್ಲಿ ಮಹಾಭಾರತದ ಮೊದಲಭಾಗ ಪ್ರಸ್ತಾಪವಾಗಿರುವುದು ವಿಶೇಷ. ಭಾಗ-೨ರಲ್ಲಿ ರಚಿಸಲಾದ ಹಾಡುಗಳು ಕೂಡ ದೇವಾನುದೇವತೆಗಳ ಆಶೀರ್ವಾದ, ಗುರುಹಿರಿಯರ ಬಲ, ಗ್ರಹತಾರೆಗಳ, ಶುಭಮುಹೂರ್ತ, ನಕ್ಷತ್ರಗಳನ್ನು ಕೇಳಿ ಪಡೆಯುವ 'ಬಲಗೊಂಡ ಹಾಡು'ಗಳು ವನದ ಹಾಡು, ದೂತೆ ಹಾಡುಗಳು, ದ್ರೌಪತಿ ರಮಣರ ಹಾಡುಗಳು, ಗಂಡಸರ ಹಾಡುಗಳು, ರಾಸಕ್ರೀಡೆ ಹಾಡುಗಳು, ಹೆಂಗಸರ ವಾದದಹಾಡುಗಳು, ಉಡುಗೊರೆಹಾಡುಗಳು. ಹೀಗೆ, ಅವ್ವನವರ ಮುಯ್ಯದ ಹಾಡುಗಳ ವೈಶಿಷ್ಟ್ಯವನ್ನು ತಿಳಿಯಲು ಸಹಾಯಕವಾಗಿವೆ.

''೨'' ಕೋಲಹಾಡುಗಳು : ಈ ಹಾಡುಗಳು ಲಯಬದ್ಧವಾದ ಕುಣಿತ ಮತ್ತು ಹಾಡುಗಳಿಂದ ಕೂಡಿದ ವಿಶಿಷ್ಟ ಪ್ರಕಾರ. ಇದು ಬಹುಶಃ ಜನಪದರ ಕೋಲಾಟದ ಪದಗಳಿಂದ ಪ್ರಭಾವಿತಗೊಂಡು ರಚನೆಯಾಗಿರಬಹುದು.

ಕೋಲ = ಆಭರಣ, ಮುಖವಾಡ, ಸಿಂಗಾರ ಬಟ್ಟೆಬರೆ, ಸಾರ್ವಜನಿಕ ಮೆರವಣಿಗೆ(ಮದುವೆ, ಹುಟ್ಟುಹಬ್ಬಗಳಲ್ಲಿ ಬಳಕೆಯಲ್ಲಿರುವವು)

ಹಾಡು = ಕೋಲಾಟವಾಡುತ್ತಾ ಹಾಡಿ-ಕುಣಿದು ಭಗವನ್ನಾಮಸ್ಮರಣೆಗೈಯ್ಯುವುದು

ಕೋಲ = ಕ್+ಉ+ಲ = ಕೋಲ ಎಂಬುದು ಗೂಢಾರ್ಥಗಳನ್ನುಳ್ಳದ್ದು. ಪ್ರಾಯಶಃ ಈ ಪ್ರತಿ ಅಕ್ಷರವು ಭಗವಂತನ ಒಂದೊಂದು ಹೆಸರನ್ನು ಸೂಚಿಸುತ್ತಿರಬಹುದೇನೊ, ಅದಕ್ಕಾಗಿಯೇ ಈ ಕುಣಿತದ ಆಟವು ಭಗವನ್ನಾಮಸ್ಮರಣೆಯ ಭಜನೆಗಳನ್ನು ಹೋಲುತ್ತಿರುವುದು. ಉತ್ತರ ಕರ್ನಾಟಕದ ಭಾಗದಲ್ಲಿ ಇಂದಿಗೂ 'ಗುಜ್ಜರು' ಅಥವಾ 'ಗೂರ್ಜರು' ಎಂಬ ಸಮುದಾಯದಲ್ಲಿ ಈ ಕೋಲಹಾಡು ಆಚರಣೆಯಲ್ಲಿ

ರುವುವು. ಈ ಗೂರ್ಜರ ಹಾಡಿನ ಪ್ರಭಾವವೇ ಕೋಲ ಹಾಡುಗಳ ಮೂಲ ರೂಪವಾಗಿವೆ. ಇವರು ಪೂರ್ವದಲ್ಲಿ ೧೧ನೇ ಶತಮಾನದಲ್ಲಿ ವೈಷ್ಣವ ಬ್ರಾಹ್ಮಣರಾಗಿದ್ದು, ಅನಂತರ ಜೈನರಾಗಿದ್ದು, ನಂತರದಲ್ಲಿ ವಚನ ಚಳುವಳಿಯ ಪ್ರಭಾವದಿಂದ ವೀರಶೈವರಾಗಿ ಬದಲಾಗುವ ಈ ಸಮುದಾಯ ಪ್ರ/ ಬ್ರಜ್ ಭಾಷೆಯ ಆಡುಮಾತನ್ನು ಒಳಗೊಂಡಿದೆ. ಬ್ರಜ್ ಭಾಷೆಯಲ್ಲಿ ಹಾಡುವ ಹಾಡುಗಳೇ ಕೃಷ್ಣನ ಕುರಿತಾದ ಹಾಡುಗಳಾಗಿವೆ. ಅವರ ಕೋಲ ಹಾಡುಗಳ ಪ್ರಭಾವವು ಜನಸಾಮಾನ್ಯರನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ಕೀರ್ತನಕಾರ್ತಿಯ 'ಕೋಲುಪದ'ಗಳಿಗೆ ಆಧಾರವಾಗಿರಬೇಕು. ಇಲ್ಲಿ 'ಕೋಲಹಾಡು' ಅವ್ವನವರ ವರ್ಣನೆಯ ಸಂಭ್ರಮವನ್ನು ಉತ್ಕೃಷ್ಟವಾಗಿಸಿರುವುದು.

## ಅವ್ವನವರ ಮುಯ್ಯ ಪದಗಳ ಉದ್ದೇಶ

"ಇಂದಿರಾಪತಿಯ ಮಹಿಮೆಯ ಛಂದದಿ ಎಲ್ಲಾ ರಚಿಸುವೆ"(ಪದ "೨೦") ಅವರ ಹಾಡುಗಳಲ್ಲಿ ಛಂದೋರೂಪವನ್ನು ಹೀಗೆ ಗುರುತಿಸಬಹುದು. ಕೀರ್ತನೆಗಳಲ್ಲಿ ಬಹುತೇಖ ಆದಿಪ್ರಾಸವನ್ನು ನಿಯತವಾಗಿ ಹೊಂದಿರುವುವು. ಅವ್ವನವರ ಕೀರ್ತನೆಗಳು ತ್ರಿಪದಿಯ ಲಕ್ಷಣವನ್ನು ಸ್ಪಷ್ಟವಾಗಿ ಹೊಂದಿವೆ. ಅವರ ಹಾಡುಗಳಲ್ಲಿ ಲಯವು ಅನಿಯಮಿತವಾಗಿಯೂ ಒಮ್ಮೊಮ್ಮೆ ಬಳಕೆಯಾಗಿದ್ದು, ಒಂದೊಂದು ಹಾಡುಗಳೂ ಸ್ಪಷ್ಟವಾಗಿ ಅಂಶಗಣಾತ್ಮಕವಾಗಿರುವುವು.

'ಸಾಂಗತ್ಯ' ಪದವೊಂದು " U U| U U U U|U U U U|U U|U U

ನೆನೆಯಕ್ಕಿ ನೆನೆಗಡಲೆ ಗೊನೆ ಬಾಳೆಯ ಹಣ್ಣು

ಘನವಾದ ಚಿಗಳಿ ತಂಬಿಟ್ಟು

ಘನವಾದ ಚಿಗಳಿ ತಂಬಿಟ್ಟು ತಂದಿದ್ದೆ

ಗಣಪತಿ ಮತಿಯಾ ಕರುಣಿಸು

ಈ ಪದ್ಯವು ಸಾಂಗತ್ಯ ರೂಪದಲ್ಲಿದ್ದು ಕನ್ನಡದ ಮುಖ್ಯವಾದ ಹಾಡಿನ ವೃತ್ತವೇ ಸರಿ. ಇದರಲ್ಲಿ ಒಟ್ಟು ನಾಲ್ಕು ಪಾದಗಳಿವೆ. ಇಲ್ಲಿ ಒಂದು ಮತ್ತು ಮೂರನೆ ಪಾದಗಳಲ್ಲಿ ನಾಲ್ಕು ವಿಷ್ಣು ಗಣಗಳು, ಎರಡು ಮತ್ತು ನಾಲ್ಕನೇ ಪಾದಗಳಲ್ಲಿ ಎರಡು ವಿಷ್ಣುಗಣಗಳು, ಒಂದು ಬ್ರಹ್ಮಗಣವು ಬರುವುದು. ಒಮ್ಮೊಮ್ಮೆ ಸಾಂಗತ್ಯದಲ್ಲಿ ಹೊಂದಿಕೆಯಾಗದಿದ್ದರೆ, ವಿಷ್ಣುಗಣದ ಬದಲಾಗಿ ಬ್ರಹ್ಮಗಣ ಬಂದಿದ್ದರೆ ಅದನ್ನು 'ವಿಷ್ಣುಗಣ' ಎಂದೇ ಗಮನಿಸಬೇಕಾಗುತ್ತದೆ. ಅವ್ವನವರ ಹಾಡುಗಳಲ್ಲಿ ಆದಿಪ್ರಾಸವು ನಿಯತವಾಗಿರುವುದು.

"ಅತ್ತಿಗೆ ನಿನ್ನ ಮೈಗೆ ಹತ್ಯಾವ ರುದ್ರಾಕ್ಷಿ

ನೆತ್ತಿಯ ಮ್ಯಾಲ ಜಡದಾವ

ನೆತ್ತಿಯ ಮ್ಯಾಲ ಜಡದಾವ ಅತ್ತಿಗೆ ನಿನ್ನ

ಹತ್ತಿಲಿದ್ದವರು ನಗುತಾರೆ ಕೇಳನಾರಿ"
"ಗಿಳಿಯಂಥ ಕಳೆಯ ಹೊಳೆಯು ಬಲ್ಲದೆ ಗುಬ್ಬಿ
ತಿಳಿದು ನಿನ್ನ ಗರುವು ಬಿಡುಕಂಡ್ಯಾ ದ್ರೌಪತಿ
ತಿಳಿದು ನಿನ್ನ ಗರುವು ಬಿಡು ಕಂಡ್ಯಾ ಐವರೂ
ಕೈ ಹೊಯಿದು ನಗರೇನ ದ್ರೌಪತಿ"

ಅವ್ವನವರ ರಚನೆಗಳು ದ್ವಿಪದಿ, ತ್ರಿಪದಿಗಳಲ್ಲಿಯೂ ಹಾಡುಗಳು ಮುಖ್ಯವಾಗಿವೆ. ಗೇಯ ಗುಣಕ್ಕಾಗಿ, ಪದಲಾಲಿತ್ಯವನ್ನು ಒಮ್ಮೆ ಹ್ರಸ್ವವಾಗಿಯೂ, ಮತ್ತೊಮ್ಮೆ ದೀರ್ಘವಾಗಿಯೂ ಬಳಸುವುದು. ಒಟ್ಟಾರೆ ಹಾಡಿನ ಕ್ರಮವು ಅನಿಯತವಾಗಿರುವ ಪದದ ಏರಿಳಿತಗಳು ಹಾಡಿನ ಸೌಂದರ್ಯಕ್ಕೆ ಭಂಗತಂದಿಲ್ಲ.

ದ್ವಿಪದಿ : ಎಂಬುದು ಎರಡೆರಡು ಸಾಲುಗಳುಳ್ಳ ಚಿಕ್ಕದಾದ ಹಾಡಿನ ಬಂಧ. ಇಲ್ಲಿ ಪ್ರತಿ ಎರಡೆರಡು ಚರಣಗಳಿಗೆ ಪ್ರಾಸಗಳು ಬಂದು, ಹಾಡಿನಲ್ಲಿನ ಒಂದು ವಿಚಾರ ಪೂರ್ಣಗೊಳ್ಳುತ್ತದೆ. ಪ್ರತಿಪಾದದಲ್ಲೂ ನಾಲ್ಕು ವಿಷ್ಣುಗಣಗಳು ಬರುವುದು. ಕೀರ್ತನೆಗಳಲ್ಲಿ ದ್ವಿಪದಿಗಳು ಸಹಜವಾಗಿದ್ದು, ಅವ್ವ ತನ್ನ ಹಾಡುಗಳಲ್ಲಿ ಬಲಗೊಂಡ ಹಾಡುಗಳು, ಕೋಲು ಪದಗಳಲ್ಲಿಯೂ ರಚಿಸಿದ್ದಾರೆ.

ಕೋಲೆನ್ನಿ ಕೋಮಲೆಯರು ಅಮ್ಮಯ್ಯ
ಮುಯ್ಯಿ ಮೇಲೆನ್ನಿ ಮೇಲೆನ್ನಿರಿ ಅಕ್ಕಯ್ಯ
ಇಂದು ಗುರುಗಳಂಘ್ರಿಗೆರಗಿ ಅಮ್ಮಯ್ಯ
ಸುಭದ್ರೆ ತಂದ ಮುಯ್ಯಿ ರಚಿಸೆನಕ್ಕಯ್ಯ

ವಿಷ್ಣು ಎಂಬುದು ಐದು ಮಾತ್ರೆಗಳನ್ನುಳ್ಳದ್ದು, ಬ್ರಹ್ಮಗಣವು ಮೂರು ಮಾತ್ರೆಗಳ ಎರಡು ಅಂಶಗಳುಳ್ಳದ್ದು. ಒಮ್ಮೊಮ್ಮೆ ಇಲ್ಲಿ ವಿಷ್ಣುಗಣದ ಬದಲಾಗಿ ಬ್ರಹ್ಮಗಣವು ಬರಬಹುದಾಗಿರುವುದು.

ಒಟ್ಟು ನಾಲ್ಕು ಪಾದಗಳ ಕೀರ್ತನೆಯಲ್ಲಿ ಒಂದು ಮತ್ತು ಮೂರನೇ ಪಾದಗಳಲ್ಲಿ ನಾಲ್ಕು ವಿಷ್ಣು ಗಣಗಳು ಬಂದರೆ, ಎರಡು ಮತ್ತು ನಾಲ್ಕನೇ ಪಾದಗಳಲ್ಲಿ ಎರಡು ವಿಷ್ಣು ಒಂದು ಬ್ರಹ್ಮಗಣ ಬರುವುದು.

ಅಕ್ಕ ದ್ವಾಪರ ಧರ್ಮಶಕ್ಯವೆ ವರ್ಣಿಸಲು ವಿ| ವಿ| ವಿ| ವಿ|
ಲಕುಮಿ ದೇವಿಗೆ ವಶವಲ್ಲ ವಿ| ಬ್ರ| ವಿ|
ಲಕುಮಿ ದೇವಿಗೆ ವಶವಲ್ಲ ಯುಗಧರ್ಮ ವಿ| ವಿ| ವಿ| ವಿ|
ತಕ್ಕಷ್ಟು ಹೇಳಿ ರಚಿಸುವೆ ಸಖಿ
ನಿಷ್ಕಲೆ ಗುರುಗಳಿಗೆ ನಮಿಸಿ ಅಮ್ಮಯ್ಯ

ದ್ರೌಪದಿ ಕೊಟ್ಟ ಮುಯ್ಯವ ರಚಿಸೆ ಅಕ್ಕಯ್ಯ
ಅರ್ಚಿಸಿ ಗುರುಗಳ ಪಾದ ಅಮ್ಮಯ್ಯ
ರುಕ್ಮಿಣಿ ನಕ್ಕು ನುಡಿದ ನುಡಿಯ ರಚಿಪನಕ್ಕಯ್ಯ
ನಮ್ಮ ಗುರುಗಳಂಘ್ರಿಗೆರಗಿ ಅಮ್ಮಯ್ಯ
ಪಾರ್ಥ ರಮಿಯರಸನ ಮಹಿಮೆ ರಚಿಪೆನಕ್ಕಯ್ಯ

ಹೀಗೆ ಗಣವಿಂಗಡಣೆಯು ಮೊದಲು ಪಲ್ಲವಿ ಬಂದು ಅನಂತರದಲ್ಲಿ ದ್ವಿಪದಿಯ ಐದು ನುಡಿಗಳು ಕಾಣಬರುತ್ತವೆ. ಇಲ್ಲಿ ಐದು ಮಾತ್ರೆಯ ಮೂರು ವಿಷ್ಣು ಗಣ ಬಂದು ಒಂದು ಕೊನೆಯಲ್ಲಿ ಗುರು ಬರುತ್ತದೆ.

**ತ್ರಿಪದಿ :** ಎಂಬುದು ಮೂರು ಸಾಲುಗಳುಳ್ಳ ಪದ್ಯ ಅಥವಾ ಹಾಡು. ಕನ್ನಡ ಸಾಹಿತ್ಯದಲ್ಲಿ ತ್ರಿಪದಿಯು ವಿಶಿಷ್ಟ ಪ್ರಕಾರವಾಗಿ ಬಳಕೆಯಾಗಿರುವುದು. ಇದು ವಿಶೇಷವಾಗಿ ಜನಪದರ ಹಾಡಿನಿಂದ ಪ್ರೇರಣೆಯಾಗಿ ರೂಢಿಯಲ್ಲಿದ್ದು, ಹಾಡಲು ಅತ್ಯಂತ ಸುಲಭ, ಸರಳ, ರೂಪದಲ್ಲಿವೆ. ಬಹುಸಂಗ್ರಹಿತವಾದ ವಿಷಯಗಳನ್ನು ಒಳಗೊಂಡ ಪುಟ್ಟ ಸಾಲುಗಳಲ್ಲಿ ಹಿಡಿದಿರುವ ಕ್ರಮವು ಕನ್ನಡ ಸಾಹಿತ್ಯದ ವಿಶೇಷತೆಯಾಗಿರುವುದು. ''ಚಿಕ್ಕ ಪದಗಳಲ್ಲಿ ಹಿರಿದಾದ ಅರ್ಥವನ್ನು ಹೇಳುವ ವಚನಗಳು ಮೂರು ಸಾಲುಗಳುಳ್ಳ ಸಹಜವಾದ ಭಾವಕ್ಕೆ ತಕ್ಕ ಬಂಧವಾಗಿದೆ. ಬಿಡಿ ಬಿಡಿ ವಿಚಾರಗಳನ್ನು ವ್ಯಕ್ತಪಡಿಸುವ ಈ ತ್ರಿಪದಿಯು ತುಂಬ ಸಹಕಾರಿಯಾದ ಬಂಧವಾಗಿದೆ.''[೧೧] ಈ ಹಾಡಿಗೆ ಸುಲಭವಾಗಿ ರಾಗ, ತಾಳಗಳು ಹೊಂದಿಕೆಯಾಗುವಂತಿದ್ದು ಗೇಯಗುಣದ ಕೀರ್ತನೆಗಳು ಇಲ್ಲಿ ಸುಮಧುರವಾಗಿವೆ.

ಕೈವಲ್ಯಪತಿಯ ದಯದಿಂದ ಸಲುಹಿದ
ವೈಭವದೊಳಗೆ ಮರೆತಾನ ಮುಯ್ಯ ಒಯ್ದರೆ
ನೋಡಿ ಬರಬೇಕ

ಐದು ಮಾತ್ರೆಗಳ ಗಣ ವಿಂಗಡಣೆಯು, ಒಮ್ಮೊಮ್ಮೆ ನಾಲ್ಕುಮಾತ್ರೆಯ ಗಣಗಳೂ ಬರುವುದುಂಟು. ಇಲ್ಲಿ ಅವ್ವ ಪ್ರಾಸಕ್ಕೆ ಹೆಚ್ಚು ಮಾನ್ಯತೆ ನೀಡಿರುವರು. ಅದರೊಂದಿಗೆ ವ್ಯಕ್ತಪಡಿಸುವ ಭಾವ, ಹಾಡುವ ಲಯಕ್ಕೆ ಒಗ್ಗಿಸಿಕೊಳ್ಳುವಾಗ ಛಂದಸ್ಸಿನ ನಿಯಮಗಳು ಅನಿಯಮಿತವಾಗಿ ಬಂದಿವೆ.

**ಚೌಪದಿ :** ಇದು ಕೂಡ ಹಾಡಿನ ಲಯಕ್ಕೆ ಹೊಂದುವ ಬಂಧವಾಗಿತ್ತು. ನಾಲ್ಕು ಸಾಲುಗಳಲ್ಲಿ ಬರುವ ಈ ಹಾಡಿನ ರೂಪವನ್ನು ಅವ್ವ ಎಲ್ಲೋ ಒಮ್ಮೊಮ್ಮೆ ಮಾತ್ರ ಬಳಸಿಕೊಂಡಿದ್ದಾರೆ.

ಚೌಪದಿಯ ಗಣ ವಿಂಗಡಣೆಯು ಸಹ ಅನಿಯಮಿತವಾಗಿ ಬಂದಿದ್ದು, ಅವ್ವನವರ ಹಾಡುಗಳು ಶುದ್ಧ ಅಚ್ಚಗನ್ನಡದ ಅಂಶಲಯ ಮುಟ್ಟುಗಳಲ್ಲಿ ರಚನೆಯಾಗಿದೆ.

೧. ಜರಿಯ ಸುತನು ತಾನು
ಜಗಳಕೆ ಬಾಹೋನೆಂದು
ಕರೆಸಿದ ವಿಶ್ವಕರ್ಮನ ದ್ವಾರಕಾವಿಪುರ
ನಿರ್ಮಿಸೆಂದ ಕ್ಷಣದಾಗೆ ಜಲದೊಳು

ಮೂರು ಮಾತ್ರೆಗಳ ಗಣವಿಂಗಡೆಯು ಸರಳವಾಗಿ ಹಾಡಿಸಿಕೊಂಡಿದ್ದು ಆರು ಮತ್ತು ಹತ್ತನೇ ಸ್ಥಳದಲ್ಲಿ ಬ್ರಹ್ಮಗಣ ಬಂದಿರುವುದು ಚೌಪದಿಯ ಗಣಜೋಡಣೆಯು ಸಹ ಅನಿಯಮಿತ ಬಂಧವಾಗೂ, ನಿಯತವಾಗಿಯೂ ಸಾಗುವ ಲಯವಾಗಿದೆ. ಇವು ಕೂಡ ಅಂಶಲಯ ಮಟ್ಟುಗಳಲ್ಲಿ ರಚನೆಯಾಗಿರುವುದನ್ನು ಗಮನಿಸಬಹುದು.

''ಗಣವಿಂಗಡಣೆ, ಪ್ರಾಸ ಜೋಡಣೆಗಳು ವೈವಿಧ್ಯಮಯವಾಗಿದ್ದು, ಜನಪದರ ಗೇಯಕ್ಕೆ ಹತ್ತಿರವಿರುವ ದೇಸಿ ಛಂದಸ್ಸಿನ ಗುಣಗಳಿವೆ. ಕರ್ನಾಟಕದ ಸಂಗೀತದ ಸಂದರ್ಭಕ್ಕೆ ಸಂಸ್ಕೃತದ ಕೊಡುಗೆಯೆಷ್ಟು ಎಂಬುದು ವಿಚಾರ ಮಂಥನದ ವಿಷಯವಾಗಿದೆ. ಉತ್ತರದ ಹಾಡುಗಳ ರಚನೆಗೂ, ದಕ್ಷಿಣ ಪ್ರದೇಶದ ಹಾಡುಗಳ ರಚನೆಗೂ ಅಲ್ಲಲ್ಲಿನ ಪ್ರಾದೇಶಿಕ ಜನಪದರ ದೇಸಿಮಟ್ಟುಗಳ ರೂಪವಿರುವುದು ತಿಳಿಯುತ್ತದೆ.

ಕರ್ನಾಟಕ ಸಂಗೀತಕ್ಕೆ ಹರಿದಾಸರ ಕೊಡುಗೆಯು ಸುಸ್ಪಷ್ಟವಾಗಿದ್ದು, ಅವರು ಬಳಸುವ ತಾಳ ಪ್ರೌಢಿಮೆಗಳು ಕರ್ನಾಟಕ ಸಂಗೀತದಲ್ಲಿ ಹೆಗ್ಗಳಿಕೆಯಾಗಿರುವುದು ದೇಸಿ ಛಂದಸ್ಸಿನ ಮಟ್ಟುಗಳಲ್ಲಿ ಹಾಡಿಸಿಕೊಳ್ಳುವ ದಾಸರ ಹಾಡುಗಳು ಗೇಯತೆಗೆ ಹೆಚ್ಚಿನ ಮಹತ್ವ ನೀಡಿರುವುದು. ತ್ರಿಪದಿ, ಸಾಂಗತ್ಯಗಳನ್ನು ಜಿಟ್ಟರೆ, ಬಳಿಕ ಅಕ್ಕರ, ಗೀತಿಕೆ, ಮದನವತಿ ಮುಂತಾದ ಮಟ್ಟುಗಳು ಕಾಣಬರುತ್ತವೆ. ಇದಕ್ಕೆ ಅಂಶಗಣಾತ್ಮಕ ಪದ್ಧತಿಯ ಬಳಕೆ ಹೆಚ್ಚು ಸಹಕಾರಿಯಾದುದು.''[೨] ಅವ್ವ ತಮ್ಮ ಹಾಡುಗಳಿಗೆ ಜನಪದ ಆಡುಮಾತಿನ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಅಂದಿನ ಆಚರಣೆಗಳಿಗೆ, ತಮ್ಮದೇ ಆದ ವಿಶಿಷ್ಟ ವರ್ಣನೆಗಳಲ್ಲಿ ಉಕ್ತಿವೈಚಿತ್ರ್ಯಗಳನ್ನು ಶಬ್ದಾರ್ಥಗಳ ಸಹಿತ ಹಾಡುವ ಪದಲಾಲಿತ್ಯವು ವಿಶೇಷವಾಗಿದೆ. ಹೆಂಗಳೆಯರ ಆಸಕ್ತಿಯನ್ನು ಹಿಡಿದಿಡುವಲ್ಲಿ, ಗೇಯಗುಣವಿರುವ ಸಂಪ್ರದಾಯವಿಲ್ಲಿ ಸಾಂಸ್ಕೃತಿಕ ಮಹತ್ವವಾಗಿ ರೂಪುಪಡೆದಿರುವುದು. ಮಾನವ ಸಂಬಂಧಗಳಲ್ಲಿ ಮಹಿಳೆಯ ಕೌಟುಂಬಿಕ ಪಾತ್ರ ಹಿರಿದಾದುದು. ಅವಳು ಬದುಕನ್ನು ಪರಿಭಾವಿಸುವ ರೀತಿಯು ಅವ್ವನವರ ಕಾವ್ಯದ ಮೂಲ ಸತ್ವವಾಗಿರುವುದು. ಇಲ್ಲಿ ಅನಾವರಣಗೊಳ್ಳುವ ಆಭರಣಗಳ ಸಾಲಂಕೃತ ವಿವರಣೆಯು ಸಾಮಾಜಿಕ, ಅಂಶಗಳ ಸಾಂಸ್ಕೃತಿಕ ವಿವರಣೆಯಾಗಿರುವುದು ಒಂದೊಂದು ಆಭರಣದ ವಿಶೇಷತೆ, ಅವುಗಳ ನಾಜೂಕಿನ ಕುಸುರಿಕಲೆಗಳು ವಿಶೇಷವಾಗಿವೆ. ವಜ್ರ, ಮಾಣಿಕ್ಯ, ಮುತ್ತು, ರತ್ನ, ಪಚ್ಚೆ, ಹವಳಗಳ ಜೋಡಣೆ ಮುಂತಾದವುಗಳ ಹದವಾದ ಜೋಡಣೆಯು ಅವರ ಸೌಂದರ್ಯ ಪ್ರಜ್ಞೆಯನ್ನು ತಿಳಿಸುತ್ತವೆ.

''ಸೌಂದರ್ಯವು ಹೆಣ್ಣಿಗೆ ಮೀಸಲು, ಅವಳ ಸೌಂದರ್ಯವನ್ನಿಲ್ಲಿ ವರ್ಣಿಸುವಾಗ ಉಪಮಾತೀತವಾಗಿದ್ದಾರೆ.'' ಜಾಣೆ, ಕಲ್ಯಾಣಿ, ಪನ್ನಂಗವೇಣಿ, ಸುಂದರವಾಣಿ, ಲೋಕಸುಂದರಿ, ಚಂದ್ರವದನೆ, ಚಂಚಲಾಲಾಕ್ಷಿ, ನಳಿನಮುಖಿ, ಮಂದಗಮನೆ, ಚಾರುವದನೆ, ಜಘನ್ನಳೆ, ಅಂಬುಜಮುಖಿ ''ಹೀಗೆ ಮುಂತಾಗಿ ವರ್ಣಿಸುವ ಲತಾಂಗಿಯರು ತಂದ ಮುಯ್ಯ ಇಂದ್ರ, ಚಂದ್ರ, ನಾಗಲೋಕದಲ್ಲೂ ಕಾಣಲಾರೆವು ಎಂದು ಹಾಡುವಲ್ಲಿ ಅಪರೂಪದ ಪದಪುಂಜ, ನಾಣ್ಣುಡಿಗಳು ಪ್ರತಿಮಾ, ರೂಪಕಲಾಂಕಾರಗಳು ವಿಶೇಷವಾಗಿವೆ.''[೧೩] ಆಭರಣಗಳು ಕಾವ್ಯಕ್ಕೆ ಸ್ಪೂರ್ತಿಯಾಗಿರುವುವು. ಅವ್ವ ಬಳಸಿರುವ ವಸ್ತುವಿಗೆ ತಕ್ಕದಾದ ಅಲಂಕಾರಗಳು ಯಥೋಚಿತವಾದ ವರ್ಣನೆಯಲ್ಲಿ ಅವರ ಭಾವಪ್ರಪಂಚವು ನವರಸಗಳ ಮೇಳೈಕೆಯಾಗಿರುವುದು. ಶ್ರೀಮಂತ ಆಭರಣಗಳ ಕುಸುರಿ ಕಲೆಯ ವಿವರಣೆಯು ಅವ್ವನವರಲ್ಲಿ ಸ್ತ್ರೀತ್ವಕ್ಕೆ ಕಳೆತಂದಿರುವುದು. ಆಕೆಯ ಕೀರ್ತನೆಗಳ ಆಂತರ್ಯ ಭಕ್ತಿಯಾಗಿದ್ದರೂ, ಅಂದಿನ ಕೌಟುಂಬಿಕ ಬದುಕಿನ ಅನಾವರಣವೆನಿಸುವುದು. ಅದು ಅತ್ತಿಗೆ-ನಾದಿನಿಯರಲ್ಲಿ ನಡೆಯುವ ಹಾಸ್ಯ, ವ್ಯಂಗ್ಯೋಕ್ತಿಗಳು, ಹುಸಿ ಕಲಹಗಳು, ಭಾವ-ಬೀಗರಲ್ಲಿ ಉಂಟು ಮಾಡುವ ಭೇದಗಳ ಮೂಲಕ ಇಡಿಯಾಗಿ ಒಂದು ಪ್ರಸಂಗವನ್ನು ವಿವರಿಸಿರುವುದು. ಅವ್ವನವರ ಕಾವ್ಯ ಸಮರ್ಥತೆಯಾಗಿದೆ.

ಅವ್ವನವರ ಭಾವ ಪ್ರಪಂಚದ ಶ್ರೀಮಂತಿಕೆಯ ಕುರುಹಾಗಿ ಅವರ ವರ್ಣಿತ ಆಭರಣಗಳ ಸರಣಿಯು ಹೀಗಿವೆ.

''ನೀಲಮಾಣಿಕ ಬಿಗಿದ ಮೇಲಾದ ಮನೆಗಳೂ, ಬಟ್ಟ ಮುತ್ತಿನ ತೋರಣ ಕಟ್ಟಿದ ಮನೆಯೊಳು...''

''ಗೊಂಚಲ ಮುತ್ತು ಅಲವುತ, ವಜ್ರಮಾಣಿಕ್ಯ ಬಿಗಿದು ಸಜ್ಜಾದ ಅಭರಣವು ಗೆಜ್ಜೆಸರಪಳಿಯು ಗಿಲುಕೆಂದು,....''

''ಕಡಗ ಸರಪಳಿಯು ದಿವ್ಯ ಬೆಡಗಿನಾಭರಣ, ಮುಕುಟ ಕಡಿಗಂಟಿ ಮುತ್ತುಗಳ ಕಿರುಗಜ್ಜೆರುಳಿಯ ಸುರಿಸುತ...''

'ಇಟ್ಟರು ದಿವ್ಯ ಮುಕುಟ ಮುತ್ತಿನ ಹಾರ ಗಟ್ಟಿಕಂಕಣ...

'ಪಚ್ಚ ಮಾಣಿಕ ಬಿಗಿದ ಹೆಚ್ಚಿನ ಸರಗಳು...''

'ಪಂಚಜನಾಭಗೆ ವಂಕಿಬಾಪುರಿ ಇಟ್ಟು..... ಕಂಕಣಕಡಗ ಮೊದಲಾಗಿ ರಂಗಗೆ ಅಲಂಕಾರ ಮಾಡಿ ಕೆಲದೆಯರು'

'ಪಂಚ ಬೆರಳಿಗೆ ತಕ್ಕ ಮಿಂಚು ಮುದ್ರೆಗಳಿಟ್ಟು, ಪಂಚರತ್ನದಲಿ ರಚಿಸಿದ ವಡ್ಯಾಣ..... ಕೆಂಚೆಯರು ಇಟ್ಟು ನಡುವಿಗೆ'

'ರಂಗವಲ್ಲಿ ಹಾಕಿದ ಶೃಂಗಾರದ ಮನೆಯೊಳು...ಬಂಗಾರದ ಮಣಿಯ ಹರಿವಾಣ'

'ಜಾತಿ ಮಾಣಿಕದ ಸಮೆ ತಂದಿಟ್ಟು ಜ್ಯೋತಿಗಳ ಹಚ್ಚಿ ಎಡಬಲ...'

'ದ್ವಾರಪಾಲಕಗೆ ಉಚಿತವ ಹೇಳಿ, ಹೊನ್ನುಂಗುರ ಆತನಿಗೆ ನೀಡಿ'

'ಚೆಂದದ ಮನೆ ಮುಂದೆ ಮುತ್ತಿನ ಹಂದರ ಹಾಕೆಂದು ಕುಂದಣ ರತ್ನ ರಚಿಸೆಂದ'

'ನೀಲಮೇಘಶ್ಯಾಮ, ಮುತ್ತಿನ ಮಹಲು ರಚಿಸೆಂದ ಮ್ಯಾಲೆ ಮಾಣಿಕವರಚಿಸೆಂದ'

'ಮದಗಜನಯ್ಯನು ಮುತ್ತಿನ ಸದನ ವಿಸ್ತರಿಸೆಂದ ಮ್ಯಾಲೆ ಹದಿನದಿರತ್ನ ರಚಿಸೆಂದ'

'ಮುದದಿ ದ್ರೌಪತಿಯ ರಂಗಯ್ಯ ಕರೆಯೆಂದ, ವಜ್ರದ ಸದನದಿ ತಂದು ಇಳಿಸೆಂದ'

'ತಾರಾಪತಿಗಳಂತೆ ತೋರುತಲೈವರು, ಥೋರಮುತ್ತುಗಳ ಅಲವೂತ'

'ಮುತ್ತಿನ ಮಂಚದ ಹತ್ತಿಲೆ ಸಾಲಾಗಿ, ಹಸಿರು ಪಚ್ಚಾದ ಬಗಿವ ಕುಸುರು ಸಿಂಹಾಸನ'

'ನೀಲ ಮಾಣಿಕ್ಯ ರತ್ನದಿವ್ಯ, ಮುತ್ತಿನ ತೋರಣ, ನವರತ್ನದ ಹಂದರ... ದಾಟಿ ವಜ್ರ ಮಾಣಿಕವು ಬಹಳ ಸಜ್ಜತೋರೋ..... ಅಂಗಳದಿ'

'ಪಚ್ಚದ ಪಾವಟಿಗೆ ರತ್ನ ಹಚ್ಚಿದ ಹೊಸ್ತಿಲ....'

'ಅಚ್ಚಮುತ್ತಿನ ಸರಗಳನ್ನಿಟ್ಟು, ಕೃಷ್ಣ ಮಚ್ಚರೂಪದಿ ನಿಂತ..."

'ಹೇಮ ರತ್ನದಾಭರಣಗಳನ್ನಿಟ್ಟು, ಕೃಷ್ಣ ಕೂರ್ಮರೂಪದಿ ನಿಂತ....'

'ಕಡಗ ಸರಪಳಿ ಗೆಜ್ಜೆ ನಡುವಿನೊಡ್ಯಾಣ ಪದಕ, ಕುಂಡಲದ ಮುಕುಟವೆ ಚೆಂದವು'

'ರತ್ನ ಮಾಣಿಕ ಬಗಿದ, ಬೀಸಣಿಕೆ ಹಿಡಿದು, ಅಚ್ಚ ಜರತಾರಿ ವಸ್ತ್ರ ಜತ್ತಾಗಿ ನಿರಿಹೊಯ್ದು...."

'ಹಸ್ತ ಕಡಗ ಹರಡಿ, ದೋರೆ ಹವಳ ಕಂಕಣ, ಮುತ್ತಿನ ವಾಲೆ ಮೂಗುತಿ....'

'ಹೆರಳು ಬಂಗಾರ, ಚವರಿರ್‍ಯಾಗುಟಿ, ಥೋರ ಮುತ್ತಿನಹಾರ ಪದಕ ಭಾರ ಧರಿಸುತ, ನಡುವಿಗೆ ಒಡ್ಯಾಣವಿಟ್ಟು, ಕಾಲಿಗಿಟ್ಟ ಗೆಜ್ಜೆಯು....'

'ಕಾಲಂದುಗೆ ಗೆಜ್ಜೆ, ತೋಳಲೆ ತಾಯಿತ, ಭಾರಿ ವಸ್ತ್ರಗಳಿಟ್ಟ ಲೋಲ್ಯಾಡುತ್ತಿರಹರಮ್ಮ'

'ಅಂದುಗೆ ಅರಳೆಲೆ ಬಿಂದುಲಿ ಭಾಪುಲಿ, ಮುತ್ತಿನ ಜಲ್ಲೆ ವಸ್ತ್ರಗಳಿಟ್ಟು'

'ಥೋರ ಮುತ್ತನೆ ಕಟ್ಟಿ, ಪಂಜರ ದ್ಯಾಲೆನಿಟ್ಟು...'

'ರಂಗ ಮಾಣಿಕದ, ಜಾತಿ ಮಾಣಿಕದ, ರತ್ನ ಮಾಣಿಕದ, ಪಟ್ಟೆಮುತ್ತಂಗಳ......'' ಶುದ್ಧರತ್ನ, ಕುಂದಣರತ್ನ, ಹಲವು ಮಾಣಿಕ್ಯದಿಂದ ಶೋಭೆ ತರುವ ಒಂಭತ್ತು ಬಗೆ ರತ್ನ ತುಂಬಿ ರಚಿಸಿದ ಮನೆ.'

'ದಟ್ಟಿತವಾಗಿದ್ದ ಬಿಡಿಮುತ್ತು, ಮುತ್ತಿನ ಕಂಠಿ....
ಬಟ್ಟಿಗುಂಗುರ ಉಡುದಾರ.....
ಹತ್ತು ಬಟ್ಟಿಗೆ ತಕ್ಕ ಮುತ್ತಿನ ಉಂಗುರ.....
ಘಟ್ಟಿ ಕಂಕಣ, ಕಡ್ಡಿ ಬಳೆದೋರೆ.... ಮುಂತಾದವುಗಳು

ಅವ್ವನವರ ಸೀರೆ, ವಸ್ತ್ರಗಳ ವರ್ಣನೆಯು ಉತ್ತಮವಾದ ಅಲಂಕಾರಗಳಾಗಿವೆ. ಆಭರಣಗಳ ಸಿರಿ ಸೌಂದರ್ಯದಂತೆ, ಸೀರೆ ವಸ್ತ್ರಗಳ ವರ್ಣನೆಗಳಿಗೆ, ಕೃಷ್ಣನ ರಾಸಲೀಲ ಪ್ರಸಂಗವನ್ನು ಹರಿದಾಸರು ಬಳಸಿಕೊಂಡರೆ, ಅವ್ವ, ತಮ್ಮ ಮುಯ್ಯದ ಹಾಡುಗಳಲ್ಲಿ ಸುಭದ್ರೆ, ದ್ರೌಪತಿಯರು ಅತ್ತಿಗೆಯರಿಗೆ ಒಯ್ಯುವ ಉಡುಗೊರೆಯ ರೂಪದಲ್ಲಿ ವರ್ಣಿತವಾಗಿವೆ.

''ಕರೆತಾರೆ ಕರೆತಾರೆ ಕರೆತಾರೆ ರಂಗನ ಸಖಿ
ಜರ ಜರತಾರಿ ನೀರೆ ಅವರ
ಸುರತ ರಂಗಯ್ಯನ ಗುರುತದ
ಮಡದಿಯರ ಕರೆತಾರೆ....''

ಸೃಷ್ಟಿಗಧಿಕವಾದ ಪಟ್ಟಾವಳಿ ಸೀರೆ, ಖಡ್ಡಿ ಪೈಠಣ ಸೀರೆ, ಅತ್ತಿ ಹೂವಿನ ಸೀರೆ, ಕುತನಿ ಕುಪ್ಪಸ, ಮೋತಿ ಚೂರಿನ ಸೀರೆ, ಸಾರಸನ ಸೀರೆ, ಗೊಂಬಿ ಪೈಠಣ ಸೀರೆ, ಸೇಲ್ಯಾವಳಿ ಜವಳಿ, ಬಿಳಿ ಬಣ್ಣದ ಸೀರೆ, ಸಕಲಾತಿರೆಸೀ.... ಎಂದು ಉಡುಗೊರೆ ಕೊಡುವ ಸಡಗರದಲ್ಲಿ, ಉಡುಗೊರೆ ನೀಡುವ ಜನರ ಪ್ರತ್ಯೇಕವಾದ ವರ್ಣನೆಯೊಂದಿಗೆ, ತರಹೇವಾರಿ ಸೀರೆಯ ವೈವಿಧ್ಯತೆಯನ್ನು ವಿಸ್ತಾರವಾಗಿಸಿ ಹಾಡುಗಳಲ್ಲಿ ಮಹಿಳೆಯರ ಭಾವಪ್ರಪಂಚದ ವೈವಿಧ್ಯತೆಯನ್ನು ವರ್ಣಿಸಿದ್ದಾರೆ.

ಭಾಷಾ ಸಮುದಾಯದ ಭಾಷಿಗರಲ್ಲಿ ಅವರು ಧರಿಸುವ ಉಡುಗೆ-ತೊಡುಗೆಗಳು ಮುಖ್ಯ ಅವಶ್ಯಕತೆಗಳಾಗಿವೆ. ಇವು ಒಂದು ಭಾಷಿಕ ಸಂಸ್ಕೃತಿಯ ಅನನ್ಯತೆಯನ್ನು ಗುರುತಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಯಾವುದೇ ಸಂಸ್ಕೃತಿಯು ಸಮಾಜದ ಎಲ್ಲ ಆಚಾರ-ವಿಚಾರಗಳನ್ನು ಒಳಗೊಂಡಿರುತ್ತದೆ.''[೧೪] ಅವ್ವನವರು ಈ ನೆಲೆಯಿಂದ ಸಾಮಾಜಿಕವಾಗಿ ತಮ್ಮ ವಿಚಾರಗಳುಳ್ಳ ಕೀರ್ತನೆಗಳನ್ನು ರಚಿಸಿದ್ದಾರೆ. ಯಾವುದೇ ಒಂದು ಪ್ರಮುಖವಾದ ಕಾರ್ಯಕ್ಕೆ ತೊಡಗುವ ಮೊದಲು ದಿನ, ಮೂಹೂರ್ತ, ನಕ್ಷತ್ರ ಕೇಳುವ ಪರಿಪಾಠ ಇಂದಿಗೂ ಪ್ರಚಲಿತದಲ್ಲಿದೆ.

ಅವ್ವನವರ ಕಾವ್ಯ ಈ ಶಕುನಗಳ ಪರಿಭಾವಿಸುವುದು, ಶುಭತಿಥಿಯ, ತೆಗೆಸುವುದು ಮುಂತಾದವುಗಳಿಂದ 'ಮುಯ್ಯ' ಒಯ್ಯುವುದರ ಹಿನ್ನಲೆ ಹಾಗೂ ಪರಿಣಾಮಗಳು ಬಳಿತಸ್ನು ಸೂಚಿಸುತ್ತವೆ.

ಇಲ್ಲಿ ಈ ಸಕಾರಾತ್ಮಕ ಧೋರಣೆಯ ಅಭಿವ್ಯಕ್ತಿಯಾಗಿದ್ದಾರೆ. ಆಕೆಯ ಭಕ್ತಿ, ವೈರಾಗ್ಯದೆಡೆಗೆ ಸಾಗದೆ, ಸಂಭ್ರಮವನ್ನು ಹಾಡುವ ಸಡಗರವಾಗಿದೆ. ಭಕ್ತಿಯೆಂಬುದು ಬದುಕಿನ ಹಂಬಲವುಳ್ಳ ಜೀವನ ಪ್ರೀತಿಯನ್ನು ತಿಳಿಸುತ್ತದೆ.

ಪರಸ್ಪರ ಜರೆಯುವ, ಕಟು ವ್ಯಂಗ್ಯಗಳಿಂದ ಕುಟುಕುವ, ಹಾಸ್ಯ ವಿಡಂಬನೆಗಳಿಂದ ಪರಿಹಾಸಗೈಯುವ ಎಲ್ಲವು ರೀತಿ, ನೀತಿಗಳಲ್ಲಿ ಅವ್ವನವರು ಜನಪದರ ಧಾಟಿಯಲ್ಲಿ ಆಡುಮಾತಿನ ಪದಗಳ ರಚಿಸಿದ್ದಾರೆ. ಗ್ರಾಮೀಣ ಪರಿಸರದ ಸಾದೃಶ್ಯಗಳನ್ನು ನೀಡುವ ಮೂಲಕ ಜನಸಮುದಾಯದ ನಡುವಿನ ಬದುಕನ್ನು ಬಿಚ್ಚಿಡುತ್ತಾರೆ.

''ಕೇಳೆ ಸುಭದ್ರಾ ನಿನಗೆ ಸಿಟ್ಟ್ಯಾಕ ಒದಗಿತ, ಮುಯ್ಯ ಕಾಳ ರಾತ್ರಿಲೆ ತಂದು
ಭಾಳ ಕೋಪಿಸುವ ಬಗಿ ಹೇಳೆ,.......
ಕೆಂಡದಂಥವಳ ಗುಣ ಕಂಡೇವ ಸಭೆಯೊಳು
ಚಂಡಿತನವನೆ ಬಿಡುಕೃಷ್ಣಿ'
ಸಂಜಿಲೆ ಬಂದೆವೆಂದೂ ಅಂಜಿಕೆ ನಿನಗ್ಯಾಕೊ
ಪಲ್ಯಾದ ತುದಿಯಿಂದ ಎಲ್ಲ ಪದಾರ್ಥ ಮಾಡಿ
...................
....................
ಕಬ್ಬೆಕ್ಕು, ಕೋಳಿ, ಕೋಣನ ಹೊಡೆವ ಕೌಶಲ್ಯ''

ಹೀಗೆ ಸಾಲು ಸಾಲು ಪದಗಳು ಜನಸಾಮಾನ್ಯರ ಆಡುಮಾತಿನಿಂದ ಪ್ರಭಾವಿತವಾಗಿವೆ. ಇಲ್ಲಿನ ತರತಮಭಾವದ ವರ್ಣನೆಗಳು ಕೀರ್ತನಕಾರ್ತಿಯ ದ್ವೈತ ಸಿದ್ಧಾಂತದ ಎಳೆಗಳನ್ನು ಹೋಲುತ್ತಿರುವುವು. ಅವ್ವ, ಒಂದು ಕಾಲಘಟ್ಟದ ಸಾಂಸ್ಕೃತಿಕ ವಿಚಾರಧಾರೆಗಳನ್ನು ಯಥೇಚ್ಛವಾಗಿ ಪಡೆದು ಹಾಡು ಕಟ್ಟಿದ್ದಾಳೆ. ಅವರ ಕೀರ್ತನೆಗಳ ಸ್ಫೂರ್ತಿಯು ಭಕ್ತಿಯಾಗಿದೆ., ಅಲ್ಲಿನ ನವರಸಧಾರೆಯು, ಆಡುಮಾತಿನ ಸರಸ ಶೈಲಿಯು ಜನಪದರ ಜೀವನದಲ್ಲಿ ಬೆರೆತಿರುವುದನ್ನು ಸ್ಪಷ್ಟಪಡಿಸುತ್ತವೆ.

ಈ ಸರಳ ಸುಭಗವಾದ ಶೈಲಿಯನ್ನು ಅವ್ವ, ರೂಢಿಸಿಕೊಂಡಿದ್ದಾಳೆ. ವಿದ್ವತ್ಪೂರ್ಣ ಪಂಡಿತ ಪರಿಸರದಲ್ಲಿ ಜೀವಿಸಿದ್ದರೂ, ಅವರ ಭಾಷೆಯ ಶೈಲಿಗೆ ಯಾವುದೇ ಶಿಷ್ಟಾಚಾರದ ಕಟ್ಟಳೆಗಳಿಲ್ಲದಂತೆ ಬಳಸುವರು. ಸಂಬಂಧ ಸೂಚಕ ಪದಗಳಲ್ಲಿ ನಿರಾಂತಕವಾದ ಭಾಷಾ ಚಾತುರ್ಯವನ್ನಿಲ್ಲಿ ಕಾಣಬಹುದು. ಇನ್ನು ಊಟ-ಉಡುಗೆ, ಉಪಚಾರಗಳಲ್ಲೂ ಅವರ ಹಾಡುಗಳಲ್ಲಿ ವಿಶೇಷ ವರ್ಣನೆಗಳಿವೆ. ಅವರ ರಚನೆಯ ರುಕ್ಮಿಣಿ, ಭಾಮೆಯರ ಸವತಿ ಮತ್ಸರ ಸಂವಾದವು ಕೌಟುಂಬಿಕವಾಗಿ ನಡೆಯುವ ವಿರಸ ಸಂದರ್ಭವನ್ನು ಚಿತ್ರಿಸುತ್ತದೆ. ಈ ವಿರಸದಲ್ಲೂ ಅವ್ವ ಬಳಸುವ ಆಡು ಮಾತುಗಳು, ಅವರ ಶಬ್ದ

ಬಳಕೆಯ ಸಂದರ್ಭೋಚಿತ ಚಾತುರ್ಯವು ಬೆರಗು ಮೂಡಿಸುತ್ತವೆ. ಅವ್ವ, ಬಳಸುವ ಪ್ರಾಣಿ, ಪಕ್ಷಿ ಹಾಗೂ ನಂಜು ಕಾರುವ ವಸ್ತು, ಹರಿತವಾದ ಆಯುಧಗಳ ಮೂಲಕ ಸವತಿ ಮತ್ಸರದ ತೀವ್ರತೆಯನ್ನು ಬಿಂಬಿಸಿದ್ದಾಳೆ.

''ಸಿಟ್ಟಿಲೆ ತನ್ನೆದೆಯ ಗಟ್ಟಿಸಿದಳವ್ವ
ತಾ ಗಟ್ಟಿಸಿದಳವ್ವ
ಕಷ್ಟದಿ ಭೀಷ್ಮಿಯು
ನಿಟ್ಟುಸಿರು ಹಾಕಿದಳವ್ವ''

ಎದೆಗಿಚ್ಚಿನವಳವ್ವ, ಕಲಹಗಾರುತಿಯವ್ವ, ಸಿಟ್ಟಿನಹುಲಿಯವ್ವ, ಚಿಕ್ಕಚೇಳವ್ವ, ಉರಗ, ಉರವಣಿಗೆ, ಕೆಂಜಿಗಕಚ್ಚಲು, ಹದ್ದುಕುಕ್ಕಿದರೆ, ಸದ್ದಡಗಲಿಲ್ಲವ್ವ, ಮುಳ್ಳಿನಂಥವಳವ್ವ, ತಳ್ಳಿ ಮಾತುಗಳು..., ಹೀಗೆ ತಾವು ಬಳಸುವ ಪದ ಪದವು ಗ್ರಾಮೀಣ ಪರಿಸರವನ್ನು ಬಿಡಿಸಿಡುವ, ಅವ್ವ, ಅದರೊಂದಿಗೆ ಕೊನೆಯ ಭಾಗದಲ್ಲಿ ಹಾಡಿನ ಮುಕ್ತಾಯಕ್ಕೆ ನೀತಿಯನ್ನು ಹೇಳುತ್ತಾ ಸವತಿಯರ ಕಲಹಕ್ಕೆ ಉತ್ತಮ ಅಂತ್ಯವನ್ನು ನೀಡುತ್ತಾಳೆ.

''ಸಿರಿರಮಿ ಅರಸುಗೆ ಸರಿಯಿಬ್ಬರು ನೀವವ್ವ
ನೀವು ಸರಿಯಿಬ್ಬರವ್ವ
ಬರಿಯ ಕರಕರೆಯ ಹಿರಿಯರಲ್ಲವ್ವ''

ಪ್ರತಿಹಾಡಿನಲ್ಲೂ ಭಕ್ತಿ, ನೀತಿಗಳನ್ನು ಸಂದರ್ಭನುಸಾರಿ ಬಳಸಿಕೊಂಡಿದ್ದಾರೆ. ಅವರ ರಚನೆಯ ಆಡುಮಾತಿನ ಶೈಲಿಯು ಜನಸಾಮಾನ್ಯ ಆಚರಣೆಗಳಲ್ಲಿ ಮಿಳಿತಗೊಂಡಿದೆ. ಉತ್ತರ ಕರ್ನಾಟಕ ಹಾಗೂ ಮಧ್ಯ ಕರ್ನಾಟಕದ ಭಾಷೆಯ ಶೈಲಿಯು ಇನ್ನಷ್ಟು ಅಪ್ಯಾಯಮಾನವಾಗಿ ಬಳಕೆಗೊಂಡಿದೆ. ಭಕ್ತಿಯ ವಿಚಾರಗಳನ್ನು ಕಾವ್ಯವಾಗಿಸುವಲ್ಲಿ ಶಿಷ್ಟ ಭಾಷೆಯ ಪ್ರಭಾವವಿದ್ದರೂ 'ಭಕ್ತಿಯ ವಸ್ತು' ತಿಳಿಸುವಲ್ಲಿ ಅವ್ವ, ಜನರ ಆಡುಮಾತನ್ನು ವಿಶೇಷವಾಗಿ ಬಳಸಿಕೊಂಡಿದ್ದಾಳೆ. ಅವರ ಕೀರ್ತನೆ ಶೈಲಿಯ ವೈಶಿಷ್ಟವೆನ್ನ ಬಹುದು.

ಅವರು ಬಳಸುವ ಭಾಷೆಯಲ್ಲಿ ಸಲಿಗೆಯ ಸಂಭ್ರಮವಿರುವುದು. ಆಕೆಯ ಭಕ್ತಿಯ ನಿವೇದನೆಗಳಲ್ಲಿ ಕೃಷ್ಣ ತಮ್ಮವನೆಂಬ ಆತ್ಮೀಯ ಭಾವವನ್ನು ಹೊಮ್ಮಿಸಿದ್ದಾಳೆ.

''ಥಾಟು ಥೀಟಿನ ಭಾವೆ.
ಮಾಟ ಮಾಡಿದಳೇನಮ್ಮಯ್ಯ
ಬೂಟಕತನ ನೋಡಮ್ಮಯ್ಯ
ಬೂಟಕ ಗುಣದವಳ ಕೂಟಕೆ ಮೆಚ್ಚಿದ

ಹರಿಯ ಆಟ ನೋಡಮ್ಮಯ್ಯ

ಮರುಳಾಟವ ಹರಿಯ ನೋಡಮ್ಮಯ್ಯ"

ಭಕ್ತರ ಅತಿಶಯ ಪ್ರೀತಿಗೆ ಸೋತು ಮರುಳಾಗುವ ಹರಿಯು ಅವರ ಬೂಟಕತನವನ್ನಾದರೂ ಮೆಚ್ಚುವ ಪರಿಯನ್ನು ಅಚ್ಚರಿಯಿಂದ ಮೆಚ್ಚುತ್ತಾ, ಚುಚ್ಚುವ ನುಡಿಗಳಿಂದಲೇ ತಮ್ಮ ಕಾವ್ಯಕ್ಕೆ ಸೊಗಸು ತಂದಿರುವರು.

ಹರಿದಾಸರ ಪದಗಳಲ್ಲಿ, ಅನುಭಾವದ ಶ್ರೇಷ್ಠತೆಯನ್ನು ಪ್ರತಿಪಾದಿಸುವ ಭಕ್ತರ ಭಾವುಕತೆ, ಆರ್ತನ ಅಳಲು, ಪರೋಕ್ಷ ಜ್ಞಾನದ ತಿರುಳು, ಶೃಂಗಾರಪೂರ್ಣ ಸನ್ನಿವೇಶ ನಿರ್ಮಾಣ, ಅನ್ಯೋಕ್ತಿಯ ಸ್ವಾರಸ್ಯ, ಹಾಸ್ಯ, ವಿಡಂಬನೆ, ವರ್ಣನೆಯ ಸೊಗಸು ಇತ್ಯಾದಿಗಳು ಸಂದರ್ಭಾನುಸಾರಿ ಅವರ ನಿರೂಪಣೆ, ವರ್ಣನಾಚಾತುರ್ಯ, ಸ್ವಭಾವೋಕ್ತಿಗಳು ಅತ್ಯಂತ ಸಮಯೋಚಿತವಾಗಿ ಬಳಕೆಯಾಗಿವೆ. ದಾಸರ ಹಾಡುಗಳು ಎಲ್ಲಿಯೂ ಡಾಂಭಿಕ ಕೃತಕತೆಗೆ ದಾರಿ ಮಾಡುವುದಿಲ್ಲ. ಸಮಾಜದಲ್ಲಿ ಯಾವುದೇ ವ್ಯಕ್ತಿ ದುಃಖಕ್ಕೀಡಾದಲ್ಲಿ, ಮನದ ಕೊರತೆಗಳಾಗಲಿ, ನಡತೆಗೆಟ್ಟದ್ದನ್ನು ಕಂಡರೆ, ಗಂಡಸು, ಹೆಂಗಸು ಎಂಬ ಭೇದವೆಣಿಸದೇ ಅವರ ವ್ಯಂಗ್ಯೋಕ್ತಿಯು ಎಲ್ಲವನ್ನೂ ಒಳಗೊಂಡಿರುತ್ತದೆ. ಅವ್ವ, ತಮ್ಮ ಹಾಡುಗಳಲ್ಲಿ ಹಾಸ್ಯ, ವ್ಯಂಗ್ಯ ಕೋಪ, ಹಲವು ಭಾವಗಳು ಸಮಿಶ್ರವಾದ ಕಾವ್ಯ ರಚಿಸಿದ್ದಾಳೆ. ಹೆಂಗಳೆಯರ ಮನದಾಳದಲಿ ನೆಲೆಯಾಗಿರುವ ಅನೇಕ ಭಾವಾರ್ಥಗಳಿಗೆ ಅವ್ವ ಧ್ವನಿಯಾಗಿದ್ದಾಳೆ. ತಮ್ಮ ಪರಿಸರದಲ್ಲಿ ರೂಢಿಯಲ್ಲಿರುವ ನಾಣ್ಣುಡಿಗಳಂತೆ, ಬಳಕೆಯಲ್ಲಿರುವ ಗಾದೆಗಳು, ಶಕುನಗಳು, ಮೂಹೂರ್ತ ಇತ್ಯಾದಿಗಳನ್ನು ಪ್ರಸ್ತಾಪಿಸುತ್ತಾರೆ.

ಅವ್ವನವರ ನಿರೂಪಣಾ ಶೈಲಿಯು ಸರಳವಾಗೂ, ಸುಲಭವಾಗೂ ಇದೆ. ಪಾತ್ರಗಳ ರಚನೆಯಲ್ಲಿ ಹಿತಮಿತವಾದ ಭಾವಗಳು ಮೂಡಿಬಂದಿವೆ. ಅವರ ಭಕ್ತಿ, ಹಾಡುತ್ತಲೇ ರೂಪ ಪಡೆಯುತ್ತವೆ. ಮಾನವ ಸಂಬಂಧಗಳಲ್ಲಿ ಮೂಡಿಬರುವ ಅನ್ಯೂನ್ಯತೆಯ ಮೂಲಕ ತೆರೆದುಕೊಳ್ಳುತ್ತದೆ. ತಮ್ಮ ಕಾವ್ಯಕ್ಕೆ ಹಿನ್ನಲೆಯಾಗಿ ಪುರಾಣ, ಭಾಗವತ, ರಾಮಾಯಣ, ಮಹಾಭಾರತ, ಬಳಸಿಕೊಂಡು, ಅದರೊಂದಿಗೆ ತಮ್ಮ ಅನುಭವದ ವಿಚಾರಗಳನ್ನು ಸಂಪ್ರದಾಯದ ರೀತಿ-ನೀತಿಗಳಲ್ಲಿ ಸೇರಿಸಿ ವಿವರಿಸಿದ್ದಾರೆ. ಈ ಅನುಭವಗಳು ಆಗಿನ ಸಂದರ್ಭಕ್ಕೆ ಮಾತ್ರ ಅನ್ವಯವಾಗದೆ, ಎಂದೆಂದಿಗೂ ಅನ್ವಯವಾಗುವ ಸಾಮಾಜಿಕ ಸಂಬಂಧಗಳಲ್ಲಿ ಹಿಡಿದಿಟ್ಟಿದ್ದಾರೆ. ಅದರಿಂದ ಅವ್ವನವರ ಹಾಡುಗಳು ಉತ್ತರ ಕರ್ನಾಟಕ ಮನೆ ಮನೆಗಳಲ್ಲಿ ಶುಭಕಾರ್ಯದ ಹಾಡುಗಳಾಗಿ ಇಂದಿಗೂ ಬಳಕೆಯಾಗುತ್ತಿವೆ.

ಇವು ಜನಸಾಮಾನ್ಯರು ಪಾಲಿಸುವ ರೀತಿ-ನೀತಿಗಳಲ್ಲಿ ಅವ್ವನವರ ಹಾಡಿನ ಶೈಲಿ ಕಾಣಿಸುತ್ತವೆ. ಭಾಷೆಯ ರೂಪ ಸ್ವಲ್ಪವೂ ಏರುಪೇರಿಲ್ಲದೆ ಬಳಕೆಯಾಗುತ್ತಿರುವುದು ಅವರ ಪ್ರಭಾವಯುತ

ಭಾಷಾಶೈಲಿಯಿಂದ ಆಡುಮಾತಿನ ರೂಢಿಯಿಂದ ಸದಾ ಪ್ರಚಲಿತ ಮಾಧ್ಯಮವಾಗಿರುವುದು. ಅವರು ಬಳಸುವ ಕೆಲವಾರು ಪದಗಳು 'ಬೆಳದಾಳೋ, ಚಿಗಳಿತೋ, ನೆರವಿಕೊಂಡು, ಜಪ್ಪಿಸಿಕೊಂಡು, ಠಕ್ಕಿಸಿ ಎದಿಮ್ಯಾಲೆ' ಎಂಬಂತಹ ಪದಗಳು ಸ್ತ್ರೀಯರು ದಿನನಿತ್ಯ ಬಳಸುತ್ತಿದ್ದರು. ಹೀಗೆ ಒಂದೊಂದು ಪದಗಳ ಪ್ರಾದೇಶಿಕವಾಗಿ ಬಳಕೆಯು ಹರಿಯ ಪ್ರೇಮ ಪಡೆಯಲು, ಛಲವನ್ನು ಸಾಧಿಸುವ ಮಹಿಳೆಯರ ಮನದಲ್ಲಿ ಅಚ್ಚಳಿಯದೆ ನಿಂತಿರುವುದು, ದಿನಬಳಕೆಯ ಮಾತುಗಳಲ್ಲಿರುವುದು. ಅವ್ವನವರ ಹಾಡುಗಳು ಅತ್ತಿಗೆ-ನಾದಿನಿಯರ ಛಲದಲಿ, ಮತ್ಸರದಲ್ಲಿ ತಿಕ್ಕಾಟ ನಡೆಸಿದರೂ, ಆ ಹಾಡಿನ ಭಾವಗಳೆಲ್ಲ ಸಡಗರ ಹಾಗೂ ಉತ್ಸುಕತೆಯನ್ನು ನಿರ್ಮಿಸುತ್ತವೆ. ''ಹರಿದಾಸರರು ದ್ವೈತ ತತ್ವಗಳನ್ನು ಸರಳವಾಗಿ ಹೇಳಲು ಬಳಸಿಕೊಂಡಿದ್ದಾರೆ. ಜನಸಾಮಾನ್ಯರ ಆಡುಮಾತಿನ ಶೈಲಿಯಿಂದ ಸಂಕೀರ್ಣವಾದ ಆಧ್ಯಾತ್ಮತತ್ವಗಳ ವಿಚಾರವನ್ನು ಸುಲಭವಾಗಿ ಸಂಗೀತದಲ್ಲಿ ಅಳವಡಿಸಿದ್ದಾರೆ. ಇದಕ್ಕೆ ರಾಗ, ತಾಳಗಳ ಮಟ್ಟುಗಳನ್ನು ಬಳಸುವಾಗ ಜನಪದ ಹಾಡುಗಳ ಲಯವು ಪ್ರೇರಣೆಯಾಗಿರಬೇಕು. ಸಮಾಜದಲ್ಲಿ ಬೆರೆತುಹೋದ ಅನೇಕ ಆಶು ರಚನೆಗಳನ್ನು ತಮ್ಮ ಸಂಗೀತದಲ್ಲಿ ಬಳಸಿ ಹರಿದಾಸ ಸಾಹಿತ್ಯದ ಹಿರಿಮೆಗೆ ಜನಭಾಷೆಯನ್ನು, ದೇವಭಾಷೆಯ ಸ್ಥಾನಕ್ಕೆ ತಂದು ನಿಲ್ಲಿಸಿದರು.''[೧೫] ಅವ್ವನವರ ಹಾಡುಗಳಲ್ಲಿ ಪ್ರಾದೇಶಿಕ ಭಾಷೆಯ ಶೈಲಿಯನ್ನು ಮದುವೆ ಸಮಾರಂಭಗಳಲ್ಲಿ, ಹಬ್ಬ-ಹರಿದಿನಗಳಲ್ಲಿ ಮುಯ್ಯದ ಹಾಡುಗಳು ರಂಜನೀಯವಾಗಿ ಹಾಡಿಸಿಕೊಳ್ಳುತ್ತವೆ. ಅವರ ರಚನೆಯಲ್ಲಿ ಮಹಿಳೆಯರು ತಮ್ಮಿರುವನ್ನು ಮರೆತು ಹಾಡುವ ಭಾವ ತೀವ್ರತೆಯಿದೆ.

ಇದೊಂದು ಮಹಿಳೆಯರ ಪಾರಂಪರಿಕ ಆಸ್ತಿಯಂತೆ ಇಂದಿಗೂ ಬಳಕೆಯಲ್ಲಿರುವುದು. ಅವ್ವನವರ ಹಾಡಿನ ವೈಶಿಷ್ಟ್ಯವೆನ್ನಬಹುದು. ಹಾಡಿನ ಲಯವು ಸಡಗರದ ಸಂದರ್ಭಕ್ಕೆ ಹೇಳಿ ಹೊಂದಿಸಿರುವಂತಿದೆ. ಅವರ ರಚನೆಯ ಸಾಲುಗಳು ಎಲ್ಲಿಯೂ ವೈರಾಗ್ಯಕ್ಕೆ ಕಾರಣವಾದ ನೀರಸಭಾವ ವ್ಯಕ್ತವಾಗದೆ, ಸಂಭ್ರಮದ ನುಡಿಗಳು ಕೇಳುಗರಲ್ಲಿ ಉತ್ಸಾಹ ಭಾವ ತುಂಬುವ ಲಯ ಮಾಧುರ್ಯವನ್ನು ಹೊಂದಿದೆ. ಆಭರಣ ತೊಟ್ಟು, ಅವುಗಳ ಹೊಳಪಿನಲ್ಲಿ ಕಾಣುವ ಮಹಿಳಾ ವಲಯದ ಆನಂದಕ್ಕೆ ರೂಪ ಕೊಟ್ಟಂತಿವೆ. ಈ ಹಾಡಿನ ಮಟ್ಟುಗಳು, ಪಲ್ಲವಿಯ ಹಾಡು, ಅನುಪಲ್ಲವಿಯಲ್ಲಿ ಪುನಾರವರ್ತಿಸಿ, ನುಡಿಗಳಲ್ಲಿ ಸಂದರ್ಭದ ಸ್ವಾರಸ್ಯವನ್ನು ದಾಸ ಸಾಹಿತ್ಯದ ಹಿನ್ನಲೆಯಲ್ಲಿ ರಚಿಸಿರುವುದು ಹಾಗೆಯೇ, ಹಾಡು ಎರಡು ಸಾಲಿನ ದ್ವಿಪದಿಯಾಗಿ, ತ್ರಿಪದಿ, ಚೌಪದಿಯಾಗಿಯೇ ಸಂದರ್ಭಾನುಸಾರಿ ಬಳಕೆಯಾಗುತ್ತಿವೆ. ಅವ್ವ, ತಮ್ಮ ಭಕ್ತಿಯ ಎಳೆಯಲ್ಲಿ ಸಾಮಾಜಿಕ ಸಂಬಂಧಗಳನ್ನು ಸೇರಿಸುತ್ತಾ ಹೆಣೆಯುವ ರೀತಿ, ಅವರ ರಚನಾ ಕೌಶಲ್ಯ, ಸಾಂದರ್ಭಿಕ ವಿವರಣೆಗೆ ಕೊಡುವ ಮಹತ್ವ ಎಲ್ಲವೂ ಆಡುಮಾತಿನ ಶೈಲಿಯಲ್ಲಿ ಹೊರರೂಪದಲ್ಲಿ ಭಕ್ತಿಯಾಗಿ, ಆಂತರ್ಯದಲ್ಲಿ ಸರಳ ನೀತಿಯ ಶೈಲಿಯು ನಿರೂಪಣೆಯಾಗಿರುವುದು. ಹಾಗೂ ಸಾಮಾಜಿಕ ಕಳಕಳಿಯಾಗಿ ಅವರ ಭಾಷಾ ಶೈಲಿಯ ನಿರೂಪಣೆಯಾಗಿದೆ.

''ಭಾವಭಾಷೆಗಳ ಮೇಳೈಕೆಯೇ ಶೈಲಿಯಾಗಿದೆ. ಶೈಲಿಯಿಲ್ಲದ ಬರವಣಿಗೆ ಕಾವ್ಯಗುಣವಿರದೆ ನೀರಾಸವಾಗುತ್ತದೆ. ಇಂತಹ ಸಾಹಿತ್ಯದಿಂದ ಯಾವ ಆನಂದವು ದೊರಕುವುದಿಲ್ಲ. ಶೈಲಿಯೇ ಸಾಹಿತ್ಯವೆಂದು ಹೇಳುವುದುಂಟು. ಶೈಲಿಯ ಬಳಕೆಯು ವೈಯುಕ್ತಿಕವಾಗಿದ್ದು, ಹೇಳಬೇಕೆಂದ ವಿಷಯ ನಿರೂಪಣೆ ರೀತಿಯ ದೈವಿಕವಾಗಿ, ಭಾವೋತ್ಕರ್ಷದಿಂದ ಉದ್ರೇಕಾವಸ್ಥೆಯಲ್ಲಿ ರೂಪಾಂತರಗೊಳಿಸಿರುವುದರಿಂದ ಬರವಣಿಗೆಗೆ ಗಾಂಭೀರ್ಯವೂ, ವೈಶಿಷ್ಟ್ಯವೂ ಕೂಡಿಕೊಂಡು ಅದೇ ಶೈಲಿಯೆನಿಸುತ್ತದೆ.''[೬] ಅವ್ವನವರ ಹಾಡುಗಳು ಆಡುಮಾತಿನ ಧಾಟಿಯಿಂದ ಹೆಚ್ಚು ಆಪ್ತತೆಯುಂಟು ಮಾಡುವುವು. ಅವರ ನಿರೂಪಣಾ ರೀತಿಯಲ್ಲಿ ಕಲಿತ ವಿದ್ಯೆಯ ಪ್ರಭಾವವು ವಿಷಯ ನಿರೂಪಣೆಯ ವಸ್ತುವನ್ನು ಉನ್ನತ ಭಾವದಲ್ಲಿ ನೋಡುತ್ತಾರೆ. ವಿಶೇಷವಾಗಿ ಬಳಸುವ ಆಡುಮಾತುಗಳು ಸುತ್ತಲಿನ ಪರಿಸರಕ್ಕೆ ಹೊಂದುವ ಸರಳವಾದ ಪದಗಳು, ಅವರ ರಚನೆಯನ್ನು ಹೆಚ್ಚು ಸುಂದರವಾಗಿಸುತ್ತವೆ.

ಹಾಡಿನ ಹೊರರೂಪವು ಸರಳ ಸುಂದರವಾದ ಆವರಣದಿಂದ ಕೂಡಿದ್ದರೆ, ಅದರ ಅಂತರ್ಯವು ಭಕ್ತಿಯ ಅನನ್ಯತೆಯಿಂದ ಕೇಳುಗರಲ್ಲಿ ಆನಂದ, ಆತ್ಮೀಯತೆಗಳು ಉಕ್ಕಿಸುತ್ತವೆ.

''ಅಂಜಬ್ಯಾಡ ಬ್ಯಾಡಲೆ ಜಾಣೆ
ಸಂಜಿಲೆ ಬಂದೆವೆಂಬೊ ಅಂಜಿಕೆ ನಿನಗ್ಯಾಕೆ''
ಭಯವುಳ್ಳ ಬಾಲೆ, ನೀ ಐವರಿಗೆ ಇಂತಿಪ್ಪೆ
ಸೈವಲ್ಲದ ಮಾತು ಜಗಕಿದು
''ಕತ್ತಲೆಗಂಜುವುದೇನು
ಮೈದುನ ನಿನ್ನ ಬತ್ತಲೆ ಮಾಡಿದನ''
''ಪುನಗಿನ ಪರಿಮಳ, ಬಿನುಗು ಬೆಕ್ಕಿಗೆ ಉಂಟೆ''
''ಗಿಳಿಯಂತ ಕಳೆಯ ಹೊಳೆಯ ಬಲ್ಲುದೆ ಗುಬ್ಬಿ''

ಹೀಗೆ ಪದಗಳಲ್ಲಿ ಅವ್ವನವರು ಆಡುಮಾತಿನ ಧಾಟಿಯನ್ನು ಬಳಸಿದ್ದಾರೆ. ಅವರು ಬಳಸುವ ಸಂಬಂಧಸೂಚಕ ಪದಗಳಲ್ಲಿ ಗಂಡ, ಮೈದುನ, ಯಾವ ಕಚ್ಚೆತನ, ಅಟ್ಟು ಹಾಕುವವನ ಪರಿಯಲಿ, ಹುಟ್ಟುಕೊಟ್ಟವನ ಮೆರೆಸೀದಿ ಮುಂತಾದವುಗಳು ಪುಟ್ಟ ಪದಗಳೂ, ಪುಟ್ಟ ವಾಕ್ಯಗಳು ಹಾಡಿನ ಲಯಕ್ಕೆ ಒದಗಿವೆ. ಅವ್ವ, ಅಡುಭಾಷೆಯೊಂದಿಗೆ ಶಿಷ್ಟ ಭಾಷೆಯ ಪದಗಳನ್ನು ಹಿತಮಿತವಾಗಿ ಬಳಸಿದ್ದಾರೆ. ಅವರ ದೇಸಿ ಪದಗಳಿಗೆ ಶಿಷ್ಟ ರೂಪದ ನುಡಿಗಳ ಬಳಕೆಯಿಂದ ಕಾವ್ಯ ಸೌಂದರ್ಯ ಇಮ್ಮಡಿಸಿದೆ. ''ಶ್ರೇಷ್ಠ ವಿಚಾರಗಳ ಕಲ್ಪನೆ, ಸೂಕ್ತಿ ಗಾದೆ, ಒಗಟು, ಸಮಾಜದ ಸೂಕ್ಷ್ಮ ವಿವೇಚನೆಗಳು, ಅದ್ಭುತವಾದ ಉಪಮಾಲಂಕಾರಗಳು, ಜನರು ಬಳಸುವ ಹಾಸ್ಯ, ವ್ಯಂಗ್ಯ, ವಿಡಂಬನೆಗಳು ಮೊದಲಾದ ನವರಸ ಭಾವಗಳ ಸಮ್ಮಿಶ್ರವೇ ದಾಸ ಸಾಹಿತ್ಯದ ತಿರುಳು. ಇವಕ್ಕೆ ಪೂರಕವಾಗಿ ರಾಮಾಯಣ, ಮಹಾಭಾರತ,

ಪುರಾಣ, ಭಾಗವತಗಳಲ್ಲಿನ ಪ್ರಸಂಗಗಳ ಬಳಕೆಯಿಂದ ಪ್ರತಿಮಾ ಕೌಶಲ್ಯ 'ನುಡಿಗೊಂದು ಸಿಂಗಾರದಳೆ ಎದ್ದು ಕಾಣುವಂತೆ' ಭಾವಲಹರಿ, ಸಂವಾದ ಚಾತುರ್ಯ, ಸಂವಹ ಕೌಶಲಗಳು ಪುರಂದರ ಸಾಹಿತ್ಯ ಜನಮಾನಸದಲ್ಲಿರುವುದು"[೭] ಅವ್ವ ತಮ್ಮ ಹಾಡಿನ ಲಯಕ್ಕೆ ಸುತ್ತಲಿನ ಪರಿಸರದಿಂದ ಪ್ರಭಾವಕ್ಕೊಳಪಟ್ಟು ರಚಿಸಿದ್ದಾರೆ. ನವರಸಗಳ ಭಾವ ಲಹರಿಯು ವಿನೋದ, ವಿಡಂಬನೆಗಳಿಂದಲೂ, ಕೋಪತಾಪಗಳ ಜರೆಯುವಿಕೆಯಿಂದ ಗಾದೆ, ಶಕುನಗಳ ಬಳಕೆಗಳಿಂದ, ಹದ ಮೀರದ ಭಾವಕ್ಕೆ ಹೆಚ್ಚು ಪ್ರಾಧಾನ್ಯತೆ ನೀಡಿರುವರು. ಹಾಡು ಕಟ್ಟಿದ ಸಂದರ್ಭಗಳು ಅತಿಶಯ ವರ್ಣನೆಗಳಿಂದ ಕೂಡಿವೆ. ಇದಕ್ಕೆ ಅವರ ಪರಿಸರವೇ ಕಾರಣ ಹಾಗೂ ಅವುಗಳ ಬಳಕೆಯಿಂದ ಹಾಡಿನ ಸೊಗಸು ಹೆಚ್ಚಿಸಿದ್ದಾರೆ. ವಿಶೇಷವಾಗಿ ಆಭರಣಗಳು, ಉಡುಗೆ-ತೊಡುಗೆ, ಸಂದರ್ಭೋಚಿತವಾದ ಊಟೋಪಚಾರಗಳಲ್ಲಿ ಸಾಂಪ್ರದಾಯಿಕವಾದ ವಾತಾವರಣ ನಿರ್ಮಿಸಿರುವುದು ಬಳಸುವ ಭಾಷೆ, ಭಾವಿಸುವ ಭಕ್ತಿಯು ಹಿತಮಿತವಾದ ಕಾವ್ಯವಾಗಿ ರೂಪುಗೊಂಡಿದೆ.

ಅವರ ಹಾಡುಗಳಲ್ಲಿ ನಿರೂಪಣೆಯು ಅತ್ಯಂತ ಆತ್ಮೀಯರಾದವರಲ್ಲಿ ಮನದ ಭಾವನೆಗಳ ಹಂಚಿಕೊಳ್ಳುವ ತುಡಿತವಿದೆ. ಇಲ್ಲಿ ಬಳಕೆಯಾಗಿರುವ 'ನಿಂದಾಸ್ತುತಿ ತಂತ್ರ' ಹೆಚ್ಚು ಪೂರಕವಾಗಿ ಒದಗಿ ಬಂದಿದೆ. ಹಾಡು ಕಟ್ಟುವಲ್ಲಿ ಪ್ರತಿಯೊಂದು ಪದ, ಸಂದರ್ಭಕ್ಕೆ ತಕ್ಕ ಭಾವ ಬಳುಕುಗಳಿಂದ ವಿಶೇಷವಾಗಿ ಭಕ್ತಿ ನಿರೂಪಣೆಗೆ ಸಮಯೋಚಿತವಾಗಿವೆ. ಆಡು ಮಾತಿನ ಧಾಟಿಯು ಶಿಷ್ಟ ಪದಗಳ ಹಿತಮಿತವಾದ ಬಳಕೆಯಿಂದ ಹದವಾದ ಹಾಡು ಮೂಡಿರುವುದು. ಕಾವ್ಯದ ಸೌಂದರ್ಯಕ್ಕೆ ವಿಶಿಷ್ಟ ವರ್ಣನೆ, ವಿಚಾರಗಳ ಹದ ಮೀರದ ಬಳಕೆ, ಆಧ್ಯಾತ್ಮ ತತ್ವಗಳ ಸರಳ ನಿರೂಪಣೆಯಿಂದ ಅವ್ವ, ತಮ್ಮ ಹಾಡಿನಲ್ಲಿ ಸಾಂಸ್ಕೃತಿಕವಾಗಿ ಮಹತ್ವ ನೀಡಿದ್ದಾರೆ.

"ಶಂಬರಾರಿ ಪಿತನ ತಂಬುಲಸಿಗದೆಂದು
ಚುಂಬನದ ಸಮಯ ಚಿಗಳೀತು"

ಈ ಸಾಲುಗಳಲ್ಲಿ, ದೇಸಿ ಪದಗಳಾದ 'ತಂಬುಲ', 'ಚಿಗಳೀತು' ಎಂಬುವು, ಶಿಷ್ಟ ಭಾಷೆಯ ಪದಗಳೊಡನೆ ಬೆರೆತಿರುವುದು ಹಿತಮಿತವಾಗಿರುವುದು.

"ಜಗದೊಡೆಯನ ಒಗೆತನ ನಗೆಗೀಡಾಯಿತು.
ಈ ಬಗೆ ಎಲ್ಲೂ ಕಾಣೆ ಜಗದೊಳು ರುಕ್ಮಿಣಿ
ತಗಿ ನಿನ್ನ ನಡತೆ ತರವಲ್ಲ"

'ಒಗೆತನ', ಬಾಳುವೆ, ತಗಿ ನಿನ್ನನಡತೆ ಎಂಬುವ ಪದಗಳು ಆಡುಮಾತಿನ ರೂಪದಲ್ಲೇ ಕಾವ್ಯವಾಗಿಸಿರುವುದು

'ಹಿರಿಯ ಅತ್ತಿಗೆ ತಾನು ಗರುವಿನ ಸೀರೆಯುಟ್ಟು
ಮಡದಿ ಸತ್ಯಭಾಮೆ ಬಡಿವಾರದ ಸೀರೆಯುಟ್ಟು
ಅಷ್ಟು ಮಡದಿಯರು ಅತಿಸಿಟ್ಟಿನ ಸೀರೆಯುಟ್ಟು"

ಇಲ್ಲಿ 'ಗರುವಿನ', ಬಡಿವಾರ, ಎರಡೂ ಪದಗಳು ಅಹಂಕಾರ ಎಂದರ್ಥಗಳನ್ನು ಹೊಂದಿ, ಕೊನೆಗೆ ' ಅತಿಸಿಟ್ಟಿನ' ರೂಪವಾಗಿರುವುದು. ಪದಗಳ ಅರ್ಥಗಳನ್ನು ಲೀಲಾಜಾಲವಾಗಿ ತಮ್ಮಿಷ್ಟದಂತೆ ರೂಪಾಂತರಿಸುವ ಭಾಷಾ ಪ್ರೌಢಿಮೆಯು ಅವ್ವನವರಿಗಿತ್ತು. ಅದಕ್ಕಾಗಿಯೇ ಆಡುಭಾಷೆಯ ಪದಬಳಕೆಯಲ್ಲಿ ಯಾವ ಅಡೆತಡೆಯೂ ಇಲ್ಲದೆ ಬಳಸುವ ಮೂಲಕ ಕಾವ್ಯದ ಸೊಗಸು ಹೆಚ್ಚಿಸಿ ಆತ್ಮೀಯಭಾವದಲ್ಲಿ ಪ್ರಕಟಗೊಂಡಿದೆ. ಇಷ್ಟಲ್ಲದೆ, ಅವ್ವ ತಮ್ಮ ಪದಗಳಿಗೆ ಬೇಕಾಗಿಯೇ ಆಡುಮಾತನ್ನು ಬಳಸಿಕೊಂಡಿದ್ದಾರೆ.

ಇಟ್ಟ ಮುದ್ರಿಗಳು(ಮುದ್ರೆಗಳು), ಬಿಗಿ(ಬಗೆ), ತೋಳುತಾಯಿತ (ತೋಳ ಬಂಧಿ) ಕಟ್ಯಾಣ (ಶ್ರೇಷ್ಠವಾದ_, ಬೆನ್ನತ್ತಿದಾಗ(ಬೆಂಬತ್ತಿ), ಮತ್ತ(ಮತ್ತು), ಮ್ಯಾಲೆ(ಮೇಲೆ), ಬ್ಯಾಡೆಲೆ(ಬೇಡ ಎಲೆ), ಸಂಜಿಲೆ(ಸಂಜೆಯಲೆ), ಸೈವಲ್ಲದ(ಸರಿಯಲ್ಲದ), ಉಣಿಸಿರಿ(ಊಟಬಡಿಸಿ), ಧೀಮಾಕು(ಜಂಭ), ಕಬ್ಬೆಕ್ಕು (ಕಾಡುಬೆಕ್ಕು), ಕೋಣ ಮುಂತಾದ ಪ್ರಾಣಿ ಹೆಸರುಗಳ ಬಳಕೆಯಲ್ಲಿ ಅವ್ವ ತಮ್ಮ ಸಂಪ್ರದಾಯದ ಹಾಡುಗಳ ಸತ್ವವನ್ನು ಆಡುಮಾತಿನ ಶೈಲಿಯ ಮೂಲಕ ಪಡೆದಿದ್ದಾರೆ.

"ನೆನೆಯಕ್ಕಿ ನೆನಗಡಲೆ ಗೊನೆ ಬಾಳೆಹಣ್ಣು
ಘನವಾದ ಚಿಗಳಿತಂಬಿಟ್ಟು"
ತುಪ್ಪ ಸಕ್ಕರಿಯಲಿ ಪಕ್ವಾದ ಭಕ್ಷ್ಯ
ಯಾಲಕ್ಕಿ ಕಸಕಸಿ ಮೇಲಾದ ಪಾಯಸ
ಫಲದಿಂದ ಪಕ್ವಾದ ಹಲವು ಪದಾರ್ಥ
ಉಪ್ಪು ಉಪ್ಪಿನಕಾಯಿ, ಹಪ್ಪಳ ಸಂಡಿಗೆ
ಒಪ್ಪುವ ಬುತ್ತಿ ಕಲಸನ್ನ
ಸಂಡಿಗೆ ಹಪ್ಪಳ ಮಂಡಗಿ ಗುಳ್ಳೋರಿಗೆ
ದಿಂಡು ಸೂರಣವು
ಸೂಪ ಪರಮಾನ್ನ, ಕ್ಷೀರ, ಮಧುಘೃತ ಮೊದಲಾಗಿ

ಇಲ್ಲಿ ಬಳಸಿರುವ ಪದಾರ್ಥಗಳೆಲ್ಲವು ಅಂದಿನ ಆಹಾರ ಪದ್ಧತಿಯನ್ನು ಹೇಳುತ್ತಿವೆ. ಪ್ರಾದೇಶಿಕ ವಿಶೇಷತೆಯಾಗಿ ಸವಿಯಾದ ಭಕ್ಷ್ಯಗಳನ್ನು ಹೆಸರಿಸುತ್ತಾರೆ. ಊಟೋಪಚಾರಗಳಲ್ಲಿನ ಅಚ್ಚುಕಟ್ಟು, ಸವಿಯಾದ ಉಪಚಾರಗಳನ್ನು ಕಾವ್ಯವಾಗಿಸಿರುವುದು. ಕೀರ್ತನಕಾರ್ತಿಯ ಸೃಜನಾತ್ಮಕ ಕಾವ್ಯಕ್ರಿಯೆ ಎನ್ನಬಹುದು. ಏಕೆಂದರೆ ಕವಿ, ಮನಸ್ಸುಳ್ಳವರಿಗೆ ತಾವು ಕಾಣುವ, ಕೇಳುವ, ಎಲ್ಲ ರೀತಿಗಳಲ್ಲೂ ಸದಾ ಅವರ ಮನಸ್ಸು ಮಗ್ನವಾಗಿರುತ್ತದೆ ಎಂಬುದು ಅವ್ವನವರ ಪದಾರ್ಥಗಳ ವರ್ಣನೆಯು ಹಾಡುಗಳಲ್ಲಿ

ಸಾಧಿತವಾಗಿದೆ. ಅವ್ವನವರು ಷಡ್ ರಸಾನುಭವದ ಮೂಲಕ ಕಾವ್ಯಕ್ರಿಯೆಯಲ್ಲಿ ಜೀವನ ಪ್ರೀತಿಯ ಸತ್ವವಿರಿಸಿದ್ದಾರೆ.

''ಪುರಂದರದಾಸರ, ಕಾವ್ಯ ರಚನೆಯಲ್ಲಿ ಪ್ರತಿಪಾದಿತವಾದ ವಿಚಾರದಷ್ಟೇ, ಆ ವಿಚಾರವನ್ನು ವ್ಯಕ್ತಪಡಿಸಲು ಪ್ರತಿಭೆ ಮುಖ್ಯವಾಗುತ್ತದೆ. ಒಬ್ಬ ಉತ್ತಮ ಕವಿಯ ಸತ್ವವಿರುವುದು, ರಚನಾ ಚೌಕಟ್ಟಿನಲ್ಲಿ, ಜನಸಾಮಾನ್ಯರಿಗೆ ಕಾವ್ಯ ತಲುಪಿ, ಅವರಲ್ಲಿ ಕಾವ್ಯ ಸದಾ ಕ್ರಿಯಾಮುಖಿಯಾಗಿರಲು, ಕಾವ್ಯಕ್ಕೆ ಅಗತ್ಯವಾದ ಪ್ರಾಸ, ಅನುಪ್ರಾಸ, ಯಮಕ, ಗತಿಗಳಲ್ಲಿ ಕಾವ್ಯದ ಲಯವನ್ನು ವರ್ಣಶೋಭೆ, ವ್ಯಂಗ್ಯ, ಶ್ಲೇಷ, ಅಣಕಗಳಿಂದ ಶಬ್ದಾರ್ಥಗಳ| ಸೊಗಸು ಹೆಚ್ಚಾಗುವುದು. ಅಲ್ಲಿಲ್ಲಿ ಬಳಕೆಯಾಗುವ ಸೂಕ್ತಿ, ಗಾದೆ, ಶಕುನಗಳೂ, ಉಪಮಾ, ರೂಪಕಗಳ ಬಳಕೆಯೂ ಕಾವ್ಯ ನಿರ್ಮಿತಿಯ ಸಾರ್ಥಕತೆಯಾಗಿವೆ.''[೧೮] ಅವ್ವ, ತಮ್ಮ ಕಾವ್ಯದ ಲಯವನ್ನು, ಸರಳವಾದ ಶೈಲಿಯಲ್ಲಿ ರೂಪಿಸಿಕೊಂಡಿದ್ದಾಳೆ.

ಅವ್ವ, ತಮ್ಮ ಮನೆಯ ಪರಿಸರದಲ್ಲಿ ನಡೆಯುವ ಸಂದರ್ಭಗಳನ್ನೇ ಹಾಡಾಗಿಸಿರುವುದು. ಅಲ್ಲಿ ಬಳಸುವ ಗಾದೆ, ಶಕುನಗಳು, ಉಪಮಾ, ರೂಪಕಗಳ ಬಳಕೆಯಿಂದ ತಮ್ಮ ಪ್ರತಿಭೆಯ ಮೂಲಕ ಹಾಡು ಕಟ್ಟಿದ್ದಾಳೆ. ಜನರಿಗೆ ಸಂತಸ ತರುವ ಅವರ ಹಾಡುಗಳು ಇಂದಿಗೂ ಸಂಭ್ರಮದ ವಿಶೇಷ ಸಂದರ್ಭಗಳಲ್ಲಿ ಹಾಡುವ ಪರಿಪಾಟವನ್ನು ಗಮನಿಸಬಹುದು. ''ಸುಮನಸೆಯರೆಲ್ಲ ಯಮುನಾ ನದಿಯ ಧಾಟಿ'' ''ಧಿಮಿ ಧಿಮಿ ಭೇರಿ ಹೊಯಿಸುತ

ಮಿತ್ರಿ ತಿಲೋತ್ತಮ ಮತ್ತೆ ಮೇನಕೆಯರು
ಥೈ ಥೈ ಎಂದು ಕುಣಿಯುತ
ಮದ್ದು ಬಾಣ ಬಿರುಸು ರಥಿಣಿ
ರಭಸಿಗೆ ಎದ್ದು ಜನರೆಲ್ಲ ಬೆರಗಾಗಿ''

ಧಿಮಿ ಧಿಮಿ, ಥೈ ಥೈ ಎಂಬ ಕುಣಿಯುವ ಗತಿಯಲ್ಲಿ ಸಾಗುವ ಧಾಟಿಯು, 'ಭೇರಿ' ಎಂಬ ವಾದ್ಯದ ಅಬ್ಬರ ಸ್ವರದಲ್ಲಿ, ಥೈ ಥೈ ಎಂಬ ರಭಸದ ತಾಳವು, ರಥಿಣಿ ರಭಸಿಗೆ ಹೀಗೆ, ರಭಸ, ಅಬ್ಬರಗಳೂ ಕೃಷ್ಣ ದರ್ಶನಾಕಾಂಕ್ಷಿಗಳಲ್ಲಿರುವುದು, ಕುತೂಹಲವು ಸಹಜವಾದುದಲ್ಲ ಭಕ್ತಿ ರಸಾವೇಶವು ಉಚ್ಚಸ್ಥಿತಿಗೇರಿ ಭಾವಪರವಶತೆಯನ್ನು ಸರಳವಾದ ಪದಗಳಲ್ಲಿ ಹಿಡಿದಿಟ್ಟಿದ್ದಾರೆ.

''ವೇದ ತಂದಾತನ ಪಾದವ ಕಂಡುಬಂದೆ
ಮೋದವಾದನು ಸಹದೇವ ಪರಾಕು
ರುಕ್ಮಿಣಿ ಅರಸಗೆ ಸಕಲವು ಅರಿವಿದೆ
ಭಕುತರ ತೋರೆಂದು ನಕುಲ ಪರಾಕು'

ಪ್ರಾಸ, ಅನುಪ್ರಾಸಗಳು ಸಹಜವಾಗಿ ಬಳಕೆಯಾಗಿವೆ. ಇಲ್ಲಿ ಕಾವ್ಯವು ಧೀರವಾದ, ಗಂಭೀರವಾದ ವಾಣಿಯಲ್ಲಿ ಸಾಗಿರುವುದು. ಅವ್ವನವರು ಸಂದರ್ಭಕ್ಕೆ ಅನುಸಾರವಾಗಿ ಶಬ್ದಾರ್ಥಗಳಂತೆ, ಸ್ವರಲಯಗಳ, ತಾಳಗಳಲ್ಲೂ ಹದವಾದ ಸಾಮರಸ್ಯ ಸಾಧಿಸಿದ್ದಾರೆ. ಕೇಳುಗರಲ್ಲಿ ಭಾಷೆಯ ದಿಟ್ಟತೆಯು ಅವರ ಅರ್ಥವಲಯವನ್ನು ಸುಲಭವಾಗಿ ಸೇರುವಂತೆ, ಭಕ್ತಿಯ ಎಳೆಯನ್ನು ಹಿಡಿದಿಟ್ಟಿದ್ದಾರೆ.

''ಕಾಶ ತುಂಬಿತು ಎಲ್ಲ ಕೋಶ ತುಂಬಿತು
ಆಶೆ ಬಡುತಲೆ ಜನರು ಸೋಸಿನ ಮುಯ್ಯಕ್ಕೆ''
ಹಾದಿ ತುಂಬಿತು ಎಲ್ಲ ಬೀದಿ ತುಂಬಿತು
ಆದರದಿಂದಲೇ ಜನರು ಮೋದದಿ ಮುಯ್ಯಕ್ಕೆ''

ಜನರು, ಆಸೆಬಡುತಲೆ, ಮೋದದಿ ಎನ್ನುವ ಆಶ್ಚರ್ಯಭರಿತರಾಗಿ 'ಬಿಟ್ಟು ಕಣ್ಣು ಬಿಟ್ಟ ಹಾಗೆ' ನೋಡುತ್ತಿರುವಾಗಲೇ ಹಾದಿ, ಬೀದಿಗಳಲ್ಲಿ ತುಂಬಿಬರುವ ಜನಸಂದಣಿಯ ಭಾವ ಪರವಶತೆಯನ್ನಿಲ್ಲಿ ವ್ಯಕ್ತಪಡಿಸುತ್ತಾರೆ. ಅವ್ವ ನೀಡುವ ಉಪಮಾಲಾಂಕಾರ, ರೂಪಕಗಳಲ್ಲಿ ಅವರ ಕಾವ್ಯ ಸಾಮರ್ಥ್ಯದ ಜಾಣ್ಮೆಯನ್ನು ತೋರಿದ್ದಾಳೆ.

ಅವ್ವ ಬಳಸುವ ಗಾದೆ, ಶಕುನಗಳು ಗ್ರಾಮೀಣ ಪರಿಸರವನ್ನು ಪ್ರತಿಬಿಂಬಿಸುತ್ತವೆ. ಅದರಲ್ಲೂ ಮಹಿಳಾ ಅನುಭವದ ಪದಗಳನ್ನು ಬಳಸಿದ್ದಾಳೆ.

'ಈಚಲಗಿಡ'ದಲಿ ಗೋಕ್ಷೀರ ಕರೆದಂತೆ, 'ಒಳ್ಳೆ ಮನುಜರ ಸಂಗ ಮಲ್ಲಿಗೆ ಮುಡಿದಂತೆ', ಭಾವಜ್ಞರ ಸಂಗ ಶಾವಿಗೆ ಉಂಡಂತೆ, 'ಬಾಳ್ವೆವಂತರ ಸಹವಾಸ ಹೋಳಿಗೆ ಉಂಡಂತೆ ಎಂಬುದು ಪದ ಬಳಕೆಯಲ್ಲಿ ಅವರು ವಹಿಸಿದ ಕಾಳಜಿಯು ಅರ್ಥಪೂರ್ಣವಾಗಿದೆ.

ಗೋಕ್ಷೀರ-ಮಲ್ಲಿಗೆ ಮುಡಿದಂತೆ- ಭಾವಜ್ಞರ ಸಂಗ, ಬಾಳ್ವೆವಂತರ, ಒಳ್ಳೆಮನುಜರ ಸಂಗ ಎಂದು ನುಡಿಗಳಲ್ಲಿ ನೀಡಿರುವ ನೀತಿಯು ಸಾಮಾಜಿಕವಾಗಿ ನೈತಿಕತೆಯನ್ನು ಬೆಂಬಲಿಸುವುದು. ಬದುಕನ್ನು ಸಕಾರಾತ್ಮಕವಾಗಿಸುವ ಪ್ರಯತ್ನ, ಹಾಗೆಯೇ, ಅನೈತಿಕತೆಯನ್ನು ರೂಢಿಸಿಕೊಂಡವರ ನಕಾರಾತ್ಮಕವನ್ನು ವಿವರಿಸುವುದು. ''ಕ್ಷುಲ್ಲಕುಮತರ ಸಂಗ ನೀರುಳ್ಳಿ ತಿಂದ ಪರಿಯಂತೆ, ಭಾವನರಿಯದ ಪಾಮರರ ಸಹವಾಸ ಬೇವಿನ ಹಾಲು ಕುಡಿದಂತೆ, ಬಾಳುವಿಗೆಟ್ಟ ಅಧಮರ ಸಹವಾಸ ಹೇಳಲಾರದು ಮೆದ್ದಂತೆ'' ಎಂಬ ನಿಲುಕುವ ಅರ್ಥ ಸಾದೃಶ್ಯಗಳು ಅವ್ವನವರ ಕಾವ್ಯ ವೈಶಿಷ್ಟ್ಯವಾಗಿವೆ. ಸಾಮಾಜಿಕವಾಗಿ ನಂಬಿಕೆ, ರೂಢಿಯಲ್ಲಿರುವ ಗಾದೆ, ಶಕುನಗಳನ್ನು ಪ್ರಸ್ತಾಪಿಸುತ್ತಾರೆ. ಅವುಗಳ ವಿವರಣೆಗಳಲ್ಲಿ ಭಕ್ತ ಮನಸ್ಸಿನ ಆತಂಕ ನಿವಾರಣೋಪಾಯಗಳಾಗಿ, ಮನೋಸ್ಥೈರ್ಯ ನೀಡುವ ಸಂಗತಿಗಳಾಗಿ ಪ್ರಮುಖವಾಗುತ್ತವೆ.

'ವೀರಾಧಿವೀರ ಧರ್ಮರಾಯ ಮುಂದಕ್ಕೆ ಬರಲು ನೀರಿನ ಕುಂಭ ಎದುರಾಗ, ಎಲ್ಲರೂ ಹೊರಡಲು ಹಲ್ಲಿ ಮಾತಾಡಿದವು. ಫುಲ್ಲನಾಭನ ದಯ ಚೆಲ್ಲುವುದೆನುತಲಿ

'ಅಂಗಳಕೆ ಬರುತಿರೆ ಮಂಗಳ ವಾದ್ಯಗಳಾದವು. ಹಂಗ ಹಾರಿದವು ಎಡಗಡೆ, ಆಲಿಂಗನವ ಕೊಡುವೋನು ನಿಜವೆಂದು, ತೇರಿನ ಬೀದಿಯ ದ್ವಾರದಿ ಬರುತಿರೆ ಕಾಗೆ ಹಾರಿದವು ಬಲಗಡೆ, ರುಕ್ಮಿಣಿ ಸೂರಿ ಬಿಡುವಳು ದಯವನ್ನೇ, ಅಕ್ಕಿತೆಂಗಿನ ಕಾಯಿ ಚಿಕ್ಕ ನಿಂಬೆ ಹಣ್ಣು, ಅಚ್ಚ ಮಲ್ಲಿಗೆ ಎದುರಿಗೆ ರಮಿಯರಸು ನಕ್ಕು ನುಡಿವನು.

ಸಾವಿರ ಅಂಗಡಿ ಸಾಲಾದ ಬಾಜಾರ, ನೇರಳೆಹಣ್ಣು ಇದುರಾಗಿ, ಮತ್ತೆ ಶ್ರೀಗಂಧ ಎದುರಾಗಿ, ಬಾಳೆಹಣ್ಣು ಎದುರಾಗಿ ರಂಗಯ್ಯ ಕೇಳುವನು ಕ್ಷೇಮ ಕುಶಲವ ಮುಂತಾದವುಗಳು ಗಾದೆಗಳು ಸಹ ನಿರರ್ಗಳವಾಗಿ ಬಳಕೆಯಾಗಿವೆ. 'ಒಬ್ಬ ರುಕ್ಮಿಣಿ ನಿನ್ನ ಮುಂದೆ ಗುಬ್ಬಿ ಕಾಗೆ ಹಿಂಡು, ಕಬ್ಬೆಕ್ಕು, ಕೋಳಿ ನೆರೆದಾವ, ಅತ್ತಿಗೆ ನಿನ್ನ ಮೈಗೆ ಹತ್ಯಾವ ರುದ್ರಾಕ್ಷಿ ನೆತ್ತಿಯ ಮ್ಯಾಲೆ ಜಡದಾವ ಎತ್ತ ನೋಡಿದರೂ ಜನರಿಲ್ಲ, ಪುನುಗಿನ ಪರಿಮಳ ಬಿನುಗು ಚೆಕ್ಕಿಗೆ ಉಂಟೆ

ಗಿಳಿಯಂಥ ಕಳೆಯು ಹೊಳೆಯ ಬಲ್ಲುದೆ ಗುಬ್ಬಿ,
ಓಡಿ ಬಂದವಳು ಒಳಗೆ ಸೇರಿ ಮಾತಾಡಳು, ನೋಡಳು,
ಬಾಳುವರ ಮನೆ ಮುಂದೆ ಕೋಳಿ ಕೂಗಿದಂತೆ

ಹೆಣ್ಣು ಕೊಟ್ಟವನಿಗೆ ಕಣ್ಣು ಕಾಣದು, ಮಗನ ಮಗನು ಬಲು ಕೊಂಡೆಗಾರನು, ಹೆಣ್ಣಲ್ಲ, ಗಂಡಲ್ಲ, ಬಣ್ಣವಿಷ್ಟ್ಯಾಕೋ, ಹೊರಗಿನಿಂದ ಬಂದಳು ತಿರುಗಲ ತಿಪ್ಪಿಯು, ಹೆರವರಿಗುಪಕಾರಿ ಮನೆಗೆ ಮಾರಿ.

ಬೂಟಕ ಗುಣದವರ ಪಾಟು ಬಿಡಿಸುವಿತಾಸು, ನಿಂದಕರನ ತಾಸು ನಿಂದಿಸೋದುಚಿತ, ಹೆಣ್ಣು ನಮ್ಮಿಬ್ಬರ ಕಣ್ಣಿಗೆ ಇಂಗು ಹಚ್ಚಿ, ಅಲ್ಲವ ತಿಂದ ಇಲಿಯಂತೆ ಈ ಗಾದೆಗಳ ಅರ್ಥಬಳಕೆಗಳಲ್ಲೂ ಅಪ್ಪಟ ಗ್ರಾಮೀಣ ಪರಿಸರವನ್ನು ಬಿಡಿಸಿಡುತ್ತಿರುವುದು. ಅವ್ವ ತಮ್ಮ ಭಕ್ತಿ ಪ್ರಧಾನವಾದ ಹಾಡುಗಳಿಗೆ, ಮಹಾಭಾರತದ ಪ್ರಸಂಗಗಳನ್ನು ಬಳಸಿಕೊಂಡಿದ್ದಾರೆ. ಪರಿಸರ ಶಕುನ, ಗಾದೆಗಳು, ಹಾಡುಗಳಲ್ಲಿವೆ. ಅವರ ರಚನಾ ಶೈಲಿಗೆ ಆಡುಮಾತಿನ ಧಾಟಿಯು ಒಂದರೊಡನೊಂದು ಬೆರೆತಿರುವ ಸಮಭಾವಗಳು ಅವ್ವವರ ಪದಚಾತುರ್ಯವು ಭಾವ ಭಾಷೆಗಳೆರಡರ ಸಂಗಮವಾಗಿವೆ.

ವರ್ಣನೆಯ ಸಂದರ್ಭದಲ್ಲಿ ಗಣಪತಿಯ ಹೆಸರುಗಳು ನಾನಾ ರೀತಿಯಲ್ಲಿ ಬಳಸಿರುವುದು ಹೀಗೆ, 'ಶ್ರೀಕಂಠನ ವರಪುತ್ರ, ಏಕದಂತ, ವಿಘ್ನೇಶ, ಪಾರ್ವತೀತನಯ, ಗಣನಾಥ, ಗಣರಾಯ, ಗಣಪತಿ, ಹಸ್ತಿಮೊಗದವನು, ಆನೆಮುಖದವನು. ಚಿಕ್ಕ ಗಣಪ, ರುದ್ರಕುಮಾರ, ಸಿದ್ಧಿವಿನಾಯಕ ಶ್ರೀನಿವಾಸ ಪ್ರಿಯ, ಇಲಿವಾಹನ ಹಾಗೂ ಒಂದೇ ಪದದ ಅರ್ಥ ಬರುವಂತೆ ಅನೇಕ ಪದಗಳನ್ನು ರಚಿಸುವರು. ಮಥುರಾನಗರ ದ್ವಾರಕೆ, ಗೋಕುಲ, ನಗಧರಪುರ, ಕಡಲಶಯನಪುರ ಹಾಗೂ ಹಸ್ತಿನಾಪುರ,

ಅಯೋಧ್ಯಾನಗರ, ಕರಿಮೊಗಪುರ, ಸೊಂಡಿಲನಗರ ಇತ್ಯಾದಿಗಳು ಇದರೊಂದಿಗೆ ಅವರು ನೀಡುವ ವಾಹನ ಹಾಗೂ ವಾದ್ಯಗಳ ವರ್ಣನೆಯಲ್ಲಿಯೂ ತರ ತರದ ವೈವಿಧ್ಯ ತೋರಿದ್ದಾರೆ.

ರಥ, ಪಲ್ಲಕ್ಕಿ, ಕುದುರೆಯ ಸಾಲು, ರಥಗಳ ಸಾಲು, ಮ್ಯಾನಾದ ಕಾಲಾಳು ಮತ್ತು ಜೋಡು ನುಡಿಗಳಲ್ಲಿ ವರ್ಣನೆಯ ಮಹತ್ವ ಸಾರುವುದು, ಹಾರ-ಭಾರ, ಹಾಲು-ಮೊಸರು, ಮಂದಾರ-ಮಲ್ಲಿಗೆ, ಛತ್ರ-ಚಾಮರ, ತುರಗ-ತಂಬಟೆ, ಇಂದ್ರ ಚಂದ್ರ, ಮುತ್ತು-ಮಾಣಿಕ್ಯ, ಚಿಂದಿ-ಚಿಂದಿ, ಕೊಸರಿ-ಕೊಸರಿ, ಥೈ-ಥೈ ಮುಂತಾದವುಗಳಲ್ಲಿ ವರ್ಣಿತ ವಸ್ತುವನ್ನು ಅರ್ಥೈಸುವ ಪರಿ, ಕೇಳುಗರಲ್ಲಿನ ತನ್ಮಯತೆಯನ್ನು ಹೆಚ್ಚಿಸುವುದಾಗಿದೆ.

ಕಂಸಾಳೆ, ಕಾಳಿ, ಕರಣೆ, ಕೊಳಲು, ಗಂಟೆ, ಭೇರಿ, ಜಾಗಟೆ, ತಂಕ, ತಂಬೂರಿ ತಾಳಮದ್ದಲೆ, ತುತ್ತೂರಿ, ದುಂದುಭಿ, ನಾಗಸ್ವರ, ಶಂಖ, ಹೆಗ್ಗಾಳೆ, ಇನ್ನೂ ಹಲವು ವಾದ್ಯಗಳ ಬಳಸುತ್ತಾರೆ. ಭಕ್ತಿಯ ಆವೇಶಭರಿತ ವಾತಾವರಣಕ್ಕೆ ಸೂಕ್ತ ವರ್ಣನೆಯಾಗಿವೆ. ಆದರೆ ಅಬ್ಬರ ಸ್ವರಗಳು ವಾದ್ಯಗಳಲ್ಲಿ ಭಕ್ತಿ ಪರವಶಕ್ಕಿಂತ, ಭಾವ ಹೊರಹೊಮ್ಮಿಕೆಯಾಗಿರುವುದು. ಬಹುಶಃ ಎಲ್ಲ ಜನರ ಪಾಲ್ಗೊಳ್ಳುವಿಕೆಗೆ ಸಹಕಾರಿಯಾಗಿರಬೇಕು. ಮೆರವಣಿಗೆಯು ಸರ್ವೇಸಾಮಾನ್ಯವಾಗಿ ಅಬ್ಬರದ ಉಚ್ಚ ಸ್ವರಗಳು ಸಾಗುವಲ್ಲಿ ಎಲ್ಲ ಜನರ ಕುತೂಹಲವನ್ನು ಹಾಗೂ ಢಕ್ಕೆ, ಭೇರಿ, ತಂಬಟೆ, ತಾಳಮದ್ದಲೆ, ಕಾಳಿ, ತುತ್ತೂರಿ, ದುಂಧುಬಿ, ಶಂಖ, ಮುಂತಾದವು ಯುದ್ಧಕ್ಕೆ ಆಹ್ವಾನಿಸುವ ಯುದ್ಧದಲ್ಲಿ ಗೆಲುವನ್ನು ಪಡೆಯುವ ಉತ್ಸುಕತೆಯನ್ನು ತೋರುವುದು. ಇಲ್ಲಿ ಭಕ್ತಿಯ ಪರವಶತೆಗಿಂತಲೂ, ಗೆಲುವಿನ ಪ್ರಭಾವಕ್ಕೆ ಬಳಸಿಕೊಂಡ ವಾದ್ಯಗಳಲ್ಲಿ ಎದುರಾಳಿಯ ಮನದಲ್ಲಿ ಭಯವುಟ್ಟಿಸುವ, ಭೀತಿಯನ್ನು ತುಂಬುವಂತಿರುವುದು.

ಅವ್ವ ಈ ಪದಗಳಲ್ಲಿ ಆವೇಶಭರಿತವಾದ ಭಕ್ತಿಯನ್ನು ತೋರಿದ್ದಾರೆ. ಇದು ಅಂದಿನ ಯುದ್ಧ ಪರಿಸರದ ಪ್ರಭಾವವನ್ನು ತಿಳಿಸುತ್ತಿದೆ. ಅವರ ರಚನೆಗಳ ವರ್ಣನೆಗಳೆಲ್ಲವೂ ಒಂದು ಕಾಲದ ಸಾಂಸ್ಕೃತಿಕ ವಿಚಾರಗಳಿಗೆ ಧಾರ್ಮಿಕ ವಿಚಾರಗಳನ್ನು ಒಂದುಗೂಡಿಸುವ ಪ್ರಯತ್ನ. ಇದೊಂದು ಜೀವನ ಬರಹಗಳಲ್ಲಿ ಒಮ್ಮತವನ್ನು ಸಾಧಿಸಿಕೊಳ್ಳುವ ಹಂಬಲವೆನ್ನಬಹುದು. ತಮ್ಮ ಕಲ್ಪನಾ ವರ್ಣನೆಗಳಿಗೆ ಜನಬಳಕೆಯ ಪರಿಕರಗಳನ್ನು ಸ್ವಾಭಾವಿಕ ಸಹಜತೆಯಲ್ಲಿ ತೊಡಗಿಸಿಕೊಂಡಿದ್ದಾರೆ.

''ಯಾವುದನ್ನೇ ವರ್ಣಿಸಲಿ ಹರಿದಾಸರು ಮನಮುಟ್ಟುವಂತೆ ವರ್ಣಿಸುತ್ತಾರೆ. ಅವರ ಪ್ರತಿ ವರ್ಣನೆಯಲ್ಲಿ ಔಚಿತ್ಯ ಪ್ರಜ್ಞೆಯಿರುತ್ತದೆ. ತನ್ಮಯತೆಯಿರುತ್ತದೆ. ಇಂತಹ ಆಕರ್ಷಕ ವರ್ಣನೆಗಳು ಮತ್ತು ನಿರೂಪಣೆಯ ನೀತಿ ಅವರ ಕೃತಿಗಳ ಚೆಲುವಿನ ಮತ್ತೊಂದು ಮುಖ.''[೯] ಅವ್ವ ತಮ್ಮ ಹಾಡುಗಳಿಗೆ 'ಯಮಕ'ಗಳನ್ನು ಬಳಸುತ್ತಾ ಹಾಡಿನ ಲಯವನ್ನು ತಂದುಕೊಟ್ಟಿದ್ದಾರೆ.

''ಅಮ್ಮಮ್ಮ ರಮಿಯರಸು ಒಮ್ಮೊಮ್ಮೆ ಬೀದಿಲೆ
ಸುಮ್ಮನೆ ಸುಳಿವ ಯಮಕದಿ

..............

తన్న భకుతరన సలుహలి"

'యమక' బళకెయింద హాడిన గతియల్లి కుణియువ భావ, రూపకగళ బళకె యథోచితవాగి కావ్యద సొగసు ఇమ్మడిసిదె.

"థళకు, థళకు హొళెవో
తన్న బెళకు తుంబి భవనదొళు
ఝుళకు ఝుళకు బంద నమ్మ
జాణరంగన నోడువ బారె అంగనె"

అవ్వ తమ్మ కావ్యక్కె ఆడుమాతిన పదగళ సాలు సాలుగళన్నే బళసికొండిద్దారె. "ఇన్నాతర, యాతర, బలు, బాళ్వె, హొల్ల మాతు, మలెతు, కొయ్యురె, భోళె, అతి హరుక, ఊరుకేరి, ఉరిమారి, గరువు, జారతన, మాజుకొండ, బల్యొ, కేట్యొ, బిట్యొ..... మైగళ్ళ అడగి, గుద్దు, హొక్కు.... హీగె ముంతాద పద బళకెయింద తమ్మ హాడుగళిగె విశేషవాద జనమాన్యతెయన్ను దొరకిసికొండిద్దారె.

ఈ హాడుగళల్లిన సాంప్రదాయిక సంభ్రమవు, సాంస్కృతిక వస్తు, విశేషవాగి పరంపరెయల్లి సాగిబందిరువుదు. అవ్వనవర పదగళ సొగసు, వర్ణనెయ సడగర, భక్తి భావుకతెగళెల్లా ఒందెడె సేరి అవర రచనెయ హాడుగళు కౌటుంబిక పరిసరద హిరిమెయాగి మూడిబందివె.

సహజభావదొడనె నిర్మాణవాగువ సంగతిగళన్ను జనరిగె సరళవాగి అర్థమాడిసువ అవర జాణ్మెయు, ఆడుమాతిన ధాటియల్లి ఒదగిబందిరువుదు. ఆడుమాతిగె హదవాద సాంస్కృతిక మహత్వ నీడువుదర జొతెగె ధార్మికవాద విచారగళ సరళ వివరణెయిరువుదు. ఇదరొందిగె అవ్వ, సామాజిక సంగతిగళన్ను ఎళె ఎళెయాగి బిడిసిడువ, అల్లిన రీతి, నీతిగళ జనసామాన్యర అనుభవగళ చిత్రవన్నె ఒదగిసికొడవల్లి తమ్మ హాడుగళల్లి ప్రముఖవాగిసిద్దారె.

జనభాషెయల్లి రచితవాద హాడుగళు ఇందిగూ తమ్మ ఆకర్షణె కళెదుకొళ్ళదె మదువె ఇన్నితర సమారంభగళ శుభకాలద గీతెగళాగి మహిళెయర పారంపరిక ఆస్తియంతె పరిపాఠదల్లిరువుదు. అవ్వ, తమ్మ కావ్యదల్లి హాస్య, వ్యంగ్య మిశ్రిత, గాదె, శకునగళు ఎల్లవూ ఒందే భావద భక్తియల్లి తోరిద్దాళె. భక్తియ భావాభివ్యక్తియు మహిళా నెలెయిందలే నోడుత్తిరువుదు ప్రథమవాగిదె. కౌటుంబిక ప్రసంగగళల్లి తమ్మ భగవంతనన్నిట్టు,

ಸಿಂಗರಿಸಿ, ವ್ಯಂಗ್ಯ ವಿಡಂಬನೆಗಳಲ್ಲಿ ಹಾಸ್ಯಭರಿತ ಸನ್ನಿವೇಶಗಳ ನಿರ್ಮಿಸಿ, ಪಾತ್ರ ವಿಶೇಷಗಳ ಸೊಗಸಿಗೆ ಭಂಗ ಬರದಂತೆ ಹಿಡಿದಿಡುವ ಪದ ಸಾಮರ್ಥ್ಯ ಅವ್ವನವರದ್ದು.

ಒಟ್ಟಾರೆಯಾಗಿ, ಅವ್ವನವರ ಕೀರ್ತನೆಗಳು ಭಕ್ತಿ ಪರವಾಗಿವೆ. ಬಾಲ್ಯದಲ್ಲಿಯೇ ವೈಧವ್ಯಕ್ಕೆ ಗುರಿಯಾಗಿದ್ದರೂ, ಅವರ ಹಾಡಿನ ಯಾವ ಸಂಗತಿಯಲ್ಲೂ ವೈರಾಗ್ಯಕ್ಕೆ ಎಡೆಕೊಟ್ಟಿಲ್ಲವೆಂದೇ ಹೇಳಬಹುದು. ಅತಿ ಚಿಕ್ಕವಯಸ್ಸಿನಲ್ಲಿಯೇ ಮಂಗಳ ಕಾರ್ಯಗಳ ಭಾಗವಹಿಸುವಿಕೆಯಿಂದ ದೂರವಿದ್ದರೂ, ಅಲ್ಲಿನ ಒಂದೊಂದು ಸಂಗತಿಗಳನ್ನು ವಿವರಿಸುವ ಧಾಟಿ, ವರ್ಣಿಸುವ ವೈಖರಿ ಅವರ ಜೀವನ ಪ್ರೀತಿಯನ್ನು ನಿಲುಕಿಸುತ್ತದೆ.

ವಿದ್ವತ್ಪೂರ್ಣ ಪಾಂಡಿತ್ಯ ಪಡೆದಿದ್ದರೂ, ಕನ್ನಡದ ಆಡುಮಾತಿನ ಧಾಟಿಗೆ ತಮ್ಮ ಕಾವ್ಯವನ್ನು ಒಗ್ಗಿಸಿಕೊಂಡಿದ್ದಾರೆ. ಅವರ ಭಾಷಾ ಪಾಂಡಿತ್ಯವು ಧರ್ಮ ವಿಚಾರಗಳ ಮಂಡನೆಗೆ ಮಾತ್ರ ಸೀಮಿತವಾಗಿಸಿ, ಜನಭಾಷೆಯ ವೈವಿಧ್ಯತೆಯನ್ನು ತಮ್ಮ ಹಾಡುಗಳಿಗೆ ಬಳಸಿಕೊಂಡಿರುವುದು. ಈ ದಿಸೆಯಲ್ಲಿ ಜನಭಾಷೆಯನ್ನು ಅದರದೇ ಶೈಲಿಯಲ್ಲಿ ಬಳಸಿ, ನಿರ್ಮಿಸಿಕೊಂಡ ಪದಲಾಲಿತ್ಯವು ತನ್ನದೇ ಆದ ನಿರೂಪಣೆ, ಶೈಲಿಯನ್ನು ರೂಪಿಸಿದ್ದಾರೆ. ಹಾಗೂ ಅವ್ವ, ನೀಡುವ ಅಲಂಕಾರದ ಆಭರಣಗಳ ಪಟ್ಟಿಯು ಓದುಗರ ಕುತೂಹಲವನ್ನು ಹೆಚ್ಚಿಸುತ್ತದೆ. ಶ್ರೀಮಂತ ಆಭರಣಗಳ ರೂಪ ವಿಶ್ಲೇಷಣೆ, ಅವುಗಳ ನಯವಾದ ಕುಸುರಿಕಲೆ, ಹಿತಮಿತವಾದ ಹೊಂದಾಣಿಕೆಯ ಆಭರಣಗಳ ಜೊತೆ ಇತ್ಯಾದಿ ಮತ್ತು ವಸ್ತ್ರ, ಸೀರೆಗಳ ಉಡುಗೊರೆಯಲ್ಲಿ ಸಂದರ್ಭಾನುಸಾರ ಬಳಸುವುದು.ಒಟ್ಟಾರೆಯಾಗಿ ಅವ್ವ ಭಾಷೆಯ ಸೊಗಸಿನಲ್ಲಿ ಹಿಡಿದಿಡುವ ಮಹಿಳೆಯರ ಭಾವಾವಲಯವು ವಿಶಾಲ ಪರಿಧಿಯಲ್ಲಿದ್ದು, ಅಲ್ಲಿ ಸೊಗಯಿಸುವ ವಿಚಾರಗಳು ಭಕ್ತಿ ವಿಷಯವಾಗಿ, ಬಹುಕಾಲ ಮನದಲ್ಲಿರುವುದು. ಅಲ್ಲಿನ ಆಕರ್ಷಕ ಸೆಳೆತವಿರುವುದು ಸಾಂಸ್ಕೃತಿಕ ವಿಚಾರಗಳಲ್ಲಿ. ಹೀಗೆ, ಅವ್ವ ಮಹಿಳಾ ಹರಿದಾಸರಲ್ಲಿ ಪ್ರಮುಖಳು, ಪ್ರಥಮ ಮಹಿಳಾ ಹರಿದಾಸರಾಗಿ ಸಾಂಸ್ಕೃತಿಕ ಮಹತ್ವವನ್ನು ದೊರಕಿಸಿಕೊಟ್ಟಿದ್ದಾರೆ. ಒಂದು ಮಹಿಳಾ ವರ್ಗದ ಓದುಗ/ ಹಾಡುಗರ ವಲಯವನ್ನು ಸೃಷ್ಟಿಸಿಕೊಂಡಿದ್ದಾರೆ.

**ಅಡಿಟಿಪ್ಪಣಿಗಳು**

೧. ಅಂಗಡಿ ಎಸ್.ಎಸ್., ದಾಸಸಾಹಿತ್ಯ ಶಬ್ದಶಿಲ್ಪ, ಕನ್ನಡ ವಿ.ವಿ., ಹಂಪಿ, ೨೦೦೫, ಪು.೪

೨. ಬಸವರಾಜ ಸಬರದ, ಬಸವೇಶ್ವರ ಮತ್ತು ಪುರಂದರದಾಸ, ಪು.೧೭೧

೩. ಹಣಮಂತ ತಾಸಗಾಂವಕರ, ಬಾಗಲಕೋಟೆ ಜಿಲ್ಲೆಯ ಹರಿದಾಸ ಸಾಹಿತ್ಯ, ಪು.೨೬೩

೪. ಅಂಗಡಿ ಎಸ್.ಎಸ್., ದಾಸಸಾಹಿತ್ಯ ಶಬ್ದಶಿಲ್ಪ, ಕನ್ನಡ ವಿ.ವಿ., ಹಂಪಿ, ೨೦೦೫, ಪು.೭

೫. ಅಂಗಡಿ ಎಸ್.ಎಸ್., ದಾಸ ಸಾಹಿತ್ಯ ಮತ್ತು ಭಾಷೆ, ಕನ್ನಡ ವಿ.ವಿ., ಹಂಪಿ, ೨೦೧೦, ಪು.೧೦

೬. ಹಣಮಂತ ತಾಸಗಾಂವಕಾರ, ಗಲಗಲಿ ಅವ್ವನವರು, ಪು.೧೯, ೨೦

೭. ಅಂಗಡಿ ಎಸ್.ಎಸ್., ದಾಸ ಸಾಹಿತ್ಯ ಮತ್ತು ಭಾಷೆ, ೨೦೧೦, ಪು.೧೦೩

೮. ಅದೇ, ಪು.೧೦೩, ೧೦೪

೯. ಹಣಮಂತ ತಾಸಗಾಂವಕರರು, ಗಲಗಲಿ ಅವ್ವನವರು, ಪು.೨೦

೧೦. ಕಿಟೆಲ್ ಶಬ್ದಕೋಶ, (ಹಣಮಂತ ತಾಸಗಾಂವಕರರು, ಗಲಗಲಿ ಅವ್ವನವರು) ಪು.೧೨೭೪

೧೧. ಅಂಗಡಿ ಎಸ್.ಎಸ್., ವಚನ ಸಾಹಿತ್ಯ ಛಂದೋಲಯ, ೨೦೦೮, ಪು.೯೯

೧೨. ಅದೇ, ಪು.೧೧೯, ೧೨೦

೧೩. ಹಣಮಂತ ತಾಸಗಾಂವಕರರು, ಗಲಿಗಲಿ ಅವ್ವನವರು, ಪು.೧೬

೧೪. ಅಂಗಡಿ ಎಸ್.ಎಸ್., ದಾಸ ಸಾಹಿತ್ಯ ಭಾಷೆ, ೨೦೧೦, ಪು.೧೧೫, ೧೧೬

೧೫. ಅಂಗಡಿ ಎಸ್.ಎಸ್., ದಾಸ ಸಾಹಿತ್ಯ ಭಾಷೆ, ೨೦೧೦, ಪು.೧೪೨

೧೬. ಅದೇ, ಪು.೧೪೨

೧೭. ಮುರಳೀಧರ ಹೆಚ್.ಎನ್., ಈ ಪರಿಯ ಸೊಬಗು, ಪ್ರಸಾರಾಂಗ, ಕನ್ನಡ ವಿ.ವಿ., ೨೦೧೦, ಪು.೨೦೨

೧೮. ಅದೇ, ಪು.೨೦೨, ೨೦೩

೧೯. ಅಂಗಡಿ ಎಸ್.ಎಸ್., ದಾಸ ಸಾಹಿತ್ಯ ಭಾಷೆ, ಪ್ರಸಾರಾಂಗ, ಕನ್ನಡ ವಿ.ವಿ., ೨೦೧೦, ಪು.೨೪೮, ೨೪೯

೭

# ಉತ್ತರಕಾಲೀನ ಮಹಿಳಾ ಹರಿದಾಸರ ಮೇಲೆ ಗಲಗಲಿ ಅವ್ವನವರ ಪ್ರಭಾವ

ಕನ್ನಡ ಸಾಹಿತ್ಯದಲ್ಲಿ ಪ್ರಭಾವ, ಪ್ರೇರಣೆಗಳು ಧಾರ್ಮಿಕ, ಐತಿಹಾಸಿಕ, ಸಾಂಸ್ಕೃತಿಕವಾಗಿ ಹಲವು ಹಂತಗಳಲ್ಲಿ ಕಾಣಬರುತ್ತವೆ. ಸಾಹಿತ್ಯಕವಾಗಿ ಮುಖ್ಯಘಟ್ಟಗಳಾದ ವಚನಸಾಹಿತ್ಯ ಮತ್ತು ದಾಸಸಾಹಿತ್ಯದ ರಚನೆಗಳಲ್ಲಿ ಪ್ರಭಾವಗಳು ಒಂದರ ನಂತರ ಮತ್ತೊಂದು ಸಾಹಿತ್ಯಿಕವಾಗಿ, ಸಾಂಸ್ಕೃತಿಕ ವಿಚಾರಗಳು, ಧಾರ್ಮಿಕ ವಿಚಾರ ಸರಣಿಗಳಲ್ಲಿ ಪ್ರೇರಣೆ ಪಡೆದು ಪ್ರಭಾವ ಬೀರಿರುವುದು ಪರಂಪರೆಯಾಗಿ ನಡೆದುಬಂದಿರುವುದು.

ಈ ನಿಟ್ಟಿನಲ್ಲಿ ಭಾಷೆಯ ಬೆಳವಣಿಗೆಯು ಆಡುಮಾತಿನಿಂದ ಲಿಪಿಯಾಗುವ ಹಂತಕ್ಕೆ ಅನೇಕ ಪ್ರಭಾವಗಳು ಐತಿಹಾಸಿಕ, ಧಾರ್ಮಿಕ ಕಾರಣಕ್ಕಾಗಿ ವಿವರಿಸುವ ವಿಸ್ತರಿಸುವ ಭಾಷೆ ಕ್ರಮೇಣ ಪ್ರಮುಖ ಲಿಪಿಯಾಯಿತು. ರಾಜಾಶ್ರಯದಿಂದ ಕನ್ನಡಭಾಷೆಯು ಜೈನಧರ್ಮದ ಪ್ರಭಾವಕ್ಕೊಳಪಟ್ಟು ವಿಸ್ತಾರವಾಯಿತು. ಮುಂದಿನ ೧೨ನೇ ಶತಮಾನದ ವಚನಕಾರರು ದೇಸಿ ಶೈಲಿಗೆ, ಆಡು ಮಾತಿಗೆ ಪ್ರಾಶಸ್ತ್ಯವಿತ್ತು, ಸರಳ ಭಾಷೆಗೆ, ಆಚರಣೆಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿತ್ತರು.

ಈ ಪ್ರಭಾವಕ್ಕೆ ಕರ್ನಾಟಕದಲ್ಲಿ ಹರಿದಾಸ ಸಾಹಿತ್ಯವು ಒಳಗಾಯಿತು. ಪುರಂದರ ದಾಸರ ಕಾಲಕ್ಕೆ ಅತ್ಯಂತ ಉನ್ನತ ಸ್ಥಿತಿಯಲ್ಲಿದ್ದು, ಕರ್ನಾಟಕದಾದ್ಯಂತ ದಾಸಸಾಹಿತ್ಯವು ಧರ್ಮಪ್ರಚಾರಕ್ಕಾಗಿ, ಜನಸಾಮಾನ್ಯರಲ್ಲಿ ಭಕ್ತಿಯ ಮೂಲ ಕಾರಣವಾಗಿ ಹರಡಲಾರಂಭಿಸಿತು. ಅನಂತರದ ಹಲವು ವರ್ಷಗಳಷ್ಟು ಕಾಲದಲ್ಲಿ ದಾಸ ಸಾಹಿತ್ಯವು ತನ್ನ ಧಾರ್ಮಿಕ ಕ್ಲಿಷ್ಟ ಆಚರಣೆಗಳಿಂದ ಜನಸಾಮಾನ್ಯರಿಂದ ಅನೇಕ ರಾಜಕೀಯ, ಧಾರ್ಮಿಕ ಕಾರಣಗಳಿಂದ ದೂರವಾಯಿತು. ಇಂತಹ ಸಂದಿಗ್ಧ ಸಮಯದಲ್ಲಿ ಮಹಿಳೆಯರ ದಿನನಿತ್ಯದ ಕೆಲಸಗಳಲ್ಲಿ ದಾಸರ ಹಾಡುಗಳು ದೇವರ ಆರಾಧನೆಗಳಲ್ಲಿ, ಆಚರಣೆಗಳಲ್ಲಿ ಬಳಕೆಯಾಗುತ್ತಿದ್ದವು.

ಈ ಮೌಖಿಕ ಸಾಹಿತ್ಯ ಪರಂಪರೆ ಜನರಲ್ಲಿ ಪ್ರಬಲವಾಗಿ ಬೆಳೆಯಲು ಮಹಿಳಾ ಹರಿದಾಸರು ರೂಢಿಸಿದ ಕೀರ್ತನೆಗಳು ಕಾಲಕಾಲಕ್ಕೂ ಆಚರಣೆಯಲ್ಲಿ ಅನುಸರಣೆಯಾಗಿರುವುದು ಕಾರಣವಾಗಿದೆ.

"ವಚನಕಾರರ ನಂತರ ದಾಸರು, ತತ್ವಪದಕಾರರು, ಲಾವಣಿಕಾರರು, ಶಾಹೀರರು ಈ ಪರಂಪರೆಗೆ ಸೇರಿದವರಾಗಿದ್ದಾರೆ. ಇವರೆಲ್ಲ ರಾಜಾಶ್ರಯದಿಂದ ದೂರವಿದ್ದು, ಜನಸಾಮಾನ್ಯರ ಆಶ್ರಯದಲ್ಲಿ ಬೆಳೆದವರಾಗಿದ್ದಾರೆ."[೧] ಕರ್ನಾಟಕದಲ್ಲಿ, ಹರಿದಾಸ ಸಾಹಿತ್ಯದ ಪ್ರಭಾವವು ಪುರಂದರದಾಸರ ನಂತರದಲ್ಲಿ ಕಳೆಗುಂದಲಾರಂಭಿಸಿತು ಎನ್ನುವಾಗಲೇ ಪ್ರತಿಮನೆಯ ಗೃಹಿಣಿಯರ ಮನದಾಳದ ಭಾವನೆಗಳಲ್ಲಿ ಭಕ್ತಿಯ ರೂಪ ತಳೆದು ಹಾಡಾಗಿ, ಜೋಗುಳವಾಗಿ, ಕತೆಯಾಗಿ ಹರಿದು ಹರಿದಾಸ ಸಾಹಿತ್ಯವು ಮತ್ತೊಮ್ಮೆ ಮರುಜೀವ ಪಡೆಯಿತು. ಇದಕ್ಕೆ ಪೂರಕವೆಂಬಂತೆ ಮಹಿಳಾ ಹರಿದಾಸರು ತಮ್ಮ ಬದುಕಿನಲ್ಲಿ ಕಾಣುವ ಅನುಭವದ ನೆಲೆಯಲ್ಲಿ ವಿಸ್ತರಿಸಿದ ಭಕ್ತಿಸಾಹಿತ್ಯವು ಸ್ತ್ರೀಮೂಲದ ಸಾಂಸ್ಕೃತಿಕ ನೆಲೆಯಾಯಿತು. ಸಮಕಾಲೀನ ಸಮಾಜದ ರೀತಿ-ನೀತಿಗಳನ್ನು ನಂಬಿಕೆ ಆಚರಣೆಗಳಲ್ಲಿ, ಸಂಪ್ರದಾಯಗಳಲ್ಲಿ ಹರಿ ಸರ್ವೋತ್ತಮತೆಯನ್ನು ಸಾಂಸ್ಕೃತಿಕ ಸಂಗತಿಗಳಾಗಿ ಮಹತ್ವವಾಗಿಸಿದರು.

ಮಹಿಳಾ ಹರಿದಾಸರಲ್ಲಿ ಪ್ರಮುಖರು, ಪ್ರಥಮರು ಆದ ಗಲಗಲಿ ಅವ್ವನವರು, ಹರಿದಾಸ ಸಾಹಿತ್ಯದಲ್ಲಿ ಮಹಿಳಾವಲಯಕ್ಕೆ ವಿಶೇಷವಾಗಿ ಮೆರಗನ್ನಿತ್ತರು. ಅವರು ಹರಿಪಾರಮ್ಯತೆಗೆ ಮಹಿಳೆಯರ ಆಚರಣೆಗಳಲ್ಲಿ ಸಾಂಸ್ಕೃತಿಕ ಮಹತ್ವವನ್ನು ಗುರುತಿಸಿದರು. ತಮ್ಮ ಸುತ್ತಲಿನ ಪರಿಸರದಲ್ಲಿ ಪಾತಿವ್ರತ್ಯಕ್ಕೆ ಧಾರ್ಮಿಕ ವ್ರತಗಳಿಗೆ, ಸಂಪ್ರದಾಯಗಳಲ್ಲಿ, ನಂಬಿಕೆ, ಆಚರಣೆಗಳಲ್ಲಿ ಹರಿಪಾರಮ್ಯತೆಯನ್ನು ಹಾಡುವ ಮೂಲಕ ವೈಷ್ಣವ ಕವಯಿತ್ರಿಯರು ತಮ್ಮ ಭಕ್ತಿಯನ್ನು ಪಾಲಿಸಿದರು. ಗಲಗಲಿ ಅವ್ವನವರು ಆ ಕಾಲಕ್ಕೆ ಪ್ರಕಾಂಡ ವಿದ್ವಾಂಸರಾಗಿದ್ದರು. ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲೂ ಪಾಂಡಿತ್ಯ ಪಡೆದಿದ್ದರು. ಅವರ ಕನ್ನಡ ಪ್ರೀತಿ ಕಾವ್ಯ ರಚನೆಯ ಭಾಷೆಗೆ ಸ್ಫೂರ್ತಿಯಾಗಿರುವುದು. ಹಾಗಾಗಿಯೇ ಅವರ ರಚನೆಗಳು ಸಂಸ್ಕೃತ ಪ್ರಭಾವವಿದ್ದಾಗಲೂ ಭಾಷೆಯು ಕನ್ನಡವಾಗಿರುವುದು.

ಗಲಗಲಿಅವ್ವನವರು ತಮ್ಮ ಕಾಲಕ್ಕೆ ಹೆಚ್ಚು ಜನಪ್ರಿಯರು. ಪ್ರಕಾಂಡ ಬುದ್ಧಿಮತ್ತೆಗೆ ರಾಜರಿಂದಲೂ ಪ್ರಶಸ್ತಿ, ಪುರಸ್ಕಾರ ಪಡೆದಿರುವುದು ಅವರ ಜೀವಿತದ ಇತಿವೃತ್ತ ವಿಚಾರಗಳಿಂದ ತಿಳಿಯುವುದು.

ಅವ್ವನವರು ತಮ್ಮ ಕಾಲದ ಜನಸಮೂಹದಲ್ಲಿ ಉಸಿರಾಡುತ್ತಿದ್ದ ಹರಿಭಕ್ತಿಯಿಂದ ಕಾವ್ಯ ರಚನೆ ಮಾಡಿದ್ದಾರೆ. ಕಾವ್ಯ ರಚನೆಗೆ ಅವ್ವ ಆಯ್ದುಕೊಂಡ ವಸ್ತು, ವಿಷಯ, ನೆಲೆ ಮುಂತಾದವುಗಳೆಲ್ಲಾ ದಾಸಸಾಹಿತ್ಯದ ಪ್ರಭಾವ ಪ್ರೇರಣೆಗಳಿಂದ ದೊರೆತದುದು. ಅದರಂತೆಯೇ ಪ್ರೇರಣೆಗಳು ಅವರ ನಂತರದಲ್ಲಿ ಬರುವ ಉತ್ತರಕಾಲೀನ ಮಹಿಳಾ ಹರಿದಸಾರಲ್ಲೂ ಕಂಡುಬಂದಿರುವುದು. ಅವರು ರಚಿಸಿರುವ ಕೃತಿಗಳ ವಸ್ತು, ವಿಷಯ, ವರ್ಣನೆ, ಸಂಗತಿ, ಬಂಧ ಮುಂತಾದವುಗಳು ಸಾಂಸ್ಕೃತಿಕ ವಿಶಿಷ್ಟತೆ

ಪಡೆದು, ಅವರ ಧಾರ್ಮಿಕ ವಿಚಾರಗಳಿಗೆ ಮಹಿಳಾ ಹರಿದಾಸರು ಪ್ರಭಾವಕ್ಕೊಳಗಾಗಿರುವುದನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗಿದೆ.

ಮೊದಲಿಗೆ, ಅವ್ವನವರ ಪ್ರಭಾವಕ್ಕೆ ಅತ್ಯಂತ ಸನಿಹವಾಗಿದ್ದು, ಅವರ ಒಡನಾಟದಲ್ಲಿ ಜೀವಿಸಿದ ಭಾಗಮ್ಮ(ಪ್ರಯಾಗವ್ವ) ಅವ್ವನವರ ಆಪ್ತಳೂ, ಸಹಾಯಕಳೂ, ಶಿಷ್ಯೆಯಾಗಿದ್ದ ಭಾಗಮ್ಮ ಅವ್ವನವರ ಪ್ರಭಾವಕ್ಕೊಳಗಾಗಿ ಸಾಹಿತ್ಯ ನಿರ್ಮಾಣಕ್ಕೆ ತೊಡಗಿದಳು.

ಅಂದರೆ, ಅವ್ವನವರ ವ್ಯಕ್ತಿತ್ವದ ಪ್ರಭಾವಕ್ಕೊಳಪಟ್ಟ ಶಿಷ್ಯೆ ಎಂದು ಈಕೆಯನ್ನು ಗುರುತಿಸಬಹುದು.

೧.೧. ಭಾಗಮ್ಮ (ಪ್ರಯಾಗವ್ವ) : ಅತ್ಯಂತ ಕಟ್ಟುನಿಟ್ಟಿನ ಸಂಪ್ರದಾಯಸ್ಥ ಮನೆತನದಲ್ಲಿ ಬೆಳೆದವಳು, ಅವ್ವನವರ ಶಿಷ್ಯೆಯಾಗಿ ಅವರ ಪ್ರಭಾವದಿಂದ ತಾನು ಕೂಡ ಸಾಹಿತ್ಯ ನಿರ್ಮಾಣ ಮಾಡಿದ್ದರು ಎಂಬುದಾಗಿ ''ಡಾ.ಸರೋಜಿನಿ ಮಹಿಷಿಯವರು(ಕರ್ನಾಟಕ ಕವಯತ್ರಿಯವರು) ವಿಷಯ ಸಂಗ್ರಹಿಸಿದ್ದಾರೆ. ಅವ್ವನವರ ಜೊತೆ ಪ್ರವಾಸ ಸಂದರ್ಭದಲ್ಲಿ ಜೊತೆಗಿದ್ದ ಭಾಗಮ್ಮ ಕಾಶಿಗೆ ಹೋಗಿದ್ದಾಗ ಅಲ್ಲಿ ಕಾಲರ ಬೇನೆಗೆ ತುತ್ತಾದಳಂತೆ, ಆಗ ಅವ್ವನವರ ಆದೇಶದಂತೆ ಭಾಗವತದ ತೃತೀಯ ಸ್ಕಂದವನ್ನು ರಚಿಸಿ ರೋಗ ಮುಕ್ತಳಾದಂತೆ! ಎಂಬ ಐತಿಹ್ಯವನ್ನು ತಿಳಿಸಿದ್ದಾರೆ. ಭಾಗಮ್ಮಳ ಕೃತಿಗಳಲ್ಲಿ ಇದೊಂದೆ ಲಭ್ಯವಾದಂತದ್ದು.''[೨]

ಗಲಗಲಿ ಅವ್ವನವರಿಂದ ಪ್ರಭಾವಿತರಾದ ಅವರ ಶಿಷ್ಯೆ ಪ್ರಯಾಗವ್ವ(ಪ್ರಯಾಗಬಾಯಿ) ಅವರ ಜೊತೆಯಲ್ಲಿದ್ದು, ಆಗಾಗ ಅವ್ವ ಹೇಳುವ ಹಾಡುಗಳನ್ನು ಆಲಿಸಿ ತಾನು ಹಾಡುತ್ತಿದ್ದಳು. ಅವ್ವನವರ ಶಿಷ್ಯತ್ವವನ್ನು ವಿನಮ್ರವಾಗಿ ಸ್ಮರಿಸುವುದು.

''ಏಸು ಜನ್ಮದ ಪುಣ್ಯ ವಾಸವಾಯಿತೋ ವಿಷ್ಣುದಾಸ ದಾಸಿ ನಾನಾದೆ |
ಈ ಸಂಸಾರ ಕ್ಲೇಶವ ಕಳೆದು ಸುವಾಸನೆಯ ಕೊಡು ಗುರುರಾಜ ||''

ಎಂಬುದು ಆಕೆಯ ವಿನಮ್ರ ಪ್ರಭಾವವನ್ನು ತಿಳಿಸುತ್ತವೆ. ಪ್ರಯಾಗವ್ವ 'ಪಾಂಡುರಂಗ' ಅಂಕಿತದಿಂದ ಕೃತಿ ರಚನೆ ಮಾಡಿರುವಳು. ಅವ್ವನವರ ಆದೇಶದಂತೆ ಕೃತಿ ರಚನೆ ಮಾಡಿದ ಭಾಗಮ್ಮ ಭಾಗವತದ ಅತ್ಯಂತ ಕಷ್ಟತರವಾದ ತೃತೀಯ ಸ್ಕಂಧದಲ್ಲಿ ಕ್ಲಿಷ್ಟ ತತ್ವವಿಚಾರಗಳನ್ನು ಬಿಡಿಸುವ ಕೃತಿ ರಚನೆ ಮಾಡಿರುವಳು. ತತ್ವ ನಿರೂಪಣೆಯಲ್ಲಿ ಪ್ರಯಾಗವ್ವ ಆಸ್ಥೆ ತೋರಿದ್ದಾಳೆ. ಈಕೆಯ ಕೆಲವೇ ಕೃತಿಗಳು ದೊರೆತಿದ್ದು, ಅವುಗಳಲ್ಲಿ ಉರುಟಣೆ ಹಾಡು, ಭೂಮದ ಹಾಡು, ಹಸೆಕರದ ಹಾಡುಗಳನ್ನು ರಚಿಸಿದ್ದಾರೆ. ತಮ್ಮ ಹಾಡುಗಳಲ್ಲಿ ತತ್ವಜ್ಞಾನದ ತಿರುಳನ್ನು ಆಡು ಮಾತಿನ ಭಾಷೆಯಲ್ಲಿ ನಿರೂಪಿಸುವ ಭಾಗಮ್ಮ ದಾಸ ಸಾಹಿತ್ಯದ ದ್ವಿತೀಯ ಮಹಿಳಾ ಹರಿದಾಸರೆಂದು ತಿಳಿಯಲಾಗಿದೆ.

''ಕಾಶೀ ಪಟ್ಟಣದಲ್ಲಿ ವಾಸಾದ ಭಾಗಮ್ಮ ಕಟ್ಟಿದ ಪದ್ಯವನು
ಭೂಸುರರೆಲ್ಲ ಉದಾಸೀನ ಮಾಡದೆ ಲೇಸಾಗಿ ಪದ್ಯವನು ತಿದ್ದುವುದು||[೩]

ಈ ಸಾಲುಗಳಲ್ಲಿ ಅವ್ವನವರ ಶಿಷ್ಯೆ ಭಾಗಮ್ಮ ಕಾಶಿ ಪಟ್ಟಣ ಆ ಕಾಲಕ್ಕೆ ಸಂಸ್ಕೃತ ಪಂಡಿತರು ವಾಸವಾಗಿದ್ದ ಶ್ರೇಷ್ಠ ಪ್ರದೇಶವಾಗಿತ್ತು. ಅಂದಿನ ಭೂಸುರರು ಸಂಸ್ಕೃತ ಭಾಷಾ ಪೋಷಿತರಾಗಿದ್ದರು. ಅಂತಹ ಪ್ರದೇಶದಲ್ಲಿ ಕನ್ನಡದಲ್ಲಿ ಕೃತಿ ರಚನೆ ಮಾಡಿ ಉದಾಸೀನ ಮಾಡದೆ ಲೇಸಾಗಿ ಪದ್ಯವನು ತಿದ್ದುವುದು ಎಂದು ಹೇಳುವಲ್ಲಿ, ಪ್ರವಾಸದಲ್ಲಿದ್ದ ಗಲಗಲಿ ಅವ್ವನವರು ಅಲ್ಲಿನ ರಾಜಾಶ್ರಯದ ಭಾಷಿಕರ ಮಧ್ಯೆ ಕನ್ನಡ ಭಾಷೆಗೆ ದೊರಕಿಸಿದ ಮಾನ್ಯತೆಯನ್ನು ಅವರ ಶಿಷ್ಯೆ ಭಾಗಮ್ಮನ ಹಾಡಿನ ಸಾಲುಗಳು ಉದಾಹರಿಸುತ್ತಿರುವುದು.

''ದುರ್ಯೋಧನನ ಕೆಟ್ಟ ಮಾತುಗಳನ್ನು ಕೇಳಿದ ವಿದುರನು ಪಾಪ ಪರಿಹಾರಕ್ಕಾಗಿ ತೀರ್ಥಯಾತ್ರೆಗೆ ಹೊರಟನು. ದಾರಿಯಲ್ಲಿ ಅವನಿಗೆ ಉದ್ಧವನೆಂಬುವನು ಸಿಕ್ಕಿದನು. ವಿದುರನು ತನಗೆ ಹರಿಚರಿತ್ರೆಯನ್ನು ಹೇಳಬೇಕೆಂದು ಕೋರಿದಾಗ, ಆ ಕಾರ್ಯ ಮಾಡಲು ಮೈತ್ರೇಯ ಋಷಿ ಶಕ್ತನಾದವನೆಂದು ಉದ್ಧವ ಉತ್ತರವಿತ್ತ ಮೈತ್ರೇಯರಿಂದ ಹರಿಯ ಚರಿತ್ರೆಯನ್ನು ತಿಳಿಯುವುದೇ ಇಲ್ಲಿನ ಪ್ರಧಾನ ವಸ್ತು. ಭಾಗವತ ನಾಮಸಂಕೀರ್ತನೆಯೇ ಈಕೆಯ ಮುಖ್ಯೋದ್ದೇಶವಾಗಿತ್ತು ಎಂಬುದು ಈಕೆಯ ಕಾವ್ಯದಿಂದ ಸ್ಪಷ್ಟವಾಗುವುದು.''[೨] ಪ್ರಯಾಗವ್ವ, ಭಾಗಮ್ಮ ಎಂಬ ಹೆಸರಿನಿಂದಲೂ ದಾಸ ಸಾಹಿತ್ಯದಲ್ಲಿ ದ್ವಿತೀಯ ಮಹಿಳಾ ಹರಿದಾಸರೆನಿಸಿಕೊಂಡಿದ್ದಾಳೆ.

ಗಲಗಲಿ ಅವ್ವನವರ ಶಿಷ್ಯೆಯಾಗಿದ್ದ ಭಾಗಮ್ಮನ ತತ್ವವಿಚಾರಗಳು ಅವ್ವನವರ ಪ್ರಭಾವಕ್ಕೊಳಗಾಗಿರುವುದು ಸಹಜವಾದುದು. ಆಕೆ, ಅವ್ವಳ ಆಜ್ಞಾನುಸಾರ ರಚಿಸಿದ ಭಾಗವತದ ತೃತೀಯ ಸ್ಕಂದವನ್ನು ಕನ್ನಡದಲ್ಲಿ ರಚಿಸಿದ ಹೆಗ್ಗಳಿಕೆಗೆ ಪಾತ್ರರಾಗಿದ್ದಾಳೆ. ಅವ್ವನವರು ಮುಂದಿನ ದಿನಗಳಲ್ಲಿ ಇತರೆ ಮಹಿಳಾ ಕೀರ್ತನ ಕಾರ್ತಿಯರಿಗೆ ಸಾಹಿತ್ಯ ನಿರ್ಮಾಣದ ಕಾರ್ಯಗಳಲ್ಲಿ ಅಪರೋಕ್ಷವಾಗಿ ಮಾರ್ಗದರ್ಶಿಯಾಗಿದ್ದಾರೆ.

### ೧.೨. ಗಲಗಲಿಅವ್ವ-ಹೆಳವನಕಟ್ಟೆ ಗಿರಿಯಮ್ಮ

೧೭ನೇ ಶತಮಾನದಲ್ಲಿ ಜೀವಿಸಿದ್ದ ಗಲಗಲಿ ಅವ್ವನವರ ಕಾಲದಿಂದ ಉತ್ತರಾರ್ಧದಲ್ಲಿ, ಅಂದರೆ ೧೭-೧೮ನೇ ಶತಮಾನದ ಮಧ್ಯದ ಕಾಲದಲ್ಲಿ ಜೀವಿಸಿರುವ, ಹೆಳವನಕಟ್ಟೆಗಿರಿಯಮ್ಮ ಎಂದೇ ಪ್ರಸಿದ್ಧಳಾದ ಕೀರ್ತನಕಾರ್ತಿಯು ಹರಿ-ಹರ ಭಕ್ತೆಯಾಗಿ ಹರಿದಾಸ ಸಾಹಿತ್ಯದಲ್ಲಿ ಪ್ರಮುಖಳೆನಿಸಿದ್ದಾಳೆ. 'ಹೆಳವನಕಟ್ಟೆ ರಂಗ' ಎಂಬ ಅಂಕಿತದಿಂದ ಕೀರ್ತನೆಗಳನ್ನು ರಚಿಸುತ್ತಾ ತನ್ನದೇ ಆದ ವಿಶಿಷ್ಟವಾದ ಕಾವ್ಯಕಥನಗಳನ್ನು, ಹರಿ-ಹರರಲ್ಲಿ ಬೇಧವೆಣಿಸಿದ ಭಕ್ತಿಪ್ರಧಾನ ಸಾಹಿತ್ಯ ರಚಿಸಿದ್ದಾಳೆ.

ಗಲಗಲಿ ಅವ್ವನವರು ಮಾಧ್ವಸಂಪ್ರದಾಯದ ಬ್ರಾಹ್ಮಣ ಕುಟುಂಬದಲ್ಲಿ ಜೀವಿಸಿದ್ದವರು. ಅವ್ವನವರಿಗೆ ವೇದಶಾಸ್ತ್ರಾಗಮಗಳ ಪೂರ್ಣಜ್ಞಾನವು ಅವರ ಕೌಟುಂಬಿಕ ಹಿನ್ನಲೆಯಿಂದ ಬಂದುದಾಗಿದೆ. ಅವ್ವ ರಚಿಸಿರುವ ಕೀರ್ತನೆಗಳ ಪ್ರಭಾವವು ಅವ್ವನ ಕಾಲದಲ್ಲಿ ಹಾಗೂ ನಂತರದ ವರ್ಷಗಳಲ್ಲೂ ಇತರೆ

ಮಹಿಳಾ ಹರಿದಾಸರ ಕಾವ್ಯದಲ್ಲಿ ಕಾಣಬಹುದು. ಆ ಕಾಲಕ್ಕಾಗಲೇ ಪ್ರಸಿದ್ಧ ಪಡೆದು, ಕ್ಷೇತ್ರ ಪರ್ಯಾಟನೆ ಮಾಡಿದುದರ ಫಲವಾಗಿ ಸುಂದರ ವರ್ಣನೆ, ಕಾವ್ಯಕ್ಕೆ ಮೆರುಗು ನೀಡಿವೆ. ಈ ವರ್ಣನೆಗಳಲ್ಲಿ ಹರಿಸ್ತುತಿ, ದಶಾವತಾರಗಳಲ್ಲೂ, ಭಕ್ತಿ ನಿವೇದನೆಯಲ್ಲೂ, ಹೆಳವನಕಟ್ಟೆ ಗಿರಿಯಮ್ಮನ ಕಾವ್ಯ, ಕೀರ್ತನೆಗಳಲ್ಲೂ ಅವ್ವನವರ ಪ್ರಭಾವವನ್ನು ಕಾಣಬಹುದು.

**ದಶಾವತಾರ ವರ್ಣನೆ**

**ಗಲಗಲಿ ಅವ್ವನವರ ಕೀರ್ತನೆ**

''ಬಿಡು ಬಿಡು ಸಣ್ಣ ಮಾರಿಯನ್ನು ನೀ ಮಾಡಬ್ಯಾಡ
ಬಡಿವಾರವ ಹೇಳಿಕೊಂಬುವುದೇನೂ
ಕಡುಭಾಗ್ಯ ಪುರುಷನಾಗೂ ನೀನು
ಎತ್ತಿಕೊಂಡ್ಹೋಗಿ ಮಡುವು ಸೇರಿಕೊಂಡಿ ಮತ್ತೇನೊ
ನಿನ್ನ ಕರಕರ ಹಲ್ಲು ತಿಂಬೊ ಸಿಟ್ಟು ಕೃಷ್ಣಯ್ಯ
ಬಿರುಗಣ್ಣು ಬಿಡುವ್ಹೋದ್ಯಾಕಿಷ್ಟು ರಂಗಯ್ಯ
ನಿನ್ನ ಉರಿಮಾರಿಗೆ ಅಂಜೊರೆಲ್ಲೊ ಅಷ್ಟು
ಧೀರ ಧನವಂತನಲ್ಲೊ ಸಾಕೊ ರಂಗಯ್ಯ
ನಿನ್ನ ತಗಿ ತಗಿ ಬಲುಲೀಲಾ ಕೈಯ್ಯ ಕೃಷ್ಣಯ್ಯ
ಸುಗುಣನೆಂತೆಂಬೊ ಮತಿಯಾದುದಕ್ಕೆ
ಜನರು ನಗದೆ ಸೈ ಸೈಯ ಎಂದಾರು ಬರಿಯ ಕೃಷ್ಣಯ್ಯ
ಧೀರ ಧನವಂತನಲ್ಲೊ ಸಾಕೊ ರಂಗಯ್ಯ
ಆದರೆ ವನ ದಿನಾರುವಸ್ತ್ರವನುಟ್ಟುಕೊಂಡಿ ಯಾಕೊ ಕೃಷ್ಣಯ್ಯ
ಚೋರನಂತಾಡಿಕೊಂಬಿ ಸಾಕೊ ರಂಗಯ್ಯ
ಇದ ಕೇಳಿದ ವೀರರೆಂಬುವರು ನಗುತಾರೊ ಕೃಷ್ಣಯ್ಯ
ವಸ್ತ್ರವಿಲ್ಲೆಂಬೊ ಎಚ್ಚರಿಕಿಲ್ಲೊ ರಂಗಯ್ಯ
ತೇಜಿ ಹತ್ತೇನು ಎಂದು ಬರುವಿಯಲ್ಲೊ ಕೃಷ್ಣಯ್ಯ
ಕತ್ತಿ ಕೈ ಶೂರನೆಂಬೊದೆಲ್ಲೊ ರಂಗಯ್ಯ
ರಾಮೇಶ ನಿನ್ನ ಹತ್ತಿಲಿದ್ದವರೆಲ್ಲ ನಗುವರೊ ಕೃಷ್ಣಯ್ಯ''[೫]

**ಹೆಳವನಕಟ್ಟೆ ಗಿರಿಯಮ್ಮನ ಹಾಡು**

''ಹೊಳೆವ ಮೈಯ್ಯವ ಕಲ್ಲುಹೊರುವ ಕಡಲೊಳಾಡುವ
ತಿಳಿಯ ಎರಡಂಗನೆ ತಿರಿವ ಪರಶುವಿಡಿವ ಕೋಡಗ
ಕುಲವನಾಳು, ಗೋವಕಾಯ್ವು ಕಾಂತೆಯರ ವ್ರತವ

ನಳಿವ ಅಶ್ವವನೇರಿ ಮೆರೆವನ್ಯಾರೆ ಅಮ್ಮಯ್ಯ
ಜಲವ ಪೊಕ್ಕು ದೈತ್ಯನ ಸಂಹರಿಸಿ
ಕಲಕಿ ಸಮುದ್ರವ ಕಾರಣಾಕಾಗಿ
ನೆಲಗಳ್ಳನ ಮರ್ದಿಸಿ ಹಿರಣ್ಯಾಕ್ಷನ
.............
..............
ನಿಲುವ ದಿಗಂಬರಧರ ರಾವುತನಾಗಿ
ಇಳೆಯೊಳು ಚರಿಸುವ ಈತ ಕಾಣೆ ಅಮ್ಮಯ್ಯ

ದಶಾವತಾರ ವರ್ಣನೆಗಳಲ್ಲಿ ಅವ್ವನವರನ್ನು ಅನುಸರಿಸುವಂತಹ ಸಾಲುಗಳು ಗಿರಿಯಮ್ಮನ ಹಾಡುಗಳಲ್ಲಿ ಕಾಣಬಹುದು. ಅಂತಹುದೇ ವರ್ಣನೆಗಳು ಹಾಡಿನ ಎರಡೆರಡು ಸಾಲಿನಲ್ಲಿ ವಿವರವಾಗಿಸುವ ಪರಿಯನ್ನು ನಾವು ಗಿರಿಯಮ್ಮನ ಕೀರ್ತನೆಗಳಲ್ಲಿ ನೋಡಿದರೆ, ಅವ್ವನವರ ಹಾಡುಗಳ ಜನಪ್ರಿಯತೆಯನ್ನು ತಿಳಿಯಬಹುದು.

**ಅವ್ವನವರ ಕೀರ್ತನೆ**

''ಅಚ್ಚ ಮುತ್ತಿನ ಸರಗಳನಿಟ್ಟು
ಕೃಷ್ಣ ಮಚ್ಚರೂಪದಿ ನಿಂತ ಕೋಲೆನ್ನಿ
ಹೇಮರತ್ನಾದಾರಭರಣಗಳನಿಟ್ಟು ಕೃಷ್ಣ
ಕೂರ್ಮರೂಪದಿ ನಿಂತ ಕೋಲೆನ್ನಿ
...........
ಕೃಷ್ಣ ವರಾಹ ರೂಪದಿ ನಿಂತ ಕೋಲೆನ್ನಿ

ಹೀಗೆ ಸಾಗುವ ಹಾಡಿನ ಕೊನೆಯ ಪಾದದವರೆಗೂ ಹರಿಯ ಹತ್ತವತಾರಗಳನ್ನು ಅವ್ವ ವರ್ಣಿಸಿದರೆ, ಗಿರಿಯಮ್ಮ ತನ್ನ ಕಾವ್ಯಕ್ಕೆ ಅವ್ವನವರು ವರ್ಣಿಸಿರುವ ದಶಾವತಾರಗಳ ವರ್ಣನೆಗೆ ಅಕ್ಕತಂಗಿಯರ ಮಧ್ಯೆ ನಡೆಯುವ ಪ್ರಶ್ನೋತ್ತರದಂತೆ ವಿಸ್ತರಿಸಿರುವುದು ಗಿರಿಯಮ್ಮಳ ಕಾವ್ಯ, ಜಾಣ್ಮೆ ಹಾಗೂ ಅವ್ವನವರ ಕಾವ್ಯ ಬಂಧದಂತೆಯೇ ನಿರೂಪಿಸಿರುವುದು ಅವ್ವನವರ ಪ್ರಭಾವವು ಗಿರಿಯಮ್ಮನಲ್ಲಿ ಸ್ಪಷ್ಟವಾಗಿ ಕಾಣಬಹುದು. ಅಷ್ಟಲ್ಲದೇ

''ಕೌತುಕ ಲಕುಮಿನಾಥನು ಒಲಿದದ್ದು
ಭೂತಳದೊಳಗಂಜೋದ್ಯಾತರ ಮಾತಿದು
ವೇದ ತಂದಾತನ ಪಾದವ ನೋಡಿ ನೋಡಿ

ಮೋದ ಬಟ್ಟನು ಬೊಮ್ಮ ಮಾಧವ ಅಂಜಿದ್ದು
ಮಂದಾರ ಗಿರಿ ಎತ್ತಿ ತಂದ ಅಮೃತವನು
ಆನಂದ ಬಟ್ಟನು ಬೊಮ್ಮ ಇಂದ್ರೈವರು ಅಂಜಿದ್ದು
ಧರಣಿ ತಂದಾತನ ವರಹ ಸುರರಿಗೆ ಸುಖವಿದು
ದೊರೆಧರ್ಮನ ಕಂಡು ಪರಮಭೀತನಾದ
ನರಸಿಂಹ ದೈತ್ಯನ ವಧಿಸಿಬಿಟ್ಟನೆಂದು
ಹರುಷವಾದನು ಬೊಮ್ಮ ಅರಸ ಅಂಜಿದ್ದು
ವಾಮನ ರೂಪಕ್ಕೆ ಕಾಮ ಮೋಹಿತರಾಗಿ
ಶಾಮ ವರ್ಣನ ಕಂಡು ಭೀಮ ಭೀತನಾದ
ಜ್ಞಾನಿಗಳು ಭಾರ್ಗವನ ಧೇನಿಸಿ ನಮಿಸೋರುವನೆಂಬೆ
............
ಚಲ್ವರಾಯನ ಗುಣ ಎಲ್ಲ ಮೋಹಿಸಬೇಕು
............
ಕೃಷ್ಣವತಾರಗೆ ಎಷ್ಟು ಮೋಹಿಸುವವರು
...............
ಬೌದ್ಧನ್ನ ಧೇನಿಸಿ ಸಿದ್ಧಿ ಪಡೆದವರೆಷ್ಟು

ಇಂತಹದೇ ವರ್ಣನೆಯಲ್ಲಿ ಗಿರಿಯಮ್ಮ ನಿರೂಪಿಸುವುದು ಹೀಗೆ,

**ಗಿರಿಯಮ್ಮನ ಹಾಡು**

''ಜಲದೊಳು ಪೊಕ್ಕು ವೇದವ ತಂದು ಅಜವನಿಗಿತ್ತು
ಬಲುಗಿರಿ ಕುಸಿಯಲು ಬೆನ್ನಿನಂದಲಿ ತಳೆದು
ನೆಲನ ಕದ್ದುಸುರನ ಕೊಂದು ಕಂಬದಿ ನಿಂದು
ಬಲಿಯ ದಾನವ ಬೇಡಿ
ಜಲ ಪರುಷವ ನೀಡಿ ಮತ್ತೆ ಮಾತೆಯ ಕಡಿದು
ಛಲದಿ ರಾವಣನ ಸಂಹರಿಸಿ ಸೀತೆಯ ತರಿಸಿ
ಬಲುಸತಿರನಾಳಿ ಬವುದ್ಧ ರೂಪವ ತಾಳಿ
ಅಲ್ಲದಶ್ವವೇರಿದ ಅತಿ ಚೆಲುವ ದೇವನ''[೬]

ಹೀಗೆ, ಅವ್ವನವರಲ್ಲಿ ವಿವರವಾಗಿ ಭಕ್ತಿಸಿರಿಸಂಭ್ರಮವಾಗಿ ವರ್ಣಿಸಿದ್ದರೆ, ಗಿರಿಯಮ್ಮಳಲ್ಲಿ ದಶಾವತಾರಗಳು ಭಕ್ತಿಯ ಹಿರಿಮೆಯಾಗಿ, ತೋರುತ್ತಿರುವುದು ಅವ್ವನವರ ಕಾವ್ಯಪ್ರಭಾವವು, ಗಿರಿಯಮ್ಮಳಲ್ಲಿ ಭಕ್ತಿಯ ಕಾರಣವಾಗಿ ಹಿರಿಮೆಯಲ್ಲಿ, ತೋರಿಕೊಂಡಿರುವುದು.

ವಿಷಯ ಆಯ್ಕೆ : ಇಲ್ಲಿ ಗಲಗಲಿ ಅವ್ವನವರಂತೆಯೇ, ಗಿರಿಯಮ್ಮಳು ಶ್ರೀಹರಿಯನ್ನು ಸ್ತುತಿಸಿದರು. ವಿಷಯ ಆಯ್ಕೆಯಲ್ಲಿ ಕೇಳಿ ತಿಳಿದ ವಿಷಯಗಳ ಕುರಿತು ಕಾವ್ಯ ರಚಿಸಿರುವುದು ಗಿರಿಯಮ್ಮ ತನ್ನ ಕಾವ್ಯದಲ್ಲಿ ಹರಿ-ಹರರಿಬ್ಬರಲ್ಲೂ ಭೇದವೆಣಿಸದೆ ಭಕ್ತಿಪ್ರಧಾನ ಕಥೆಗಳನ್ನು ಹೆಣೆದಿದ್ದಾಳೆ. ಹಾಗಾಗಿ ಗಿರಿಯಮ್ಮನ ಕೀರ್ತನೆಗಳ ವಿಷಯ ಆಯ್ಕೆಯಲ್ಲಿ ದಶಾವತಾರಗಳಲ್ಲಿ ಸಾಮ್ಯತೆಯನ್ನು ಗುರುತಿಸಬಹುದು.

**ನಂಬಿಕೆ ಆಚರಣೆಗಳು**

ಗಲಗಲಿ ಅವ್ವನವರು ತಮ್ಮ ಹಾಡುಗಳಲ್ಲಿ ನಂಬಿಕೆ ಆಚರಣೆಗಳ ಕುರಿತು ಮತ್ತು ಶಕುನ, ಗಾದೆ ಮಾತುಗಳನ್ನು ಯಥೋಚಿತವಾಗಿ ಬಳಸಿದ್ದಾರೆ.

''ಎಲ್ಲರು ಹೊರಡಲು ಹಲ್ಲಿ ಮಾತನಾಡಿದವು
ಅಂಗಳಕೆ ಬರುತಿರೆ ಮಂಗಳ ವಾದ್ಯಗಳಾದವು.
ತೇರಿನ ಬೀದಿಯ ದ್ವಾರದಿ ಬರುತಿರೆ
ಕಾಗೆ ಹಾರಿದವು ಬಲಗಡೆಗೆ
ಅಕ್ಕಿ ತೆಂಗಿನಕಾಯಿ ಚಿಕ್ಕ ನಿಂಬೆ ಹಣ್ಣು
ಅಚ್ಚಮಲ್ಲಿಗೆ ಎದುರಿಗೆ''

''ಶಕುನವೆ ಬಲು ಶಕುನವೆ ಸಖಿ ಕೃಷ್ಣನ
ಮುದ್ದು ಮುಖವ ಕಾಂಬುವೆನೀಗ
ಹಾಲು ಮೊಸರಿನ ಕುಂಭ ಮೇಲಾದ ಘೃತಬೆಣ್ಣೆ
ಸಾಲು ಸಾಲಾಗಿ ಎದುರಾಗಿ ಇಂದೀವರಾಕ್ಷಿ
ಜತ್ತಾಗಿ ದ್ವಾರಕೆಯ ಹತ್ತಿರೆ ಬರುತಿರೆ
ಮುತ್ತಿನ ಹೇರು ಇದುರಾಗಿ ಇಂದೀವರಾಕ್ಷಿ''[೭]

**ಗಿರಿಯಮ್ಮನ ಹಾಡುಗಳು(ಉದ್ದಾಲಿಕನ ಕಥೆ)**

''ವಿಷ್ಣು ಪೂಜೆಯ ಮಾಡಿದವರ ನಿಂದಿಸಿದೆನೊ
ಹೊದ್ದಿತೆನಗೆ ಅಪನಿಂದ್ಯ''

"ಓಲಗ ಹರಿದು ಭೂಪಾಲ ತಾ ಬರುತಿರೆ ಮಾರ್ಜಾಲ ಅಡ್ಡಗಟ್ಟಿದವು"
ವಾಯಸಂಗಳು ಎಡನಾದವು ಗೌಳಿಯು ರಾವಿನ ಮೇಲೆ ಚೀರಿದವು.
ತಾರೆಗಳುದುರಿದವು. ರಾಯನ ಎದುರಲಿ ಧೂಮಕೇತುಗಳುದಿಸಿದವು
ಏನಿದು ಅಪಜಯವನು ತಲೆ ರಾಯನು ಧ್ಯಾನಿಸಿ ಮುಂದೆ ನಡೆದನು''[೮]

ಇಂತಹ ನಂಬಿಕೆ, ಆಚರಣೆಗಳು ಗಲಗಲಿ ಅವ್ವನವರಲ್ಲಿ ಸಕಾರತ್ಮಕವಾಗಿ, ಮೂಡಿಬಂದಿವೆ. ''ಅಂಗಳ ಹೊರಡಲಿ ಮಂಗಳಾರತಿ ತಂದು ತುಂಬಿದ ಕೊಡ ಎರಡು ತಂದ ಅಂಗನೆಯರೆಲ್ಲರು

ಶುಭವಾಗೆನುತ, ಪುರದ ಬಾಗಿಲಲ್ಲಿ ದ್ವಯ ಹಂಸ ಕಂಡು, ಗರುಡನ ತೆಕ್ಕೆಯ ಕಂಡು, ಹಿರಿಯ ಬ್ರಹ್ಮರ ಕಂಡು ನರಿಗಳೆರಡರ ಕಂಡು ಶುಭವಾದವೆನುತ ನುಡಿದರು" ಎಂಬಿವು. ಜಯವ ತರುವ ನಂಬಿಕೆಗಳಾಗಿ ಶುಭ ಶಕುನಗಳನ್ನು ನುಡಿದರೆ, ಗಿರಿಯಮ್ಮಳ ಹಾಡುಗಳಲ್ಲಿ ಶಕುನಗಳು ಸುಖ/ದುಃಖ ಸೂಚಕವಾಗಿ, ಅಶುಭ ತರುವ ನಂಬಿಕೆಗಳಾಗಿ ತೋರಿದರೂ, ಕಡೆಗೆ ವಿಷ್ಣು ಪೂಜೆಯ ಮಾಡಲಾರದೇ, ಹರಿಪೂಜೆಗೊಳ್ಳುವರ ನಿಂದಿಸಿದುದಕ್ಕಾಗಿ ಎಂಬ ಅಭಿಪ್ರಾಯವಿಲ್ಲಿ ವ್ಯಕ್ತವಾಗುವುದನ್ನು ಗಮನಿಸಿದರೆ ವಿಷ್ಣು ಆರಾಧಕರ ಪ್ರಭಾವವನ್ನು ತಿಳಿಯಬಹುದು. ಅಂದರೆ ಅವ್ವನವರ ಶಕುನಗಳು ಗಿರಿಯಮ್ಮಳಲ್ಲಿ ಅಪಶಕುನಗಳಾಗಿ ರೂಪಾಂತರಿಸಿ ಭಕ್ತಿಯ ಕಾರಣವನ್ನು ಸ್ಪಷ್ಟಪಡಿಸುತ್ತಿರುವುದು. ಇದು ಅವ್ವನವರ ಪ್ರಭಾವವನ್ನು ಮನದಾಳದಲ್ಲಿ ನೆರವೇರಿಸಿದ ಭಕ್ತಿ ನಿರೂಪಣೆಯಾಗಿರುವುದು.

**ವರ್ಣನೆ:** ವರ್ಣನೆ ಎಂಬುದು ಕಾವ್ಯದ ಸೊಗಸು, ಸೌಂದರ್ಯವನ್ನು ಹೇಳುವುದು. ಇಂತಹ ವರ್ಣನೆಗಳು ಹರಿದಾಸ ಸಾಹಿತ್ಯದಲ್ಲಿ ಭಕ್ತಿ ನಿರೂಪಣೆಯಾಗಿರುವುದು ಮಹಿಳಾ ಹರಿದಾಸರಲ್ಲಿ ಹರಿಯನ್ನು ವರ್ಣಿಸುವ ಪರಿಯು ವೈವಿಧ್ಯವಾದುದು. ಗಲಗಲಿ ಅವ್ವನವರು ತಮ್ಮ ಹಾಡುಗಳಲ್ಲಿ ಮಾಡುವ ವರ್ಣನೆ ಹೆಂಗಳೆಯರ ಪ್ರೀತಿಯ ಆಭರಣಗಳಲ್ಲಿ, ಅಲಂಕಾರಿಕ ವಸ್ತ್ರಗಳಲ್ಲಿ ವಿಶೇಷವಾಗಿವೆ.

''ಮುತ್ತಿನ ಮಂಚದ ಹತ್ತಿಲೆ ಸಾಲಾಗಿ
ಹಸಿರು ಪಚ್ಚೆವ ಬಿಗಿದ ಕುಸುರು ಸಿಂಹಾಸನ
ರನ್ನ ಮಾಣಿಕ ಬಿಗಿದ ಹೊನ್ನಮಂಚಕೆ
ಚಿತ್ರ ವಿಚಿತ್ರದ ರತ್ನಗಂಬಳಿ ಮ್ಯಾಲೆ"
''ಥಳಕು ಥಳಕು ಹೊಳೆವೋ
ತನ್ನ ಬೆಳಕು ತುಂಬಿ ಭವನದೊಳು
ಝಳಕು ಝಳಕು ಬಂದ ನಮ್ಮ
ಜಾಣರಂಗನ ನೋಡುವ ಬಾರೆ ಅಂಗನೆ"'
ಗಿರಿಯಮ್ಮಳಲ್ಲಿ;
''ಕನ್ನಡಿಯ ಪಳಿದಳಿಪ ಕದಪು ಕಂಗಳು ಎಸೆಯೆ
ಕರ್ಣಕುಂಡಲ ಸಂಪಿಗೆಯ ನಾಸಿಕದ
ರನ್ನ ತುಟಿ ಝುಗಝುಗಿಸೆ ಕುಡಿಹುಬ್ಬುಗಳು ಎಳೆಯ
ಮನ್ಮಥನ ಚಾಪದಂತೆಸೆವ ಮೂರುತಿಯ ನೆನೆವ ನಾನು"
ಪ್ರಕೃತಿ ವರ್ಣನೆಗಳು ಬಹು ಸಾಮ್ಯವನ್ನು ಪಡೆದಿರುವುದು ಹೀಗೆ,

ಗಿರಿಯಮ್ಮನ ಹಾಡುಗಳು

''ಹಲಸು ನಾರಂಗು ಬೆರೆಸಿದ ಕಿತ್ತಳೆ
ಅರಿಶಿಣದ ತೋಪು ಎಲಿತ್ಯಾಟ

.........

.............

''ಬಾಳೆ ನಿಂಬೆ ದಾಳಿಂಬ ವನ ಎಲೆ ತೋಟ
ನೇರಲ ನಿಂಬೆ ಮಲ್ಲಿಗೆ ವನದೊಳು
ಅತ್ತಿ ಆಲದ ಮರ ಸುತ್ತ ಹೆದ್ದುಮ್ಮರಿ
ಉತ್ತತಿ ಬೆಳಲು ದಾಳಿಂಬ, ಉತ್ತಮ ಅಶ್ವತ್ಥ ಇಪ್ಪಿಯ ವನಗಳು''

.............

.............

**ಹೆ.ಗಿ** :ಯಾರಾಡಿಗಿಡಗಳು ಕ್ಯಾದೀಗಿವನಗಳು
ನಾಗ ಸಂಪಿಗೆಯ ತೋಪುಗಳು''
ಆಹಾರ ವಿಶೇಷತೆಗಳ ವರ್ಣನೆಗಳು

ಗ : ಅವ್ವ ತಮ್ಮ ರಚನೆಗಳಲ್ಲಿ ವಿವರಿಸಿರುವ ನೈವೇದ್ಯದ ಖಾದ್ಯಗಳು ಸಮೃದ್ಧಿಯಾದ ನವರಸಭರಿತ' ತುಂಬು ಜೀವನ ಪ್ರೀತಿಯನ್ನು ಸೂಸುತ್ತಿರುವವು.

''ಭೂಮಂಡಲಪತಿ ಮುಂದೆ ಮಂಡಲ ಮಾಡಿ
ಅನ್ನಭಾಂಡವ ತಂದು ಇಟ್ಟರು
ತುಪ್ಪ ಸಕ್ಕರಿಯಲಿ ಪಕ್ವಾದ ಭಕ್ಷ್ಯ
ಯಾಲಕ್ಕಿ ಕಸಕಸಿ ಮೇಲಾದ ಪಾಯಸ''
ಉಪ್ಪು ಉಪ್ಪಿನಕಾಯಿ ಹಪ್ಪಳ ಸಂಡಿಗೆ
ಒಪ್ಪುವ ಬುತ್ತಿ ಕಲಸನ್ನ
ಸಂಡಿಗೆ ಹಪ್ಪಳ ಮಂಡಗಿ ಗುಳ್ಳೋರಿಗೆ
ದಿಂಡು ಸೂರಣವು ಮೊದಲಾಗಿ
ಸೂಪ ಪರಮಾನ್ನ
ಕ್ಷೀರ, ಮಧು, ಘೃತ ಮೊದಲಾಗಿ ಬಡಿಸುವವರ''[೧೦]

**ಹೆ.ಗಿ** : (ಉದ್ಧಾಳಿಕನ ಕಥೆ)

''ಖಂಡ ಸಕ್ಕರೆ ನೊರೆಹಾಲು ಪರಮಾನ್ನವ ಕಂಡರೆ
ಮುಖದಿರುಹುವಳು
ತುರಿಗಾಯಿ ಕಡಬುಹಪ್ಪಳ ಬೆಲ್ಲ ಮಂಡಿಗೆ
ಎರೆಯಪ್ಪ ಅತಿರಸಗಳನ್ನು
ಹುರಿಗಡಲೆ ಸೊಸಲಡಸಿದ ಸಕ್ಕರೆ ಬುರುಡೆ

ಫೇಣಿಗಳ ಬಯಸುವಳು.......

''ಬಿಡಿ ಮುತ್ತಿನ ಹಸೆಯ ಮೇಲೆ ದಂಪತಿಗಳ ಒಡನೆ

ಭೋಜನಕೆ ಕುಳ್ಳಿರಿಸಿ

ಉಪ್ಪಿನೆಸರು ಕಾಯಿ ಪರಿಪರಿ ಶಾಕವು ಹಪ್ಪಳ ಬಾಳಕಗಳನು

ಅಪ್ಪಲು ಅತಿರಸ ಸೂಪಾಕ್ಷತಶಾಲ್ಯನ್ನ ಚಪ್ಪರದಲಿ ಬಡಿಸುವರು''[೧೧]

ಇಬ್ಬರು ಮಹಿಳೆಯರು ತಮ್ಮ ಪ್ರಾದೇಶಿಕ ರುಚಿ ವೈವಿಧ್ಯದ ತಿನಿಸುಗಳನ್ನು ಹೆಸರಿಸಿದ್ದಾರೆ. ಇವುಗಳಲ್ಲಿ ಬಹುತೇಕ ಸಿಹಿ ಖಾದ್ಯಗಳಂತೆ, ಉಪ್ಪಿನಕಾಯಿ, ಒಪ್ಪನ್ನ, ಕಲಸನ್ನ, ಬುತ್ತಿಗಳು ಸಾಲಿನಲಿ ಸೇರಿಸುವುದು ಅವರ ಸಾಂಸ್ಕೃತಿಕ ವಿಶೇಷಗಳೆನಿಸುತ್ತವೆ.

ಗಲಗಲಿ ಅವ್ವನವರ ಕಾವ್ಯವು ಭಕ್ತಿಯ ವಿಸ್ತಾರವನ್ನು ತೋರಿಸುವಂತೆಯೇ, ಅಂದಿನ ಸಾಮಾಜಿಕ ನಡೆ, ನುಡಿ, ಆಚರಣೆ, ನಂಬಿಕೆಗಳನ್ನು ವಿವರಿಸುವುದು. ಮುಂದಿನ ಹರಿದಾಸ ಮಹಿಳೆಯರಲ್ಲೂ ಅವು ಅನುಸರಣೆಯಾಗಿರುವುದನ್ನು ಹೆಳವನಕಟ್ಟೆ ಗಿರಿಯಮ್ಮಳ ಹಾಡುಗಳಲ್ಲಿ ಗಮನಿಸಬಹುದು. ಇನ್ನು ಸಂಪ್ರದಾಯಗಳು ವಿಶೇಷವಾಗಿ ಗಲಗಲಿ ಅವ್ವನವರು, ಕಟ್ಟುನಿಟ್ಟಿನ ಸಂಪ್ರದಾಯದ ಬ್ರಾಹ್ಮಣ ಕುಟುಂಬದಲ್ಲಿರುವ, ಆಕೆಯು ತನ್ನ ರಚನೆಗೆ ಸಂಪ್ರದಾಯಗಳನ್ನು ಬಳಸಿಕೊಂಡಿದ್ದಾರೆ. ಅವುಗಳು ಶುಭವಾಗುವ ಶಕುನಗಳು, ತಿಥಿ, ಮುಹೂರ್ತ, ಶುಭಕಾಲಗಳನ್ನು ತಿಳಿಯುವ ಸಂಗತಿ.

ಗಲಗಲಿ ಅವ್ವ

೧. ಮಿತ್ರೆಯರು ಬೃಹಸ್ಪತಿಗೆ ಮುತ್ತಿನ ಗದ್ದಿಗೆಯನಿಟ್ಟು

ಅರ್ಥಿಲೆ ಚರಣಕ್ಕೆರಗಿದರು ಬೃಹಸ್ಪತಿ

ಉತ್ತಮ ತಿಥಿಯು ಬರಬೇಕು.

ಎಲ್ಲ ನಾರಿಯರಿಗೆ ಬಲ್ಲಿದ ತಿಥಿಬೇಕು

ಚೆಲ್ವ ರಾಮೇಶ ನುಡಿದನು ಬೃಹಸ್ಪತಿ

ನಿಲ್ಲದೆ ತೆಗೆದ ಶುಭತಿಥಿಯೆ''[೧೨]

(ಹೆ.ಗಿ)೨. ''ಕೇಳಿ ವಾಲ್ಮಿಕನು ಬಹಳ ಸಂತೋಷದಲೆ

ವ್ಯಾಳ್ಯ ಮುಹೂರ್ತಗಳ ನೋಡಿದನು

ಶುಭವಾರ, ಶುಭತಿಥಿ, ಶುಭಯೋಗ ಶುಭಕರಣ

ಶುಭಲಗ್ನ, ಶುಭದ ನಕ್ಷತ್ರ

ಚಂದ್ರ ತಾರಾಬಲ ಅಮೃತ ಸಿದ್ಧಿಯೋಗವೂ

ಇಂದಿನ ದಿನಕರ ಲೇಸೂ''[೧೩]

ಇಲ್ಲಿನ ಮಹಿಳಾ ಹರಿದಾಸರಿಬ್ಬರೂ ಹರಿಯನ್ನು ಕಾಣುವ ತವಕವನ್ನು ಬೇರೆ ಬೇರೆ ಸಂದರ್ಭಗಳ ಮೂಲಕ ವಿವರಿಸಿರುವರು. ಆದರೂ, ಅವರ ಅಪೇಕ್ಷೆಯು ಹರಿಯನ್ನು ಕಾಣುವ ಕ್ಷಣವು ಶುಭ ದಿನ, ನಕ್ಷತ್ರ, ಯೋಗ, ತಿಥಿ, ಮುಂತಾದವುಗಳನ್ನು ಹೆಸರಿಸುವುದು ಹರಿಭಕ್ತಿಯ ಶ್ರೇಷ್ಠತೆಯನ್ನೇ ಹೇಳುವುದಾಗಿದೆ.

ಇನ್ನು ಗಲಗಲಿ ಅವ್ವನವರು, ಗಿರಿಯಮ್ಮಳ ಕಾಲಕ್ಕೆ ಜನಪ್ರಿಯರಾಗಿದ್ದುದು. ಆಕೆಯ ಮುಯ್ಯದ ಹಾಡುಗಳು ಜನಸಾಮಾನ್ಯರಲ್ಲಿ ರೂಢಿಯಲ್ಲಿರುವುದನ್ನು ತಿಳಿಯಬಹುದು. ಅವುಗಳಂತೆಯೇ, ಗಿರಿಯಮ್ಮಳ ಹಾಡಿನ ಬಂಧವು ಕೆಲವು ರಾಗ, ತಾಳ, ಲಯದೊಂದಿಗೆ ಹಾಡಿಸಿಕೊಳ್ಳುವ ಹಾಡುಗಳಾಗಿವೆ. ಕಥನ ಕಾವ್ಯಗಳಲ್ಲಿ ಪುರಾಣ-ಭಾಗವತ, ಮಹಾಭಾರತ, ರಾಮಾಯಣ ಸಂಗತಿಗಳನ್ನು ವಿಸ್ತರಿಸಿರುವುದು ಗಲಗಲಿ ಅವ್ವನವರಿಂದ ಆಕೆ ಪ್ರಭಾವಿತಳಾಗಿರುವುದನ್ನು ತಿಳಿಯಬಹುದಾಗಿದೆ. ಗಿರಿಯಮ್ಮನಳಂತೆ, ಗಲಗಲಿ ಅವ್ವನವರಿಂದ ಪ್ರಭಾವಿತಳಾದ ಮತ್ತೊಬ್ಬ ಮಹಿಳಾ ಹರಿದಾಸರು 'ಹರಪನಹಳ್ಳಿ ಭೀಮವ್ವ', 'ಭೀಮೇಶ ಕೃಷ್ಣ' ಎಂಬ ಅಂಕಿತದಿಂದ ಕೀರ್ತನೆ ರಚಿಸಿರುವ ಭೀಮವ್ವ ಸಹ ಬ್ರಾಹ್ಮಣ ಕುಟುಂಬದ ಹಿನ್ನಲೆಯಿಂದ ಬಂದವಳು. ಆಕೆಯ ವೈರಾಗ್ಯ ಭಕ್ತಿಯೆಡೆಗೆ ಸಾಗಿ ಬಂದಿದೆ. ಆದರೂ ಭೀಮವ್ವನವರ ರಚನೆಯಲ್ಲಿ ಬಳಸಿಕೊಂಡಿರುವ ಬಹುತೇಕ ಸಂಗತಿಗಳು ಅವ್ವನವರಿಂದ ಪ್ರಭಾವಿತವಾಗಿರುವುದನ್ನು ಗಮನಿಸಬಹುದು.

ವೈಷ್ಣವ ಧರ್ಮದ ಮಹಿಳೆಯರು ತಮ್ಮ ದಿನನಿತ್ಯದ ಕೆಲಸ ಕಾರ್ಯಗಳಲ್ಲಿ ಹರಿ ಸರ್ವೋತ್ತಮತೆಯನ್ನು ಹಾಡಿ, ಪಾಡಿ ಬದುಕಿನ ಕಷ್ಟಕಾರ್ಪಣ್ಯಗಳನ್ನು ನಿಭಾಯಿಸುವ ದಾರಿಕಂಡು ಕೊಂಡರು. ಹರಿದಾಸರು ಹಾಡುವ ಸಂಗತಿಗಳೆಲ್ಲಾ ಪೌರಾಣಿಕ ಹಿನ್ನಲೆಯುಳ್ಳವು, ಮಹಾಭಾರತ, ಭಾಗವತ, ರಾಮಾಯಣಗಳಿಂದ ಪಡೆದವುಗಳಾಗಿವೆ.

**ಹರಪನಳ್ಳಿ ಭೀಮವ್ವ** : 'ಈಕೆಯ ಕಾಲ ೧೮೨೩ನೇ ಇಸವಿ ಜುಲೈ ೭ನೆಯ ತಾರೀಖು.'[೧೪] ಗಲಗಲಿ ಅವ್ವನವರ ಕಾಲದಿಂದ ಸುಮಾರು ನೂರುವರ್ಷಗಳ ಅಂತರವಿದ್ದಾಗ್ಯೂ ಹರಪನಹಳ್ಳಿ ಭೀಮವ್ವರ ರಚನೆಯಲ್ಲಿ ಅವ್ವನವರ ಕಾವ್ಯ ಪ್ರಭಾವವನ್ನು ಕಾಣಬಹುದು. ಭೀಮವ್ವನವರು ತಮ್ಮ ಕಾವ್ಯಕ್ಕೆ ವರ್ಣನೆ, ವಿಷಯಆಯ್ಕೆ, ನಂಬಿಕೆ, ಆಚರಣೆ, ಸಂಪ್ರದಾಯ ಮುಂತಾದ ವಿಷಯಗಳಲ್ಲಿ ಹಾಗೂ ಮುಖ್ಯವಾಗಿ ದಶಾವತಾರಗಳಲ್ಲಿಯೂ ಅವ್ವನವರ ಪ್ರಭಾವವು ಅತ್ಯಂತ ಸ್ಪಷ್ಟವಾಗಿ ರೂಪು ತಳೆದಿರುವುದು. 'ದಶಾವತಾರ'ವು ಗಲಗಲಿ ಅವ್ವನವರಲ್ಲಿ ದ್ವಿಪದಿಯಲ್ಲಿ ಮೂಡಿ ಬಂದಿರುವಂತೆಯೇ ಭೀಮವ್ವನವರ ರಚನೆಯಲ್ಲಿ ಕಾಣುವುದು ಹೀಗೆ.

ಗಲಗಲಿ ಅವ್ವ
ಧರಣಿ ತಂದಾತನ ವರಹಾ ಸುರರಿಗೆ ಸುಖವಿತ್ತು

................

ನರಸಿಂಹ ದೈತ್ಯನ ವಧಿಸಿ ಬಿಟ್ಟನೆಂದು

..............

ವಾಮನರೂಪಕ್ಕೆ ಕಾಮ ಮೋಹಿತರಾಗಿ

...............

ಜ್ಞಾನಿಗಳು ಭಾರ್ಗವನ ಧೇನಿಸಿ ನಮಿಸೋರು

..............

ಚಲ್ವರಾಯನ ಗುಣ ಎಲ್ಲ ಮೋಹಿಸಬೇಕು
ನಲ್ಲ ದ್ರೌಪತಿ ದೇವಿಯ ವಲ್ಲಭರಂಜಿದ್ದು
ಕೃಷ್ಣವತಾರಗೆ ಎಷ್ಟು ಮೋಹಿಸುವರು.

...............

ಬೌದ್ಧನ್ನ ಧೇನಿಸಿ ಸಿದ್ಧಿ ಪಡೆದವರೆಷ್ಟು

.............

ಚೆಲುವ ರಂಗಯ್ಯನು ಕುದುರೆ ಏರಿ ಬರಲು
ಬುಧರು ನಮಿಸುವರು ಹೆದರ ಸಹದೇವನ"[೧೫]
(ಹರಪನಹಳ್ಳಿ ಭೀಮವ್ವ)
"ಭೂಮಿ ಬಗಿದನು ತನ್ನ ಕ್ವಾರೆಯಿಂದಲಿ

................

ಕಂದ ಕರೆಯಲು ಕಂಬದಿ ಬಂದು ಸಲಹಿದನೆಂದು

...............

ಕೊಟ್ಟ ದಾನವ ಬಲಿಯ ಕಟ್ಟಿ ಪಾಶದಿಂದವನ

..............

ಕೊಡಲಿ ಕೈಯ್ಯೊಳು ಪಿಡಿದ ಹಡೆದ ಮಾತೆಯ ಶಿರವ

....................

ಪತಿಯ ಸುತರನೆ ಬಿಟ್ಟವಶನ ವಸನವ

..................

ಬೌದ್ಧರೂಪದ ಸ್ತ್ರೀಯರ ಲಜ್ಜೆಗೆಡಿಸಿದನೆಂಬೊ

............

ಕಲಿಯ ಮನಸಿರೆ ಇವಗೆ ಕಲ್ಕ್ಯನೆಂಬೋರೊ"[೧೬]

ದಶಾವತಾರಗಳ ವರ್ಣನೆಗಳಲ್ಲಿ ಹಾಗೂ ಕೀರ್ತನೆಗಳ ಬಂಧನಗಳಲ್ಲಿಯೂ ಭೀಮವ್ವ ತನ್ನ ಕಾವ್ಯ ರಚನೆಗೆ ಹಿಂದಿನಿಂದ ಪ್ರಭಾವ ಪಡೆದಿರುವುದು ಸ್ಪಷ್ಟವಾಗುವುದು. ಇದರೊಂದಿಗೆ ವರ್ಣನೆ, ವಿಷಯ ಆಯ್ಕೆಯಲ್ಲಿಯೂ ಭೀಮವ್ವ ಗಲಗಲಿ ಅವ್ವನವರ ಕೀರ್ತನೆಗಳಲ್ಲಿನ ಅಲಂಕಾರ, ವರ್ಣನೆಗಳಿಂದ ಪ್ರಭಾವಗೊಂಡಿರುವುದು ಹೀಗೆ;

ಗಲಗಲಿ ಅವ್ವನವರು ವಿಶೇಷವಾಗಿ ಮುಯ್ಯದ ಹಾಡು, ಸೇತುಬಂಧನ ಹಾಡು, ಕೋಲಾಟದ ಹಾಡು ಮುಂತಾದವುಗಳನ್ನು ರಚಿಸಿದ್ದಾರೆ. ಅಂತೆಯೇ ಹರಪನಹಳ್ಳಿ ಭೀಮವ್ವ ಸಹ ತನ್ನ ಕಾವ್ಯಕ್ಕೆ ಪುರಾಣ, ಭಾಗವತ, ಮಹಾಭಾರತ, ರಾಮಾಯಣ ಇವುಗಳ ಸಂದರ್ಭಗಳಿಂದ ವಿಷಯ ಆಯ್ಕೆ ಮಾಡಿಕೊಂಡಿದ್ದಾಳೆ.

ಆಭರಣಗಳಲ್ಲಿ ವರ್ಣನೆಯಲ್ಲಿ ಸಾಮ್ಯತೆ : (ಗಲಗಲಿ ಅವ್ವ)

''ಹೊನ್ನವರೆ ಹೊಸಕಪ್ಪು ಬೆನ್ನಿನ ಮ್ಯಾಲಿನ ಹೆರಳು
ಕಿನ್ನರಿ ನಿನ್ನ ಬಲಗೈಯ್ಯಲಿ ಹಿಡಕೊಂಡು
ಖನಿ ಬಾ ನಮ್ಮ ವಚನಕ್ಕೆ
ಗುಜ್ಜಿ ಸರಸ್ವತಿ ಗೆಜ್ಜೆ ಸರಪಳಿಯಿಟ್ಟು
ವಜ್ರ ಮಾಣಿಕ್ಯದಾಭರಣ ಭೂಷಿತಳಾಗಿ
.............
ಹರದಿ ಸರಸ್ವತಿ ಸರಿಗೆ ಸರಪಳಿಯಿಟ್ಟು
ಜರದ ಸೀರೆಯನೆ ನಿರಿದುಟ್ಟು ಬಾರಮ್ಮ
''ಕಾಲಂದುಗೆ ಗೆಜ್ಜೆ ತೋಳಲೆ ತಾಯಿತ
..................
ಅಂದುಗೆ ಅರಳೆಲೆ ಬಿಂದುಲಿ ಭಾಪುರಿ
ಹಸ್ತ ಕಡಗ ಹರಡಿ ದೋರೆ ಹವಳ ಕಂಕಣ
..............
ಮುತ್ತಿನ ವಾಲೆ ಮೂಗುತಿ ಮುದ್ದು ಸುರಿಯುತ್ತ
............
ಚವರಿ ರಾಗಟೆ, ಘೋರ ಮುತ್ತಿನಹಾರ, ಪದಕ ಭಾರ ಧರಿಸುತ''
...........
ನಡುವಿಗೆ ಒಡ್ಯಾಣವಿಟ್ಟು ನಾರಿಯರೆಲ್ಲರೂ ತಮ್ಮ ಬಡನಡ
ಬಳಕುತ ಕೋಲ ಹೋಯಿದಾರಮ್ಮಯ್ಯ

ಉಟ್ಟ ಪೀತಾಂಬರ ಕಾಲಿಗಿಟ್ಟ ಗೆಜ್ಜೆಯು
ನಮ್ಮ ಧಿಟ್ಟರಮಿ ಅರಸನೆಂದು ಕೋಲ ಹೊಯಿದಾರಮ್ಮಯ್ಯ"[೧೭]

**ಹ.ಭೀಮವ್ವನ ಕೀರ್ತನೆ**

"ಉಟ್ಟ ಪೀತಾಂಬರ ಪಟ್ಟೆ ವೊಡ್ಯಾಣವದು
ಪುತ್ಥಳಿಸರ ಚಂದ್ರಹಾರ ಪದಕ
ಕಟ್ಟಾಣಿ ಸರಿಗೆ ಏಕಾವಳಿಯು ಕೊರಳಲ್ಲಿ
ಕಟ್ಟಿದಡ್ಡಿಕೆ ಮುತ್ತು ಕಮಲಾಕ್ಷಿಗೆ
ದೋರ ಕಂಕಣ ಹರಡಿ ಹಸ್ತ ಕಡಗವಿಟ್ಟು
ನಾಗಮುರಿಗೆವಂಕಿ ಒಲೆವಗೊಂಡ್ಯ
ಭಾರಿಬಾಜೂ ಬಂದು ಬಂಗಾರದ ಬುಟ್ಟಾ
ಹೆರಳು ಬಂಗಾರ ರಾಗಟೆಗೊಂಡ್ಯ ಕ್ಯಾದಿಗಿಯು
............
ಝೂಲಕ ಬುಗುಡಿ, ವಾಲೆ ಸರಪಳಿಯು
ಮುತ್ತಿನ ಗೊಂಚಲು ಸಾಲು ಕುಂದಣದಾಣಿ ಮುತ್ತಿನ ಮುಕರ
ಪಿಲ್ಯ ಕಾಲುಂಗುರವು ಲುಲ್ಲುರುಳಿ ಪೈಜಣವು
ಫುಲ್ಲಾಕ್ಷ ಭೀಮೇಶಕೃಷ್ಣನ್ನ ಸ್ಮರಿಸುತ"[೧೮]

ಆಹಾರ ಪದಾರ್ಥಗಳ ವಿಶೇಷತೆಯ ಪ್ರಭಾವವು ತೋರಿಕೊಂಡಿರುವುದು ಹೀಗೆ,

**ಗಲಗಲಿ ಅವ್ವನವರ ಕೀರ್ತನೆ**

"ಭಾವಜ್ಞರ ಸಂಗ ಶಾವಿಗೆ ಉಂಡಂತೆ
ಬಾಳ್ವೆವಂತರ ಸಹವಾಸ ಹೋಳಿಗೆ ಉಂಡಂತೆ
ತುಪ್ಪ ಸಕ್ಕರಿಯಲಿ ಪಕ್ವಾದ ಭಕ್ಷ್ಯ
ಯಾಲಕ್ಕಿ ಕಸಕಸಿ ಮೇಲಾದ ಪಾಯಸ
ಉಪ್ಪು ಉಪ್ಪಿನಕಾಯಿ ಹಪ್ಪಳ ಸಂಡಿಗೆ
ಒಪ್ಪುವ ಬುತ್ತಿ ಕಲಸನ್ನ
ಸಂಡಿಗೆ ಹಪ್ಪಳ ಮಂಡಗಿ ಗುಳ್ಳೋರಿಗೆ
ದಿಂಡು ಸೂರಣವು, ಸೂಪ ಪರಮಾನ್ನ ಮೊದಲಾಗಿ ಬಡಿಸುವವರ
ಚೆಲುವ ರಾಮೇಶನ ಉಪಚಾರ ಮಾಡುವ
ಸುದತೆಯರ ಸುಖಕೆ ಎಣೆಗಣೆ"[೧೯]

ಹರಪನಹಳ್ಳಿ ಭೀಮವ್ವನ ಕೀರ್ತನೆ

''ಮಂಡಿಗೆ ಗುಳ್ಳೋರಿಗೆಯು ಬುಂದ್ಯ ಚಕ್ಕುಲಿ ಕರ್ಜಿಕಾಯಿ
ಚೆಂದದ ಶಾಲ್ಯಾನ್ನ ಶಾವಿಗೆ ಫೇಣಿಗಳು ಎಣ್ಣೋರಿಗೆಯು
ಹಪ್ಪಳ ಸಂಡಿಗೆಯು ಶಾವಿಗೆ ಬಟ್ಟವಿ ಮಾಲತಿಯು ಗೌಲಿ
ಬಟ್ಟಲೋಳ ತುಂಬಿಟ್ಟು ಪರತಿ ಪಾಯಸಘೃತ ಸಕ್ಕರೆಯು
ಬಂದು ಭೀಮೇಶ ಕೃಷ್ಣ ಸಖರೊಂದಿಗೆ ಕುಳಿತರು ಕೃಷ್ಣೆಸಹಿತ''[೨೦]

ಹೀಗೆ ಆಹಾರ ಪದಾರ್ಥಗಳ ವರ್ಣನೆಯಲ್ಲಿ, ಉಡುಗೊರೆಯ ಆಭರಣಗಳಲ್ಲಿ, ಭೀಮವ್ವನವರು ಪ್ರಭಾವ ಹೊಂದಿರುವುದನ್ನು ಗಮನಿಸಬಹುದು. ಅದರಂತೆಯೇ ಭೀಮವ್ವಳ ಕಾವ್ಯದ ಸೊಗಸಿಗೆ ರುಕ್ಮಿಣಿ, ಭಾಮೆಯರ 'ಸವತಿ ಮತ್ಸರ' ಸಂಗತಿಯು ಅವ್ವನವರಿಂದ ಪ್ರಭಾವಿತರಾಗಿರುವುದನ್ನು ಗಮನಿಸಬಹುದು.

**ಗಲಗಲಿ ಅವ್ವ:** ''ಸುಗುಣಿಯರಿಬ್ಬರು ಬಂದು
ಹಗರಣ ಮಾಡಿದರವ್ವ
ನಗಧರನ ಮುಂದೆ ನಾಚಿಕೆ ಇಲ್ಲವ್ವ
ಎಷ್ಟು ಹೇಳಲಿ ಈಕೆ
ಎದೆಗಿಚ್ಚಿನವಳವ್ವ
...........
ಕೃಷ್ಣಗೆ ಕರೆದು ಕೊಟ್ಟಳು ವೀಳ್ಯವವ್ವ
ಕೆಟ್ಟ ರುಕ್ಮಿಣಿಯು ಕಲಹಗಾರುತಿಯವ್ವ
ಬಲು ಕಲಹಗಾರುತಿಯವ್ವ''

ಎಂಬುದು '೨೩' ನುಡಿಗಳಲ್ಲಿ ರುಕ್ಮಿಣಿ-ಸುಭದ್ರೆಯರ ಕಲಹ ಸಂವಾದವು ಅವ್ವನವರಲ್ಲಿ ಮೂಡಿಬಂದಿರುವುದು. ಹರಪನಹಳ್ಳಿ ಭೀಮವ್ವನವರ ರಚನೆಯಲ್ಲಿಯೂ ರುಕ್ಮಿಣಿ-ಭಾಮೆಯರ ಸಂವಾದವು ಹೀಗೆ ಮೂಡಿಬಂದಿದೆ.

''ಎಷ್ಟು ಹಣವ ನೀನು ಕೃಷ್ಣಗೆ
ಕೊಟ್ಟು ಕೊಂಡಿ ಹೇಳೆ
ದಿಟ್ಟತನದ ಮಾತಾಡೋ ರುಕ್ಮಿಣಿ ನಿನ್ನ
ಶ್ರೇಷ್ಟತನವೇನ್ಹೇಳೆ''
''ಹತ್ತು ಆರು ಸಾವಿರದಷ್ಟು
ಭಾರ್ಯೇರವೊಳಗೆ

ಸತ್ಯಭಾಮೆ ಉತ್ಕೃಷ್ಟ ಚೆಲುವೆಯೆಂದು
ಕೃಷ್ಣ ನಿನ್ನಲ್ಲಿಹನೆ"

ಎಂದು '೧೯' ನುಡಿಗಳಲ್ಲಿ ಭೀಮವ್ವ ರುಕ್ಮಿಣಿ-ಸತ್ಯಭಾಮೆಯರ ಸಂವಾದವನ್ನಿಲ್ಲಿ ರಚಿಸಿದ್ದಾರೆ. ಇಲ್ಲಿನ ಭಾವವು ಇಬ್ಬರು ಮಹಿಳಾ ಹರಿದಾಸರಲ್ಲೂ ಮೂಡಿಬಂದಿರುವುದು ಹೆಂಗಳೆಯರ ಬದುಕಿನ ವಿವರವಾದ ಸಂಗತಿಗಳಿಗೆ ಹೆಚ್ಚು ಒತ್ತುಕೊಟ್ಟು ರಚಿಸಿರುವರು. ಇವೆಲ್ಲದರ ಹಿನ್ನೆಲೆಯಲ್ಲಿ ಮೊದಲ ಮಹಿಳಾ ಹರಿದಾಸರಾದ ಗಲಗಲಿ ಅವ್ವನವರು ಇದಕೆ ಮುನ್ನುಡಿ ಬರೆದಿದ್ದಾರೆಂದು ಭಾವಿಸಬಹುದಾಗಿದೆ.

ನಂಬಿಕೆ, ಶಕುನ, ಆಚರಣೆಗಳನ್ನು ಭೀಮವ್ವನವರ ರಚನೆಗಳಲ್ಲಿ ಕಾಣಬಹುದಾಗಿದೆ. ಸಂಪ್ರದಾಯದ ಹಾಡುಗಳಲ್ಲಿ ಮಹಾಲಕ್ಷ್ಮಿ ಪೂಜೆ ಹಾಡು, ಮಂಗಳಗೌರಿ ಹಾಡುಗಳು ವಿಶೇಷವಾಗಿರುವುದು. ಆದರೆ ಅವ್ವನವರ ಕಾವ್ಯದ ವರ್ಣನೆ ಭೀಮವ್ವನವರ ವಸ್ತು, ಸಂಗತಿಗಳ ವಿವರಗಳನ್ನು ಕುರಿತು ಬರುವುದು ಇಲ್ಲಿ ಅವ್ವನವರ ಕಾವ್ಯ ಪ್ರಭಾವವು ಯಥೇಚ್ಛವಾಗಿರುವುದು.

ಹ.ಭೀ : "ಚಂದ್ರ ತಾರಾ ಬಲಗಳುಂಟು ಬಂದ ಶುಭ ನಕ್ಷತ್ರಯೋಗ
ಸೂರ್ಯ ಶುಕ್ರನ ಬಲಗಳುಂಟು ಮ್ಯಾಲೆ ಶುಭ ನಕ್ಷತ್ರಯೋಗ
ವಾರ ತಿಥಿಗಳ್ಯೊಯ್ಯವೆಂದು ಹೇಳಿ ಬೃಹಸ್ಪತಿ ಕುಳಿತಾಗ"
ಗಲಗಲಿ ಅವ್ವ : "ಭರದಿ ಕೃಷ್ಣನಂಘ್ರಿಗಳಿಗೆ ಎರಗಿ
ಬೃಹಸ್ಪತಿಯು ನಗುತ
ಬರುವೋದು ಚಂದ್ರನ ಬಲವ
ಹರಿಯೋ ತೆರಳೆಂದ
ಮತ್ತೆ ಪಾಂಡವರ ಗರುವ ಒತ್ತೇವೋ ಮೂಲೆಗೆ
ಈ ಹೊತ್ತೆ ಸೂರ್ಯನ ಬಲವ ಚಿತ್ತೈಸೆಂದನು
................
ಗುರುಬಲ ಎಂಬೋದು ಎಲ್ಲ ಹರದೆಯರಿಗೆ
ತೋರುತಿದೆ ಗರುವು ಮುರಿದು ಸುಭದ್ರೆಯ
ಬರುವಿರಮ್ಮಯ್ಯ"

ಉಡುಗೆ-ತೊಡುಗೆಯ ವಿಚಾರದಲ್ಲೂ ಬಹುಸಾಮ್ಯದ ಪ್ರಭಾವವನ್ನಿಲ್ಲಿ ನಾವು ಗಮನಿಸಬಹುದು.

(ಗ.ಅ) : "ಬೆಳಕಿನಂತೊಪ್ಪುವ ಥಳಥಳಿಸುವ ಜವಳಿ
ಅಂದವಾದ ಬಲು ಚಂದ ಚಂದದ ಜವಳಿ
ಸಾಸಿವೆ ಬಣ್ಣದ ಸೀರೆ ಕುಸುಬೆ ಬಣ್ಣದ ಕುಪ್ಪಸ
ಸುಳಿ ಬಳ್ಳಿಯಂತೊಪ್ಪುವ ಬಿಳಿ ಚೀಟಿನ ಜೂಲು

''ಅಕ್ಕರದಿಂದ ಹೊಸ ಚಿಕ್ಕ ಚೀಟಿನ ಜೂಲೂ
ಖಡ್ಡಿ ಪೈಠಣ ಸೀರೆ, ಅತ್ತಿಹೂವಿನ ಸೀರೆ, ಕುತನಿ ಕುಪ್ಪಸ
ಮೋತಿ ಚೂರಿನ ಸೀರೆ, ಜಾತಿ ಮುತ್ತಿನ ದಂಡೆ
ಸಾರಸನ ಸೀರೆ, ತೋರ ಮುತ್ತಿನ ದಂಡೆ
ಅಂಬುಜಾಕ್ಷಿಗೆ ತಕ್ಕ, ಗೊಂಬಿಪೈಠಣಿ ಸೀರೆ
ಸಾವಿರಕೆ ಬೆಲೆಯಾದ ಸೆಲ್ಯಾವಳಿ ಜವಳಿ''
(ಹರಪನಹಳ್ಳಿ ಭೀಮವ್ವ)
''ಕರಿಯ ಹೂವಿನ ಸೀರೆ, ಬಿಳಿದು ಹೂವಿನ ಸೀರೆ
ದ್ವಾರಮನಿ ಸೀರೆ, ಗೋಧಿ ಮಗ್ಗಿನ ಸೀರೆ
ಗುಬ್ಬಿ ಕಣ್ಣಿನ ಸೀರೆ, ಬಾಳೆಪಟ್ಟಿ ಸೀರೆ
ಬದನೆ ಬಣ್ಣದ ಸೀರೆ, ಸುರುತಿ, ಸುಗುತಿ ಬಣ್ಣದ ಸೀರೆ
ಕಾಡಿಗ್ಗಣ್ಣಿನ ಸೀರೆ, ಸಾಸ್ವೆ ಚುಕ್ಕೆ ಸೀರೆ, ಸರಪಳ್ಯೆಂಚಿನ ಸೀರೆ
ರೇಷ್ಮೆ ಚುಕ್ಕೆ ಸೀರೆ, ಕರಿಯ ಮಧುರೆ ಸೀರೆ, ಜರಮಗ್ಗಿ ಕುಪ್ಪಸ
ಕುರಡ್ಹುವಿನ ಸೀರೆ, ಕಡ್ಡಿ ಪೈಠಣಿ ಸೀರೆ, ಊದಿಬಣ್ಣದ ಸೀರೆ
ಮಾವಿಗೆ(ನ್ಗೆ?) ಸೀರೆ, ಪಪ್ಪಳಿ ಸೀರೆ, ಜರತಾರಿ ಸೆರಗಿನ ಮತ್ತಾರಿ ಪತ್ತಲ''[೨೦]
...........
ಹೀಗೆ ಮುಂದುವರೆಯುತ್ತದೆ.

ಹೀಗೆ ಸೀರೆಗಳ ಸಾಲುವಳಿಯ ವರ್ಣನೆಯೊಂದಿಗೆ, ಅಂದಿನ ಸಾಮಾಜಿಕ ಚಿತ್ರಣವನ್ನು ಹಿಡಿದಿಟ್ಟಿರುವುದು ಮಹಿಳಾ ಹರಿದಾಸರಲ್ಲಿ ವ್ಯಕ್ತವಾದ ಕೌಟುಂಬಿಕ ಪರಿಸರದ ಪರಿಚಯವಾಗಿರುವುದು ವಿಶೇಷವೆನಿಸುತ್ತದೆ. ಇದರೊಡನೆ ಭಾಗವತದ ಮತ್ತೊಂದು ಸುಂದರ ಸಂಗತಿಯ ಪ್ರಭಾವವು, ವ್ಯಕ್ತವಾಗಿರುವುದು ಹೀಗೆ

''ನಳನಾಕ್ಷಿಯರ ಮನ ಕೊಳಲೂದಿ ರಾತ್ರಿಲೆ
ಸೆಳೆದೆಲ್ಲೊ ಕಪಟ ಭಾವದಲೆ ಕೃಷ್ಣ
ಎಳೆಯ ಮಕ್ಕಳು ಗಂಡ ಉಳಿದ ಭಾಗ್ಯ ಬಿಟ್ಟು
ಅಳೆದೆಲ್ಲೊ ಅವರ ಒಗೆತನವ
ಕಂಜಾಕ್ಷ ಶ್ರೀಕೃಷ್ಣ ರಂಜಿಸಿ ಕೊಳಲೂದಿ
ಮಂಜುಳ ಸ್ವರಕೆ ಮೋಹಿಸುತ ಬಾಲೆ
''ಭಾವ ಮೈದುನರನ್ನ ಕೇವಲ ತುಚ್ಛಿಸಿ

ಧಾವಿಸಿ ಬಂದ ಬಾಲೆಯರ ಕೃಷ್ಣ
ತಂದೆ ತಾಯಿ ಬಂಧು ಬಳಗ ಜನರ ಬಿಟ್ಟು
ಚಿತ್ತ ಚಂಚಲವಾಗಿ ಎತ್ತಿಗೆ ಮುರವಿಟ್ಟು
ಮಂಗನ ಮರಿಯೆತ್ತಿ ಅಂಗಿಯ ತೊಡಿಸುತ
ರಂಗನ ಬಳಿಗೆ ಬಾರೆಂದು ಕಂದ
ಬೆಕ್ಕಿನ ಬಾಯೊಳಗೆ ಇಕ್ಕುತ ತುತ್ತನೆ
ಚಿಕ್ಕಕಂದಯ್ಯ ಉಣ್ಣೆನುತ ಬಾಲೆ
ಪಟ್ಟಿ ಮಂಚದ ಮೇಲೆ ಬಿಟ್ಟು ಕಂದನ ಬಾಲೆ
ತೊಟ್ಟಿಲ ತೂಗಲು ಭರದಿ ಬಾಲೆ
ಕಾಲಿನ ಗೆಜ್ಜೆಯು ಮ್ಯಾಲೆ ಕೊರಳಿಗೆ ಕಟ್ಟಿ
ಮೇಲಾದ ಸರ ಕಾಲಿಗ್ಹಾಕಿ ಬಾಲೆ
ಹಣೆಗೆ ಕುಂಕುಮ ಗಲ್ಲಕ್ಕೆ ಕಾಡಿಗೆ
ಚಲ್ವ ಫಣೆಗೆ ಅರಿಷಿಣವು ಬಾಲೆ"

(ಹ.ಭೀ) "ಇರುಳೇಯ ಮನೆಯಲ್ಲಿ ಕೊಳಲೂದೋ ಕಾಲಕ್ಕೆ
ನಳಿನಾಕ್ಷ ನಾವ್ಯಾಗೆ ಬಂದೆವೊ
ಕಾಲಿಗಿಡುವ ವಸ್ತು ಕರದಲ್ಲಿಟ್ಟುಕೊಂಡು
ವಾಲೆ ಮೂಗುತಿ ಹೆರಳಿಗೆ ಚುಚ್ಚಿ
ಹರಡಿ ಕಂಕಣ ಪಾದದ್ಹರಡಿನ ಮ್ಯಾಲಿಟ್ಟು
ಮುಡಿವ ಮಲ್ಲಿಗೆ ಕಿವಿಯಲಿ ಸುತ್ತಿ
ಬೆಣ್ಣೆ ಚಟ್ಟಿಗೆಯ ಬೆಕ್ಕಿನ ಮುಂದೆ ಸರಿಸೇವೊ
ಸಣ್ಣ ಕೂಸಿನ ನೆಲವಿನೊಳವಿಟ್ಟು
ಅಳವೋ ಮಕ್ಕಳನೆ ಆಕಳ ಕಣ್ಣಿಗೆ ಕಟ್ಟಿ ಕರು
ಗಳ ತೊಟ್ಟಿಲೊಳಗೆ ಇಟ್ಟ
ಮಂಗನ ಮರಿಗೆ ನಾವಂಗಿ ಟೊಪ್ಪಿಗೆ ಹಾಕಿ
ಬಂಗಾರ ಪದಕನ್ಹಾಕಿ"

ಹೀಗೆ, ಗಲಗಲಿ ಅವ್ವನವರ ಕಾವ್ಯ ಪ್ರಭಾವವನ್ನು ಭೀಮವ್ವನವರಲ್ಲಿ, ಎಳೆ ಎಳೆಯಾಗಿ ಕಾಣಬಹುದಾಗಿದೆ. ಮುಂದುವರಿದು ವನದ ವರ್ಣನೆ, ಕಾಯಿಪಲ್ಯಗಳ ವರ್ಣನೆ, ಸಂಪ್ರದಾಯಗಳ ಆಚರಣೆ ಎಲ್ಲವೂ ಹಿರಿಯ ಕೀರ್ತನಕಾರ್ತಿಯ ಸ್ಫೂರ್ತಿಯ ಸೆಳವಿನಿಂದ ರಚಿತವಾಗಿರಬೇಕು. ಒಟ್ಟಾರೆ,

ಮಾಧ್ವಮತದ ಹಿನ್ನೆಲೆಯಿರುವ ಮಹಿಳಾ ಹರಿದಾಸರು ಹನುಮ, ಭೀಮ, ಮಾಧ್ವರನ್ನು ಸ್ತುತಿಸುವ ಪರಂಪರೆಯನ್ನು ನಾವು ಅವ್ವನವರ ನಂತರದ ಮಹಿಳಾ ಹರಿದಾಸರಲ್ಲಿ ಕಾಣಬಹುದು.

(ಗಲಗಲಿ ಅವ್ವ) ''ಹನುಮ ಭೀಮ ಮಧ್ವಮುನಿರಾಯ
ಮಾರುತ ಘನ ಮಹಿಮೆ
ಹನುಮನ ಬಲಗೊಂಬೆ ಹರುಷದಲೆ
ನಮ್ಮ ತನುಮನ ಧನ ಈತಗೊಪ್ಪಿಸುತಲೆ
ರಾಣಿಗೆ ಮುದ್ರೆಯನಿಟ್ಟ ಜಾಣನೆನುತಲೆ
ಮುಖ್ಯಪ್ರಾಣ ಮುಯ್ಯಾ ಗೆಲಿಸೋ ಈ ಕ್ಷಣ ಎನುತಲೆ
ಕೋತಿಯ ಸ್ವರೂಪನಾದ ಈತನೆನುತಲೆ
ದೈತ್ಯ ಜಾತಿಯ ಸಂಹರಿಸಿ ಬಂದ ಖ್ಯಾತನೆನುತಲೆ
ಸೀತೆಯ ಮನೆಗೆ ತಂದ ಮಹಾತ್ಮನೆನುತಲೆ
ಈತಗೆ ಜೋಡ್ಯಾರು ಮುಂದೆ ಖ್ಯಾತನೆನುತಲೆ
ಕೃಷ್ಣನ ಸೇವೆಗೆ ಅತಿ ನಿಷ್ಠನೆನುತಲೆ
ದುಷ್ಟ ಕೌರವರ ಕೊಂದ ಶ್ರೇಷ್ಠನೆನುತಲೆ
ಶ್ರೀಶ ರಾಮೇಶಗೆ ಮುಖ್ಯದಾಸನೆನುತಲೆ
ವಾಸವಾದ ಬದರಿಯಲಿ ಮಧ್ವೇಶನೆನುತಲೆ''

ಹ.ಭೀ : ''ತಿರುವೀದಿಯಾ ಮೋರೆ ತಿರುವಿದಿಯಾ ಹನುಮಾ
ತಿರುವೀದಿಯಾ
ದಂಡಕವನ ಕೋದಂಡರಾಮರ ಪಟ್ಟ
ದ್ಹೆಂಡತಿ ಚೋರನ್ನತ್ತುರುಂಡ ನೋಡದೆ''
''ಬೊಮ್ಮಗಟ್ಟಿಯಲಿದ್ದ ನಮ್ಮ ಪ್ರಾಣೇಶನು ಹ-
ನುಮನೆಂಬುವ ಹರಿಭಜಕನೀತ
ರಮ್ಮಾರಮಣನಾದ ರಾಮಸೇವಕನಂಘ್ರಿ
ಒಮ್ಮೆ ನೋಡಲು ದೋಷದೂರವಾಗ
ನೋಡಿ ಎರಡು ಕರ ಜೋಡಿಸಿ ಮುಗಿದು ಕೊಂ
ಡಾಡುತೀತ ನಗುವ ಮಹಿಮೆಯನು...
.............

ಭೀತಿ ಇಲ್ಲದಲೆ ಭೀಮೇಶಕೃಷ್ಣ(ನ) ನಿಜ
ದೂತನೆನಿಸಿದ ಪ್ರಖ್ಯಾತನೀತ"

ಮತ್ತೊಂದರಲ್ಲಿ ಅವ್ವನವರ ಆರತಿ ಪದಗಳು, ಶಕುನಗಳು, ಪುರಾಣ ಸಂಗತಿಗಳು, ವರ್ಣನೆಗಳು ಎಲ್ಲವೂ ಭೀಮವ್ವನವರಲ್ಲಿ ಅಚ್ಚೊತ್ತಿದ ಭಾವ ಪ್ರಪಂಚದ ವಿಸ್ತಾರವನ್ನು ಕಾಣಬಹುದು.

## ೧.೩. ಗಲಗಲಿ ಅವ್ವನವರು-ಓರುಬಾಯಿ ಲಕ್ಷ್ಮೀದೇವಮ್ಮ

ಗಲಗಲಿ ಅವ್ವನರು ೧೭ನೇ ಶತಮಾನದ ಉತ್ತರಾರ್ಧದಲ್ಲಿ ಬಾಳಿ ಬದುಕಿದವರು ಅವರ ರಚನೆಗಳು ಮುಂದಿನ ಹಲವಾರು ವರ್ಷಗಳವರೆಗೂ ಮಹಿಳೆಯರಲ್ಲಿ ರೂಢಿಯಲ್ಲಿದ್ದವು. ಅದರಲ್ಲೂ ವೈಷ್ಣವ ಭಕ್ತಿಯ ಎಳೆ ಹಿಡಿದು ಸಾಗುವ ಕೀರ್ತನ ಕಾರ್ತಿಯರ ಕೀರ್ತನೆಗಳಲ್ಲಿ ಅವ್ವನವರ ಹಾಡಿನ ಸಾಮ್ಯತೆಗಳನ್ನು ಕಾಣುತ್ತೇವೆ. ಇದಕ್ಕೆ ಅವ್ವನವರ ಪದಲಾಲಿತ್ಯ ಹಾಗೂ ಪ್ರಸಂಗ ಆಯ್ಕೆಯೂ ಕಾರಣವಾಗಿವೆ. ಮಹಿಳೆಯರ ಬದುಕು ಕುಟುಂಬದ ರೂಢಿಗಳಲ್ಲಿ ವಿಸ್ತರಿಸಿರುವ ಅವರ ಅನುಕರಣೆಗಳು ಕೌಟುಂಬಿಕ ಭಕ್ತಿ ವಲಯವಾಗಿ ಮಾರ್ಪಟ್ಟಿರುವುವು. ಅಲಂಕಾರ, ಕುಟುಂಬ ನಿರ್ವಹಣೆಗಳು ಮೂಲ ನೆಲೆಯಿಂದಲೇ ಬಂದು, ಅದರಲ್ಲಿ ಮಹಿಳೆಯರ ಸೊಗಸಿನ ಅಲಂಕಾರಗಳು ಹರಿದಾಸ ಸಾಹಿತ್ಯದಲ್ಲಿ ಮೈತಳೆದಿರುವುವು. ೧. ದಶಾವತಾರವರ್ಣನೆ ೨. ವಿಷಯಆಯ್ಕೆ ಸಂಪ್ರದಾಯ, ನಂಬಿಕೆ, ಆಚರಣೆಗಳು, ಕೀರ್ತನೆಗಳ ಶಿಲ್ಪ ಮುಂತಾದವುಗಳು ಮಾಧ್ವ ಸಂಪ್ರದಾಯದ ಹಿನ್ನಲೆಯಲ್ಲಿ ರೂಪುಗೊಂಡಿವೆ.

ಈ ವಿಷಯಗಳ ಪ್ರಭಾವವು ಗಲಗಲಿ ಅವ್ವನವರಿಂದ ವಿಶೇಷವಾಗಿ ಓರುಬಾಯಿ ಲಕ್ಷ್ಮೀದೇವಮ್ಮನವರ ಕೀರ್ತನೆಗಳವರೆಗೂ ಕಾಣಬಹುದಾಗಿದೆ.

**ದಶಾವತಾರ ವರ್ಣನೆ**

ಗಲಗಲಿ ಅವ್ವನವರ ಕೀರ್ತನೆ

"ಕುದುರೆಯ ಮಾರಿಯ ಹೂವುಗಣ್ಣಿನ ವರನಿಗೆ
ಮದಗಜನೆ ಮನಸೋತು
...........ಮ್ಯಾಲಿನ್ನು
ಬದಲು ಮಾತಾಡಿ ಫಲವೇನು
ನಾರುವ ಮೈಯವ ನೀರೊಳು ಅಡಗಿದ
ಹಂದಿ ಮೈಯವನೆ ಮಹಾಕೋಪಿ
.......... ತಿರುತಿಂಬೊ
ಹಾರುವನ ಗೊಡವೆ ನಮಗ್ಯಾಕೊ

ಕೊಡಲಿಯ ಪಿಡಕೊಂಡು ಪಡೆದ ಮಾತೆಯ
ಕೊಂದೆ ಒಡಲಿಗಿಕ್ಕದಲೆ ಮಡದಿಯ
ಒಡಲಿಗಿಕ್ಕದಲೆ ಮಡದಿಯ ಕೊಂಡೊಯ್ದು
ಅಡವಿಗಟ್ಟಿದ ಮಹಾಮಹಿಮನೆ
ಜಾರಚೋರನೆಂದು ಜಗದೊಳು ಹೆಸರಾದಿ
ಅಪಾರವಾದ ವನಿತೆಯರು
............ಒಗೆತನಕೆ
ನೀರು ತಂದಿದ್ದ ಮಹಾಮಹಿಮನೆ
ಭಂಡಗಾರನಂತೆ ದೇಹ ಕಂಡಜನಕೆಲ್ಲ
ತೋರಿ ಪುಂಡಗಾರನಂತೆ ಹಯವೇರಿ'
ಪುಂಡಗಾರನಂತೆ ಹಯವೇರಿ ಹಾರಿಸುವ
ಲೆಂಡ ರಾಮೇಶನ ಅರಿವೆನೊ"[೨೨]

ಲಕ್ಷ್ಮೀದೇವಮ್ಮನವರ ಕೀರ್ತನೆ

"ನೀರೊಳಗೆ ಮನೆಯು ಮಾಡಿ ಒಡ್ಯಾಡೀ
ಕೋರೆಯನೆ ಮಸೆದು ಭೂಮಿಗೆ ಕಡೆದಾಡೀ
ಮೋರೆಯನು ಮುಚ್ಚಿ ಕೈಕಾಲು ತೂಗ್ಯಾಡೀ
ಘೋರ ರೂಪವ ಧರಿಸಿ ಬಲಿದಾನವನೇ ಬೇಡಿ
ಕೊಡಲಿಯನು ಪಿಡಿದು ಮಾತೆಯ ಶಿರವನೇ ಒಡೆದೂ
ಮಡದಿಗೋಸ್ಕರ ದಶಶಿರನ ಶಿರವತರಿದೂ
ತುಡುಗತನದಿ ಮೊಸರು ಗಡಿಗೆಗಳ ಒಡೆದೂ
ಮಡದಿಯರ ವ್ರತಭಂಗ ಮಾಡಿದೆಯೊ ಪಿಡಿದೂ
"ಹಯವನೇರಿದ ಹರಿಯು ಬಹುಜನರ ಪೊರೆಯೇ
ಚೆಲುವ ಮೂರುತಿ ತೊಟ್ಟಿಲೊಳು ಮುದ್ದು ಸುರಿಯೇ
ಪರಮ ಪುರುಷ ಸದ್ಭಕ್ತರ ಸಿರಿಯೇ
ಪವಡಿಸೋ ನರಸಿಂಹ ವಿಠಲಾ ಧೊರಿಯೇ ಲಾಲೀ"[೨೩]

ಇವುಗಳೊಡನೆ, ಅವ್ವನವರ ಕೀರ್ತನೆಗಳಂತೆಯೇ, ಒಂದೇ ನುಡಿಯಲ್ಲಿ ಅಂದರೆ ಸಂಗತಿಯನ್ನು ಪೂರ್ಣವಾಗಿಸುವಾಗ ದಶಾವತಾರ ವರ್ಣನೆಯು

"ಮಚ್ಛರೂಪನಿಗೆ| ಸ್ವಚ್ಛಕೂರ್ಮನಿಗೆ, ಸ್ವಚ್ಛವರಹನಿಗೆ
ಹೆಚ್ಚು ನರಸಿಂಹಗೆ| ಹೆಚ್ಚು ಪೌರುಷವನ್ನು| ಮೆಚ್ಚಿದ ಕೃಷ್ಣಗೇ

ಬಿಚ್ಚಿ ವಸ್ತ್ರಾ ಹಯ ಹತ್ತಿದ ಹರಿಗೇ
ದುಷ್ಟ ಕಂಸನ್ನ| ಅಟ್ಟುಳಿಯನ್ನ| ಮೆಟ್ಟಿ ಆಳ್ದ ಘನಾ|
ಶ್ರೇಷ್ಠವಾದ ನಿನ್ನಾ| ಸೃಷ್ಟಿಯೊಳೆ ನರಸಿಂಹ ವಿಠಲೇಶನಿಗಿನ್ನ
ಮುಟ್ಟಿ ಭಜಿಸುತ್ತ, ಇಟ್ಟು ಕರ್ಪೂರಾ ಬೆಳಗೀರೆ|"

ಗಲಗಲಿ ಅವ್ವನವರ ಕೀರ್ತನೆಗಳಲ್ಲಿ "ಮಚ್ಚ ಕೂರ್ಮ ವರಾಹ ಸ್ವಚ್ಛಾಗೊ ನಾರಸಿಂಹ"

"ವಸ್ತ್ರವಿಲ್ಲೆಂಬೆ ಎಚ್ಚರಿಕಿಲ್ಲೊ ರಂಗಯ್ಯ
ತೇಜಿ ಹತ್ತೇನು ಎಂದು ಬರುವಿಯಲ್ಲೊ ಕೃಷ್ಣಯ್ಯ
ಕತ್ತಿ ಕೈ ಶೂರನೆಂಬೊದೆಲ್ಲೊ ರಂಗಯ್ಯ
ರಾಮೇಶ ನಿನ್ನ ಹತ್ತಿಲ್ಲಿದ್ದವರೆಲ್ಲ ನಗುವರೊ ಕೃಷ್ಣಯ್ಯ"[೨೪]

ಹೀಗೆ, ಗಲಗಲಿ ಅವ್ವನವರ ಕೀರ್ತನೆಗಳ ಪ್ರಭಾವವು ಲಕ್ಷ್ಮೀದೇವಮ್ಮನವರ ದಶಾವತಾರ ವರ್ಣನೆಗಳು ಭಾವಾರ್ಥದಲ್ಲಿ ಒಂದೇ ರೀತಿಯಾಗಿದ್ದು, ಅವ್ವನವರ ಕೀರ್ತನೆಗಳಲ್ಲಿ ನಿಂದಾಸ್ತುತಿ ತಂತ್ರವು ಹೆಣೆಯಲ್ಪಟ್ಟಿದ್ದರೆ, ಲಕ್ಷ್ಮೀದೇವಮ್ಮನವರ ಕೀರ್ತನೆಗಳಲ್ಲಿ ಅನನ್ಯ ಭಕ್ತಿಯ ಬೇಡಿಕೆಯು ಕಾಣುವುದು. ವೈಷ್ಣವ ಕವಯಿತ್ರಿಯರಿಗೆ ದಶಾವತಾರ ವರ್ಣನೆಗಳಿಗೆ ಅವ್ವನವರ ಕಾವ್ಯವೇ ಸ್ಫೂರ್ತಿಯಾಗಿರುವುದು.

ನಾರಿಯರ ರಕ್ಷಿಸುವುದು, ಗೋಪಿಯರ ಕಾಡಿಸುವುದು, ದ್ರೌಪದಿ ವಸ್ತ್ರಾಪಹರಣ ಸಮಯದಿ ಸಹಾಯ ಹಸ್ತ ನೀಡುವ ಚಿತ್ರಣಗಳೆಲ್ಲಾ ಕೃಷ್ಣಾವತಾರದ ಪ್ರಮುಖ ಅಂಶಗಳನ್ನು ಉದಾಹರಿಸುವುದರಲ್ಲಿ ಹೆಚ್ಚು ತಮ್ಮನ್ನು ತೊಡಗಿಸಿಕೊಂಡಿರುವುದು, ಹರಿದಾಸ ಸಾಹಿತ್ಯದ ರಚನೆಗೆ ಹರಿಭಕ್ತಿಯು ಮುಖ್ಯ ನೆಲೆಯಾಗಿರುವುದನ್ನು ಕಾಣಬಹುದು.

**೨. ವಿಷಯ ಆಯ್ಕೆ :** ಬಹುಪಾಲು ಹರಿದಾಸ ಸಾಹಿತ್ಯದಲ್ಲಿ ವಿಷಯ ಆಯ್ಕೆಯು ಪ್ರಧಾನ ಪಾತ್ರವಹಿಸುತ್ತದೆ. ಭಾಗವತ, ಪುರಾಣ, ರಾಮಾಯಣ, ಮಹಾಭಾರತ ಪ್ರಸಂಗಗಳನ್ನು ಹೇರಳವಾಗಿ ಬಳಸಿಕೊಂಡಿದ್ದಾರೆ. ಲಕ್ಷ್ಮೀದೇವಮ್ಮನವರ ರಚನೆಗೆ ಅವ್ವನವರ ಕೀರ್ತನೆಯಲ್ಲಿನ ಕಥಾ ಪ್ರಸಂಗಗಳು ಪ್ರಭಾವ ಬೀರಿರುವುದು ವಿಷಯ ಆಯ್ಕೆಯಲ್ಲಿಯೂ ಸೂಚ್ಯವಾಗಿರುವುವು.

**೧. ಗಲಗಲಿ ಅವ್ವನವರ ಕೀರ್ತನೆ**

"ಒಂದು ಸಂಜೀವಿನಿ
ಕಿತ್ತಿ ತಂದ ಕಾಲದಲೆ
ಅಂಜಿಕೆ ಎಲ್ಲಡಗಿತ್ತೋ ಭೀಮ
ಬೆಳೆದ ಬಾಲಕೆ ಖಳರು ಇಕ್ಕಲು ಬೆಂಕಿ

ಲಂಕೆಯ ಬೆಳಗಿ ಬಂದ
ಪುರುಷ ಬಿಡು ನಿನ್ನ ಸೋಂಗು
ಹೊಡೆದು ಹಿಡಿಂಬೆಯ ಮಡುಹಿದ ಕಾಲಕ್ಕೆ
ಅಡಗಿತ್ತಲ್ಲೋ ಭೀತಿ
ಬಿಡು ನಿನ್ನ ಸೋಂಗು
ಹೆದರಿಕಿದ್ದರೆ ಒಬ್ಬನೆ ಬದರಿಕಾಶ್ರಮಕೆ ಹೋಗಿ
ಚದುರ ರಾಮೇಶನ
ಪಾದಗಳಿಗೆರಗೊ"[೨೦]

ಲಕ್ಷ್ಮೀದೇವಮ್ಮನವರ ಕೀರ್ತನೆಯಲ್ಲಿ,

"ಹಿಂದೆ ಹಿಡಿಂಬನಾ ಕೊಂದೆ, ಮತ್ತೆ ಬಕನನು ಕೊಂದ ಶೌರ್ಯ
ವೆತ್ಹೋಯ್ತು ಎಲ್ಲಿ ನಿನ್ನ ಆ ಧೈರ್ಯಾ
ಕಾಮತರ್ಕವರ ಶೌರ್ಯಯಿಂತು ಪರಿ ಆಯಿತೇ| ಇನ್ನೇನು
ಜೀವಿಸಲೋ ನಾನು| ಮಾರುತಸೂನೂ| ಶಾಂತ ಶ್ರೀ ನರಸಿಂಹ
ವಿಠಲನೆಗತಿಯನ್ನೂ| ನಿಂತು ಬಿಡುವುದೋ
ಪ್ರಣಾ| ನೋಡೆಲೋ ಜಾಣಾ"[೨೧]

ಇಲ್ಲಿ ಬರುವ ಹನುಮ, ಭೀಮರನ್ನು ವರ್ಣಿಸುವ ಪ್ರಸಂಗಗಳಲ್ಲಿ ಸಾಮ್ಯವಿದ್ದೂ, ವಿಷಯ ಆಯ್ಕೆಯಲ್ಲಿ ಅಪ್ಪನವರ ಪ್ರಭಾವದ ದಟ್ಟತೆಯನ್ನು ಸೂಚಿಸುತ್ತದೆ.

**ವರ್ಣನೆ :** ವಿಶೇಷವಾಗಿ ಗಲಗಲಿ ಅವ್ವನವರ ಕೀರ್ತನೆಗಳು ವರ್ಣನೆಗಳಲ್ಲಿ ವಿಶಿಷ್ಟವಾದವು. ಅಂತೆಯೇ ಹೆಂಗಳೆಯರ ಮನಸ್ಸಿನ ಸಂಭ್ರಮಕ್ಕೆ ಒಂದೊಂದು ಆಭರಣವು ಸಂದರ್ಭೋಚಿತವಾಗಿ ವರ್ಣಿತವಾಗಿರುವವು.

"ಕೃಷ್ಣನರಸಿಯರು ಉಟ್ಟ, ಪಟ್ಟಾವಳಿಯ ಬೆಳಕು
ಅಷ್ಟು ಇಷ್ಟೆಂಬ ಮಿತಿ ಇಲ್ಲ ನಲ್ಲೆ
ಅಷ್ಟು ಇಷ್ಟೆಂಬ ಮಿತಿ ಇಲ್ಲ ಸೂರ್ಯನಾಚಿ
ಬಿಟ್ಹೋದ ತಮ್ಮ ಮನೆತನಕ ಸುಜನಕೆ
ಕಡಗ ಸರಪಳಿ ಗೆಜ್ಜೆ ನಡುವಿನೊಡ್ಯಾಣ ಪದಕ
ನಡುವಿನೊಡ್ಯಾಣ ಪದಕ ಇಡವೂ
ಕುಂಡಲದ ಮುಕುಟವೆ ಚಂದವು
ಮುಕುಟದ ಕಾಂತಿಗೆ ಅಡಗಿವೆ ತಾರೆ ಗಗನದಿ ಮುದದಿ"[೨೨]

ಲಕ್ಷ್ಮೀದೇವಮ್ಮನವರ ಕೀರ್ತನೆಗಳಲ್ಲಿ ವರ್ಣನೆಯ ಅಲಂಕಾರಗಳು ಸಾಮ್ಯತೆಯನ್ನು ಪಡೆದಿರುವುದು ಇಲ್ಲಿ ವ್ಯಕ್ತವಾಗಿದೆ.

''ಮುಂಗುರುಳಲಿ ಚಂದ್ರ ಸೂರ್ಯರು ಹೊಳೆಯೆ
ಅಂಗನೆರಂಗನ ಮುಂಗೈ ಗಿಣಿಯೆ
ವಾಲಿಬುಗಡಿಯಿಟ್ಟು ವಾರಿಜಾಕ್ಷಿಯಿಟ್ಟು
ತೋರಮುತ್ತಿನ ಮೂಗುತಿಯಿಟ್ಟು| ಚಾರುಕಂಚುಕ ತೊಟ್ಟು
ಹಾರಪದಕವು ಕೊರಳೊಳಗೆಷ್ಟು| ಬಾರಿಬಾರಿಗೆ
ಪೊಗಳುವುದೆಷ್ಟು
ವಜ್ರ ಹಸ್ತ ಕಡಗವನಿಟ್ಟು | ಭರ್ಜರಿ ಪೀತಾಂಬರವುಟ್ಟು
ಗೆಜ್ಜೆ ಅಂದಿಗೆ ಪಾದದೊಳಿಟ್ಟು | ಹೆಜ್ಜೆ ಹೆಜ್ಜೆಗೆ ಆ ಶಬ್ದಗಳೆಷ್ಟು
ಸಜ್ಜನ ಪ್ರಿಯನಮ್ಮ ನರಸಿಂಹ ವಿಠಲನ ಕೂಡುವೋ ತ್ವರಿತದಿ
ಎಂಬ ಗುಟ್ಟು''[೨೮]

ಎಂಬ, ಇಬ್ಬರು ಕೀರ್ತನಕಾರ್ತಿಯರ ವರ್ಣನೆಗಳೂ ಚಾಚೂ ತಪ್ಪದೆ ಒಂದರ ನಂತರ ಒಂದೆಂಬಂತೆ ಬರುವ ವರ್ಣನೆಗಳ ಸಾಲುಗಳು ಪ್ರಸಂಗ ಯಾವುದಾದರೂ ಅಲ್ಲಿನ ಭಾವಾರ್ಥವು ಕೃಷ್ಣನ ದರ್ಶನಾಕಾಂಕ್ಷಿಗಳಾಗಿ ಸಾಗಿ ಬರುವಾಗ ಭಕ್ತ ಮನಸ್ಸಿನ ಸಂಭ್ರಮಗಳನ್ನು ಇಲ್ಲಿ ವ್ಯಕ್ತಗೊಳಿಸುತ್ತವೆ.

## ನಂಬಿಕೆ, ಆಚರಣೆ, ಸಂಪ್ರದಾಯಗಳು

ಹರಿದಾಸ ಸಾಹಿತ್ಯವು ಮಧ್ವಮತದ ನಂಬಿಕೆಗಳನ್ನು ಅನುಸರಿಸಿರುವುದು ಎಲ್ಲ ಕೀರ್ತನಕಾರರ ಸಾಹಿತ್ಯದಲ್ಲೂ ಮೂಲ ಸತ್ವವಾಗಿದೆ. ಈ ನಂಬಿಕೆ ಆಚರಣೆಗಳು, ಸಂಪ್ರದಾಯಗಳು ಕೂಡ ಮಹಿಳಾ ಕೀರ್ತನಕಾರರಲ್ಲೂ ನಾವು ಗುರುತಿಸಬಹುದಾಗಿದೆ. ಗಲಗಲಿ ಅವ್ವ, ತಮ್ಮ ಕಾವ್ಯಕ್ಕೆ, ನಂಬಿಕೆಗಳನ್ನು ಶಕುನಗಳನ್ನು ಆಚರಣೆ ಸಂಪ್ರದಾಯಗಳನ್ನು ಮಧ್ವಾಮತಾನುಚರಣೆಯಲ್ಲಿ ಅನುಸರಿಸಿ, ರಚಿಸಿದ್ದಾರೆ.

**ಗಲಗಲಿ ಅವ್ವ:** ''ಮಿತ್ರೆಯರು ಬೃಹಸ್ಪತಿಗೆ ಮುತ್ತಿನ ಗದ್ದಿಗೆಯನಿಟ್ಟು
ಅರ್ಥಿಲೆ ಚರಣಕ್ಕೆರಗಿದರು
..........ಬೃಹಸ್ಪತಿ
ಉತ್ತಮ ತಿಥಿಯು ಬರಬೇಕು
ಎಲ್ಲ ನಾರಿಯರಿಗೆ ಬಲ್ಲಿದ ತಿಥಿ ಬೇಕು
ಚಲ್ವ ರಾಮೇಶ ನುಡಿದನು
..........ಬೃಹಸ್ಪತಿ

ನಿಲ್ಲದೆ ತೆಗೆ ಶುಭ ತಿಥಿಯು
''ಗುರುಬಲ ಎಂಬೋದು ಎಲ್ಲ ಹರದೆಯರಿಗೆ
ತೋರುತಿರೆ ಗರುವು ಮುರಿದು ಸುಭದ್ರೆಯ
ಬರುವಿರಮ್ಮಯ್ಯ ನಗುತ ಬರುವಿರಮ್ಮಯ್ಯ''[೨೯]

**ಲಕ್ಷ್ಮೀ ದೇವಮ್ಮನವರ ಕೀರ್ತನೆ**

''ಭೂತ ಪ್ರೇತ ಬಿಡಿಸುವವನಾ| ಅನಾಥರಿಗೆ
ಪ್ರೀತಿ ತೋರುವವನಾ
ಮಾತಿಗೆ ಮಾತು ಮಾಡುವವನಾ| ಗುರುನಾಥನಾ
ದೂತವಾದಿರಾಜನಾ
ಎಂತು ಹೇಳಲಿ ಧ್ವಜಸುತ್ತಿ ಅಲ್ಲಿ| ಸಂತಾನವನು
ಬೇಡುವವರನು| ಬೆನ್ನತ್ತಿ
ನಿಂತು ಹರಸಿದರು| ಎತ್ತಿ ಆದರಲಿ ಸಂತಾನ
ಬೀಜಗಳನು ಬಿತ್ತುವರು
ಭೋಗತನದ ಫಳಾರ ಅಲ್ಲಿ ಹೋಗಿ ಕುಳಿತು
ಜನರ ಅಲಂಕಾರ
ಕೂತು ನೋಡಿದೆನು ಶೃಂಗಾರ| ಓಡ್ಯಾಡುತಿಹ
ಯತಿಗಳ ಗಂಭೀರಾ
ಭೂತಬಲಿಗಳ ನೋಡಿ| ನಮ್ಮ ಭೀತಿ-ಭಯಗಳನ್ನು ಬೀಸಾಡಿ
ಪ್ರೀತಿಲಿ ನಮಸ್ಕಾರ ಮಾಡಿ| ಪ್ರಖ್ಯಾತ ಮಹಿಮೆ
ಭೂತರಾಜನ ನೋಡಿ''[೩೦]

ಹೀಗೆ, ಗಲಗಲಿ ಅವ್ವನವರು ನಂತರದಲ್ಲಿ ಬಂದಿರುವ ಕೀರ್ತನಕಾರ್ತಿಯರ ಕಾವ್ಯಕ್ಕೆ ಸ್ಫೂರ್ತಿಯಾಗಿರುವರು. ಅವ್ವ ತಮ್ಮ ರಚನೆಗೆ ಮಾಧ್ವಮತ ಸತ್ವವನ್ನು ಪ್ರತಿಬಿಂಬಿಸಲು ಆ ಕಾಲದ ನಂಬಿಕೆ, ಶಕುನ, ಗಾದೆ ಮಾತುಗಳನ್ನು ಬಳಸಿಕೊಂಡಿರುವುದು ಕೀರ್ತನ ಕಾರ್ತಿಯರು ಸಮೂಹದ ನಡುವಿನ ಆಚರಣೆಗಳಲ್ಲಿ, ಜನ ಸಾಮಾನ್ಯರ ನಂಬಿಕೆಗಳಲ್ಲಿ ತಮ್ಮ ನಂಬುಗೆಯನ್ನು ಅತ್ಯಂತ ಸರಳವಾಗಿ ಸೇರಿಸಿ ರಚಿಸಿದ್ದಾರೆ. 'ಉತ್ತಮ ತಿಥಿ', ಶುಭಮುಹೂರ್ತ, 'ಗುರುಬಲ' ಎಂಬುದು ನಡೆಸುವ ಕಾರ್ಯಕ್ಕೆ ಒಳಿತಾಗಲಿ ಎಂಬ ಭಾವವಿಲ್ಲಿ ವ್ಯಕ್ತವಾದರೆ, ಲಕ್ಷ್ಮೀದೇವಮ್ಮನವರ ಕಾವ್ಯವೂ ಜನರಲ್ಲಿರುವ ಮೂಢನಂಬಿಕೆಗಳನ್ನು ಸಕಾರಾತ್ಮಕವಾಗಿ ಬದಲಾಯಿಸುವ, ಮಾಧ್ವಮತ ಗುರುಗಳ ರಕ್ಷೆಯನ್ನು ದೊರಕಿಸುವುದಾಗಿದೆ.

ಭೂತ-ಪ್ರೇತ, ಧ್ವಜ ಸುತ್ತಿ ಅಲ್ಲಿ ಸಂತಾನವನು ಬೇಡುವ, ಭೋಗತನದ ಅಲಂಕಾರ, ಭೂತ-ಬಲಿಗಳ ನೋಡಿ, ನಮ್ಮ ಭೀತಿ-ಭಯಗಳನ್ನು ಬೀಸಾಡಿ' ಎಂಬುದು ಲಕ್ಷ್ಮೀ ದೇವಮ್ಮನವರ ಕಾಲಕ್ಕೆ ಮಿತಿಮೀರಿದ ಮೂಢ ನಂಬಿಕೆಗಳ ಕುರಿತು ಕೀರ್ತನಕಾರ್ತಿ ತಳೆದಿರುವ ಭಾವವಿಲ್ಲಿ ವ್ಯಕ್ತವಾಗಿದೆ. ಧರ್ಮ ಎಂಬುದಕ್ಕೆ ಪ್ರೀತಿ ತೋರುವ, ನಿಂತು ಹರಸುವ, ಯತಿಗಳ ಗಂಭೀರ ನಡೆನುಡಿಯಲ್ಲಿ ಭಕ್ತಿಯು ಸೇರಬೇಕೆಂಬ ಭಾವ ತುಡಿತವಿಲ್ಲಿ ವ್ಯಕ್ತವಾಗಿದೆ. ಮಹಿಳಾ ಹರಿದಾಸರು ಅನನ್ಯ ಭಕ್ತಿ, ಗರ್ವವನ್ನು ನಿವಾರಿಸುವ, ಗುರುಗಳ ಆಶೀರ್ವಾದ ಪಾಲಿಸುವ ಇತ್ಯಾದಿ ವಿಷಯಗಳನ್ನು ಮತ್ತೆ ಮತ್ತೆ ದೃಢಪಡಿಸುವರು. ಮಧ್ವ ಸಿದ್ಧಾಂತದ ಹಿನ್ನಲೆಯಲ್ಲಿ ಹರಿಪಾರಮ್ಯತೆ, ಸಂಪ್ರದಾಯ ಆಚರಣೆಗಳ ಸರಳ ರೀತಿ-ನೀತಿಗಳು, ದಶಾವತಾರ ವರ್ಣನೆ, ಭಾಗವತ, ಪುರಾಣ, ರಾಮಾಯಣ, ಮಹಾಭಾರತ ಕೃತಿಗಳಲ್ಲಿನ ಸಂಗತಿಗಳನ್ನು ವಿಷಯಾನುಸಾರ, ಅನುಭವಕ್ಕೆ ದಕ್ಕಿದ ಜೀವನಾನುಭವಗಳೊಂದಿಗೆ ಸೇರಿಸಿ ಮಹಿಳೆಯರ ಭಾವಪ್ರಪಂಚಕ್ಕೆ ಜೀವ ತುಂಬಿದ್ದಾರೆ. ಈ ಪ್ರಭಾವಗಳು ಮಹಿಳಾ ಹರಿದಾಸರ ಸ್ಫೂರ್ತಿಯ ನೆಲೆಯಾಗಿ, ಭಕ್ತಿಯ ಸೆಲೆಯಾಗಿ ಮನೆ ಮನೆಯಲ್ಲೂ, ಭಕ್ತರ ಹೃದಯದ ಆಲಾಪನೆಯಾಗಿರುವುದೇ ಅವುಗಳ ವಿಶಿಷ್ಟ ಲಕ್ಷಣವಾಗಿದೆ. ಹರಿದಾಸ ಸಾಹಿತ್ಯದ ಜೀವಕಳೆಯಾಗಿ, ಭಕ್ತಿ, ಶ್ರದ್ಧೆಗಳ ಆಚರಣೆಯಲ್ಲಿ ಮೈದಾಳಿ ರೂಪು ಪಡೆದಿದ್ದು, ಜನಮಾನಸದಲ್ಲಿ ಅಚ್ಚಳಿಯದೆ ದಾಸಸಾಹಿತ್ಯದ ಪ್ರಭಾವ ಹಿಂದೆಯೂ, ಮುಂದು, ಎಂದೆಂದಿಗೂ ಸಾಗುವ ಜೀವ ನದಿಯಂತೆ ಉಳಿಸಿ, ಬೆಳೆಸಿ, ಪಾಲಿಸಿ, ಪೋಷಿಸಿ ಮುಂದುವರೆಸಿದ ಮಹಿಳಾ ಹರಿದಾಸರ ಪಾತ್ರ ಅನನ್ಯವು, ಅವಿಸ್ಮರಣೀಯವಾದವು ಆಗಿವೆ.

**ಅಡಿಟಿಪ್ಪಣಿಗಳು**

೧. ಅಮರೇಶ ನುಗಡೋಣಿ, **ಹೈದರಾಬಾದು ಕರ್ನಾಟಕ ಹಾಡು-ಪಾಡು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೩, ಪು.೧೭

೨. ಎಚ್ಚೆಸ್ಕೆ, **ದಾಸ ಸಾಹಿತ್ಯ ದರ್ಶನ**, ಮಂಗಳಭಾರತಿ ಪ್ರಕಾಶನ, ಮೈಸೂರು, ೧೯೮೮, ಪು.೩೪೭

೩. ಡಾ.ಎಸ್ .ಎಸ್ .ಅಂಗಡಿ, **ದಾಸ ಸಾಹಿತ್ಯ ಭಾಷೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦, ಪು.೧೧೪

೪. ಎಚ್ಚೆಸ್ಕೆ, **ದಾಸ ಸಾಹಿತ್ಯ ದರ್ಶನ**, ಮಂಗಳಭಾರತಿ, ೧೯೮೮, ಪು.೩೪೭

೫. ಹಣಮಂತ ತಾಸಗಾಂವಕರ, **ಗಲಗಲಿ ಅವ್ವನವರ ಕೀರ್ತನೆಗಳು**, ಕನ್ನಡ ಮತ್ತು ಸಂಸ್ಕೃತ ನಿರ್ದೇಶನಾಲಯ, ಬೆಂಗಳೂರು, ೨೦೦೩, ಪು.೩೫

೬. ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ದಾಸಸಾಹಿತ್ಯ ಸಂಪುಟ ೧೮, ಕನ್ನಡ ಮತ್ತು ಸಂಸ್ಕೃತ ನಿರ್ದೇಶನಾಲಯ, ಬೆಂಗಳೂರು, ಪು.೧೫

೭. ಹಣಮಂತ ತಾಸಗಾಂವಕರ, ಗಲಗಲಿ ಅಪ್ಪನವರ ಕೀರ್ತನೆಗಳು, ,, ಪು.೭೬, ೭೭, ೭೮

೮. ಹೆಳವನಕಟ್ಟೆ ಗಿರಿಯಮ್ಮ ದಾಸ ಸಾಹಿತ್ಯ ಸಂಪುಟ ೧೮, ಪು.೭೬

೯. ಹಣಮಂತ ತಾಸಗಾಂವಕರ, ಗಲಗಲಿ ಅಪ್ಪನವರ ಕೀರ್ತನೆಗಳು, ಪು.೧೫೩

೧೦. ಅದೇ, ಪು.೪೬, ೪೮, ೪೯

೧೧. ಹೆಳವನಕಟ್ಟೆ ಗಿರಿಯಮ್ಮ, ದಾಸ ಸಾಹಿತ್ಯ ಸಂಪುಟ ೧೮, ,, ಪು.೭೧, ೭೩

೧೨. ಹಣಮಂತ ತಾಸಗಾಂವಕರ, ಗಲಗಲಿ ಅಪ್ಪನವರ ಕೀರ್ತನೆ, ,, ೨೦೦೩, ಪು.೧೪೯

೧೩. ಹೆಳವನಕಟ್ಟೆ ಗಿರಿಯಮ್ಮ, ದಾಸ ಸಾಹಿತ್ಯ ಸಂಪುಟ ೧೮, ,, ೨೦೦೩, ಪು.೨೪೭

೧೪. ಹರಪನಹಳ್ಳಿ ಭೀಮವ್ವ, ದಾಸ ಸಾಹಿತ್ಯ ಸಂಪುಟ ೧೯, ಕನ್ನಡ ಮತ್ತು ಸಂಸ್ಕೃತಿ, ನಿರ್ದೇಶನಾಲಯ, ೨೦೦೩, ಪ್ರಸ್ತಾವನೆ

೧೫. ಹಣಮಂತ ತಾಸಗಾವಂಕರ, ಗಲಗಲಿ ಅಪ್ಪನವರ ಕೀರ್ತನೆಗಳು, ಪು.೨೩೪

೧೬. ಹರಪನಹಳ್ಳಿ ಭೀಮವ್ವ, ದಾಸ ಸಾಹಿತ್ಯ ಸಂಪುಟ-೧೯, ಪು.೧೫೮

೧೭. ಹಣಮಂತ ತಾಸಗಾಂವಕರ, ಗಲಗಲಿ ಅಪ್ಪನವರ ಕೀರ್ತನೆ, ,, ಪು.೧೩, ೨೧೦, ೧೬೮

೧೮. ಹರಪನಹಳ್ಳಿ ಭೀಮವ್ವ, ದಾಸ ಸಾಹಿತ್ಯ ಸಂಪುಟ ೧೯ ,, ಪು.೩೪೨

೧೯. ಹಣಮಂತ ತಾಸಗಾಂವಕರ, ಗಲಗಲಿ ಅಪ್ಪನವರ ಕೀರ್ತನೆ ,, ಪು.೨೪,೪೮,೫೦

೨೦. ಹರಪನಳ್ಳಿ ಭೀಮವ್ವ, ದಾಸಸಾಹಿತ್ಯ ಸಂಪುಟ.೧೯, ,, ಪು.೨೨೩

೨೧. ಅದೇ, ಪು.೧೪೪, ೧೪೫

೨೨. ಹಣಮಂತ ತಾಸಗಾಂವಕರ, ಗಲಗಲಿ ಅಪ್ಪನವರ ಕೀರ್ತನೆಗಳು ,, ಪು.೧೧೪

೨೩. ಓರುಬಾಯಿ ಲಕ್ಷ್ಮೀದೇವಮ್ಮನವರ ಕೀರ್ತನೆ, ದಾಸ ಸಾಹಿತ್ಯ ಸಂಪುಟ-೧೪, ಕನ್ನಡ ಮತ್ತು ಸಂಸ್ಕೃತಿ ನಿರ್ದೇನಾಲಯ, ಬೆಂಗಳೂರು, ಪು.೧೪೪

೨೪. ಹಣಮಂತ ತಾಸಗಾಂವಕರ, ಗಲಗಲಿ ಅಪ್ಪನವರ ಕೀರ್ತನೆಗಳು, ಪು.೧೭೭

೨೫. ಅದೇ, ಪು.೨೩೫

೨೬. ಓರುಬಾಯಿ ಲಕ್ಷ್ಮೀದೇವಮ್ಮನವರ ಕೀರ್ತನೆಗಳು, ದಾಸಸಾಹಿತ್ಯ ಸಂಪುಟ-೧೪ ,, ಪು.೧೬೫

೨೭. ಹಣಮಂತ ತಾಸಗಾಂವಕರ, ಗಲಗಲಿ ಅವ್ವನವರ ಕೀರ್ತನೆಗಳು ,, ಪು.೧೫೬

೨೮. ಓರುಬಾಯಿ ಲಕ್ಷ್ಮೀದೇವಮ್ಮನವರ ಕೀರ್ತನೆಗಳು, ದಾಸ ಸಾಹಿತ್ಯ ಸಂಪುಟ-೧೪ ,, ಪು.೨೨೪

೨೯. ಹಣಮಂತ ತಾಸಗಾಂವಕರ, ಗಲಗಲಿ ಅವ್ವನವರ ಕೀರ್ತನೆಗಳು ,, ಪು.೧೪೯

೩೦. ಓರುಬಾಯಿ ಲಕ್ಷ್ಮೀದೇವಮ್ಮನವರ ಕೀರ್ತನೆಗಳು, ದಾಸ ಸಾಹಿತ್ಯ ಸಂಪುಟ-೧೪ ,, ಪು.೧೪೬

೮

# ಕನ್ನಡ ಮಹಿಳಾ ಸಾಹಿತ್ಯದಲ್ಲಿ ಗಲಗಲಿ ಅವ್ವನವರ ಸ್ಥಾನ

ಕನ್ನಡ ಸಾಹಿತ್ಯದಲ್ಲಿ ಭಕ್ತಿಚಳುವಳಿ ವಹಿಸಿದ ಪಾತ್ರ ಹಿರಿದಾದುದು, ವಚನ ಚಳುವಳಿಯು ಭಕ್ತಿ ಆಂದೋಲನದ ಪ್ರಾರಂಭವಾದರೆ, ಹರಿದಾಸ ಸಾಹಿತ್ಯವು ಭಕ್ತಿಚಳುವಳಿಯ ಮುಂದುವರಿದ ಹಂತವಾಗಿದೆ. ಈ ಎರಡು ಧಾರೆಯಲ್ಲೂ ಜನಮಾನಸವೇ ಕೇಂದ್ರ. ವಚನ ಚಳುವಳಿಯು ಸಮಾಜದಲ್ಲಿ ಬದುಕಿನ ವಾಸ್ತವತೆಯ ವೈಚಾರಿಕತೆಯನ್ನು ಜನರಿಗೆ ತಿಳಿಸುವತ್ತ, ಸಾಮಾಜಿಕ ಸ್ವಾಸ್ಥ್ಯ ಕಾಪಾಡುವಲ್ಲಿ ಪ್ರಮುಖಪಾತ್ರ ವಹಿಸಿತು.

ಹರಿದಾಸರು ಧಾರ್ಮಿಕ ಪ್ರಚಾರವನ್ನು ಪ್ರಮುಖವಾಗಿಸಿಕೊಂಡರೂ ಜನಸಾಮಾನ್ಯರಲ್ಲಿ ಬದುಕಿನ ರೀತಿ, ನೀತಿ, ಭಕ್ತಿ, ಜ್ಞಾನ, ವೈರಾಗ್ಯಗಳ ಮಹತ್ವವನ್ನು ತಿಳಿಸಿದರು. ಸಾಮಾಜಿಕವಾಗಿ ಧರ್ಮ ವಹಿಸುವ ಪಾತ್ರವನ್ನು ಸ್ಪಷ್ಟಪಡಿಸಿದರು. ಈ ನಿಟ್ಟಿನಲ್ಲಿ ಹರಿದಾಸರು ನಡೆಸಿದ ಪ್ರಯತ್ನವು ಜನರ ಮನದಾಳದಲ್ಲಿ ಧರ್ಮ ಅಚ್ಚಳಿಯದೆ ಉಳಿಯಲು ಕಾರಣವಾಯಿತು. ಹರಿದಾಸ ಸಾಹಿತ್ಯದಲ್ಲಿ ಹಲವು ಹರಿದಾಸರು ಮೇರು ಸದೃಶಜ್ಞಾನಮತಿಗಳು, ಯತಿಗಳೂ ಆಗಿಹೋಗಿದ್ದಾರೆ. ಅಂತೆಯೇ ಹರಿದಾಸ ಸಾಹಿತ್ಯದ ಅಧ್ಯಯನವನ್ನು ಪ್ರಮುಖವಾಗಿ ನಾಲ್ಕು ಘಟ್ಟಗಳಲ್ಲಿ ಗುರುತಿಸಲಾಗಿದೆ. ಮೊದಲಿಗೆ ಎರಡು ಘಟ್ಟಗಳಲ್ಲಿ ವಚನ ಸಾಹಿತ್ಯದ ಪ್ರಭಾವದಿಂದಲೂ ಹರಿದಾಸರು ಆಡುಭಾಷೆಗೆ ಒತ್ತು ಕೊಟ್ಟಿರುವುದು. ಸಾಮಾನ್ಯರ ಬದುಕಿನ ಆವರಣವನ್ನೇ ತಮ್ಮ ಭಕ್ತಿಯ ಅಭಿವ್ಯಕ್ತಿಗೆ ಆಯ್ಕೆಮಾಡಿಕೊಂಡಿರುವುದು. ನರಹರಿತೀರ್ಥರು ಪ್ರಾರಂಭವಾಗಿ ಶ್ರೀಪಾದರಾಜರು, ವಾದಿರಾಜರು, ವ್ಯಾಸರಾಯರು, ಪುರಂದರ ಕನಕದಾಸರಾದಿಯಾಗಿ ಹಲವು ಹರಿದಾಸರು ಸಂಸ್ಕೃತ ಭಾಷೆಯ ವೇದಾಗಮಗಳನ್ನು ತಿಳಿದವರಾದರೂ ಕನ್ನಡ ಭಾಷೆಯಲ್ಲಿ ಕೀರ್ತನೆ ರಚಿಸಿ ಹಾಡಿ ಸರಳ ಭಕ್ತಿಯ ಮೂಲಕವೇ ಧರ್ಮಪ್ರಸರಣಕ್ಕೆ ತೊಡಗಿದುದು ಪ್ರಮುಖವಾದ ವಿಷಯವಾಗಿದೆ. ಕನ್ನಡ ನಾಡಿನ ಮನೆ ಮನೆಗಳಲ್ಲಿ ದೇವರನಾಮ,

ಸಂಪ್ರದಾಯದ ಹಾಡುಗಳಾಗಿ ಉಳಿದು ಬಂದದ್ದು ಮಹಿಳಾ ಹರಿದಾಸರ ಪ್ರಯತ್ನದ ಫಲವಾಗಿ ಎಂಬುದು ಗಮನಾರ್ಹ ಸಂಗತಿಯಾಗಿದೆ.

ಈ ಹಿಂದೆ ಕವಯಿತ್ರಿಯರು ಕನ್ನಡ ಸಾಹಿತ್ಯದಲ್ಲಿ ಬೆರಳೆಣಿಕೆ ಸಂಖ್ಯೆಯಷ್ಟು ಕಂಡು ಬಂದಿದ್ದಾರೆ. ಅಂದಿನ ದಿನಗಳಲ್ಲಿ ನಡೆಯುತ್ತಿದ್ದ ಧರ್ಮ ಮತ್ತು ಸಂಸ್ಕೃತಿಯ ವಿಚಾರಗಳು ಕವಯಿತ್ರಿಯರ ಕಾವ್ಯದ ವಸ್ತುವಾಗಿರುವವು. ಮಹಿಳೆಯರು ಸಾಮಾಜಿಕವಾಗಿ ಪ್ರಭಾವಿಸುತ್ತಿದ್ದ ವಿಷಯಗಳತ್ತ ಗಮನ ಕೇಂದ್ರೀಕರಿಸಿರುವುದು, ಅವರ ಹಾಡು, ಹಸೆ, ಕಥೆ, ಒಗಟು, ಗಾದೆ, ಶಕುನಗಳಿಂದ ಸಮೃದ್ಧವಾಗಿರುವುದು ಕಂಡುಬರುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಮೊದಲ ಮಹಿಳಾ ಕವಯಿತ್ರಿ ಕಂತಿ ಎಂದು ಗುರುತಿಸಲಾಗಿದೆ. ಈಕೆ ದೋರರಾಯನ ಆಸ್ಥಾನ ಪಂಡಿತೆ (ಕ್ರಿ.ಶ. ೧೧೧೧-೧೧೪೧) ಕವಿ ನಾಗಚಂದ್ರನ ಸಮಕಾಲೀನಳು. ಆದರೆ ಈ ಕುರಿತು ಹೆಚ್ಚಿನ ಆಧಾರಗಳು ದೊರೆತಿಲ್ಲ. ಈಗ ದೊರೆತಿರುವ 'ಕಂತಿ ಹಂಪನ ಸಮಸ್ಯೆಗಳು' ಕೃತಿಯು ಕಂತಿಯೇ ರಚಿಸಿರಬೇಕೆಂದು ನಂಬಲಾಗಿದೆ. 'ಕಂತಿ' ಅಂದಿನ ವಿದ್ವತ್ ಸಭೆಯ ಕಾವ್ಯಸ್ಪರ್ಧೆಯಲ್ಲಿ ಪ್ರಥಮಳಾಗಿ 'ಅಭಿನವ ವಾಗ್ದೇವಿ' ಎಂಬ ಬಿರುದು ಪಡೆದಿದ್ದಳು ಈ ಎಲ್ಲಾ ಸಂಗತಿಗಳಿಂದ ಕಂತಿಯೇ ಕನ್ನಡದ ಮೊದಲ ಕವಯತ್ರಿ ಎಂದು ಖಚಿತವಾಗಿ ಗುರುತಿಸಲು ಸಾಕಷ್ಟು ಆಧಾರಗಳಿಲ್ಲದೇ, ಕಂತಿ ಕನ್ನಡದ ಶ್ರೇಷ್ಠ ಕವಯಿತ್ರಿ ಎಂದು ಹೇಳಬಹುದು.

ಈಕೆಯನ್ನು ಬಿಟ್ಟರೆ, ಸಾಹಿತ್ಯದಲ್ಲಿ ಮಹಿಳೆಯರು ಪುನಃ ಕಾಣಬರುವುದು ೧೨ನೇ ಶತಮಾನದ ವಚನ ಚಳುವಳಿಯಲ್ಲಿ. ಶರಣರ ಅನುಭವ ಮಂಟಪವು ಮಹಿಳೆಯರ ಅನುಭವ, ಅನುಭಾವದ ಅಭಿವ್ಯಕ್ತಿಯ ವೇದಿಕೆಯಾದುದು. ವಚನ ಚಳುವಳಿಯ ಹಿರಿಮೆ ಅಂದು ಮಹಿಳೆಯರು ತಮ್ಮ ಬದುಕು, ನಡೆ, ಸಾಹಿತ್ಯಗಳನ್ನು ಒಂದರೊಡನೊಂದು ಸಮ್ಮಿಳಿತಗೊಳಿಸಿ ಹೊಸರೂಪ ನೀಡಿದರು. ಅಕ್ಕಮಹಾದೇವಿಯ ನಂತರ ಹಲವಾರು ಶಿವಶರಣೆಯರು ಕನ್ನಡ ಸಾಹಿತ್ಯದಲ್ಲಿ ವಚನಗಳನ್ನು ರಚಿಸಿದ್ದಾರೆ. ಪ್ರಮುಖವಾಗಿ, ಅಕ್ಕಮ್ಮ, ಅಮುಗೆರಾಯಮ್ಮ, ಆಯ್ದಕ್ಕಿಲಕ್ಕಮ್ಮ, ಕಾಳವ್ವೆ, ಮಸಣಮ್ಮ, ರೇಚವ್ವೆ, ಕಾಮಮ್ಮ, ಸೋಮಮ್ಮ, ಗಂಗಾಂಬಿಕೆ, ಕೇತಲೆ, ಗೊಗ್ಗವೆ, ಬೀರಮ್ಮ, ದುಗ್ಗಳೆ, ನಾಗಲಾಂಬಿಕೆ, ನೀಲಮ್ಮ, ಗುಡ್ಡವ್ವೆ, ಮುಕ್ತಾಯಕ್ಕ, ಮೋಳಿಗೆ ಮಹಾದೇವಿ, ಸೂಳೆ ಸುಂಕವ್ವೆ ಮುಂತಾದ ವಚನಕಾರ್ತಿಯರು ತಮ್ಮ ಅನುಭವಗಳನ್ನು ವಚನಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಇದಾದ ನಂತರ ನಾವು ಮಹಿಳಾ ರಚನೆಯನ್ನು ಕಾಣುವುದು, ಮೈಸೂರು ಅರಸರ ಊಳಿಗದಲ್ಲಿದ್ದ ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ. ಸಂಸಾರದಲ್ಲಿ ಸತಿಪತಿಯ ನಡುವಿನ ಬದುಕು, ಪತಿವ್ರತೆಯ ಆಚರಣೆಗಳು, ಈಕೆಯ ಕಾವ್ಯದ ವಸ್ತು. ಗೃಹಿಣಿಯರ ನೀತಿಯುತ ಬದುಕಿಗೆ ಮಾರ್ಗದರ್ಶಕ ಕೈಪಿಡಿಯಂತಿರುವುದು ಹೊನ್ನಮ್ಮನ ಹದಿಬದೆಯ ಧರ್ಮ. ಈ ಬಗ್ಗೆ ಮುಂದೆ ಮತ್ತಷ್ಟು ಚರ್ಚೆಯನ್ನು ಪೂರಕವಾಗಿ ಬೆಳೆಸಲಾಗುವುದು. ಬಿ.ಎಂ.ಶ್ರೀಯವರು ಕನ್ನಡ ಸಾಹಿತ್ಯದಲ್ಲಿ ಅಕ್ಕಮಹಾದೇವಿಯನ್ನು

ರುದ್ರಕನ್ನಿಕೆ ಎಂದು ಅನಂತರ ಕಾಲದಲ್ಲಿ ಬಂದ ಸಂಚಿಯ ಹೊನ್ನಮ್ಮಳನ್ನು ಸೌಮ್ಯಮೂರ್ತಿಯೆಂದು ಕರೆದಿದ್ದಾರೆ.

ಹರಿದಾಸ ಸಾಹಿತ್ಯವು ಮೊದಲ ಎರಡು ಘಟ್ಟಗಳಲ್ಲಿ ಹೆಚ್ಚು ಪ್ರಸಿದ್ಧಿ ಪಡೆಯಿತು. ಇಲ್ಲಿ ಹಲವಾರು ಖ್ಯಾತ ಹರಿದಾಸರು ನೂರಾರು ಕೀರ್ತನೆಗಳನ್ನು ರಚಿಸುವ ಮೂಲಕ ಹರಿದಾಸ ಸಾಹಿತ್ಯಕ್ಕೆ ಭದ್ರಬುನಾದಿ ಹಾಕಿದರು. ಆದರೆ ಈ ಹರಿದಾಸ ಸಾಹಿತ್ಯವು ಬಹುಕಾಲ ಜನಸಾಮಾನ್ಯರನ್ನು ಹಿಡಿದಿಡಲಿಲ್ಲ. ಇದಕ್ಕೆ ಅಂದಿನ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಅನೇಕ ಕಾರಣಗಳನ್ನು ಹೆಸರಿಸಬಹುದು. ಹರಿದಾಸ ಸಾಹಿತ್ಯವು ಧಾರ್ಮಿಕವಾಗಿ ಮಹತ್ವಪಡೆದುದು ಮಧ್ವಾಚಾರ್ಯರು ದ್ವೈತ ಸಿದ್ಧಾಂತವನ್ನು ಪ್ರಚುರಪಡಿಸಿದ ಕಾಲದಲ್ಲಿ. ದಾಸ ಸಾಹಿತ್ಯದ ತಟಸ್ಥ ಕಾಲ ಎಂದು ಗುರುತಿಸುವ ಕಾಲದಲ್ಲಿ ಕರ್ನಾಟಕದ ರಾಜ್ಯಾಡಳಿತದಲ್ಲಿ ಹಲವು ರಾಜಕೀಯ ಸಂಘರ್ಷಗಳುಂಟಾದವು. ದಾಸವಾಙ್ಮಯದ ಶೂನ್ಯಕಾಲವೆಂದು ವಿದ್ವಾಂಸರು ಗುರುತಿಸುವ ಆ ಕಾಲದಲ್ಲಿ ಬಿಜಾಪುರ ಜಿಲ್ಲೆಯ ಕಾಖಂಡಕಿಯ ಮಹಿಪತಿದಾಸರು ಪ್ರಮುಖವಾಗುತ್ತಾರೆ. ಇವರ ಕಾಲ(೧೬೪೦-೧೭೦೫). ಅಂದು ಅನೇಕ ಪ್ರಭಾವಿ ಹರಿದಾಸರು ಕೀರ್ತನೆಗಳನ್ನು ರಚಿಸುತ್ತಿದ್ದರು. ಆದರೆ ಅವರ ಧಾರ್ಮಿಕ, ತಾತ್ವಿಕ ವಿಚಾರಗಳಿಂದ ಗೊಂದಲಗಳು ತಲೆದೋರಿದ ಕಾಲವೆನ್ನಬಹುದು. ಮಹಿಪತಿದಾಸರು "ದ್ವೈತ, ಅದ್ವೈತವೆಂದು ಹೊಡದಾಡದಿರೋ ಪ್ರಾಣಿ ಚೇದಿಸಿ ಬ್ಯಾರಿಹ ವಸ್ತುಗಾಣಿ" ಎಂದು ದಾಸ ಸಾಹಿತ್ಯದ ತಿರುಳಿನ ಹಿರಿಮೆಯನ್ನು ಸಾರಿದ್ದಾರೆ. ಇವರ ಜೀವಿತಾವಧಿಯಲ್ಲಿ ಎರಡನೆ ಇಬ್ರಾಹಿಂ ಆಡಳಿತ ಪ್ರಾರಂಭವಾಗಿತ್ತು. ಈತನ ಆಡಳಿತ ಸೌಹಾರ್ದಯುತವಾಗಿತ್ತು. ಜಗತಗೀರ, ಜಗದ್ಗುರು ಎಂದು ಈತನನ್ನು ಗೌರವಿಸುತ್ತಿದ್ದರು. ಈ ರಾಜನಿಗೆ ಹಿಂದೂ ದಾಸರು, ಪಂಡಿತರು, ಸಂತರ ಆಧ್ಯಾತ್ಮಿಕ ಪ್ರಭಾವವಿತ್ತು. ಆದ್ದರಿಂದಲೇ ಈತನ ಆಸ್ಥಾನದಲ್ಲಿ ಮುನ್ನೂರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಕವಿಗಳಿದ್ದರು. ಅವರಲ್ಲಿ ಮಹಿಪತಿದಾಸರು ಒಬ್ಬರು.

ಆ ಕಾಲದಲ್ಲಿ ಮಹಿಪತಿದಾಸರ ಸಮಕಾಲೀನರಾದ ಗಲಗಲಿಯ ಪಂಡಿತ ಮನೆತದ ಹೆಣ್ಣುಮಗಳು ಗಲಗಲಿ ಅವ್ವ. ಅಂದಿನ ಪಂಡಿತರಲ್ಲಿ "ಆದ್ಯರು" ಎಂದು ಗುರುತಿಸುವ ಗಲಗಲಿಯ ಕಟ್ಟುನಿಟ್ಟಿನ ಬ್ರಾಹ್ಮಣರ ಮನೆ. ಸಂಸ್ಕೃತವೇ ಮನೆಮಾತಾಗಿದ್ದ ಪರಿಸರದಲ್ಲಿ ಹುಟ್ಟಿಬೆಳೆದ ಅವ್ವ ಕನ್ನಡದಲ್ಲಿ ಕೀರ್ತನೆಗಳನ್ನು ರಚಿಸಿರುವುದು ಅವರಿಗಿರುವ ಕನ್ನಡ ಅಭಿಮಾನಕ್ಕೆ ದ್ಯೋತಕವಾಗಿದೆ. ಹಾಗೆಯೇ ಜನಭಾಷೆಗೆ ಒತ್ತುಕೊಟ್ಟುದುದು, ಹರಿದಾಸ ಸಾಹಿತ್ಯದ ವೈಶಿಷ್ಟ್ಯವಾಗಿದೆ. ಅಕ್ಕಮಹಾದೇವಿಯ ರಚನೆಗಳು ಸ್ಫೋಟಕ ಗುಣಮಟ್ಟದವು. ಪ್ರಖರವಾದ ವಿಚಾರ ಕಿಡಿಯನ್ನು ಹೊತ್ತಿಸುವಂತಹವು. ಅಕ್ಕನ ನಂತರ ಹಲವಾರು ಶರಣೆಯರು ವಚನ ರಚನೆಗೆ ತಮ್ಮದೆ ಆದ ಕೊಡುಗೆಯಿತ್ತು ಮಹಿಳಾ ಸಾಹಿತ್ಯದ ಮೈಲಿಗಲ್ಲಾಗಿ ಗುರುತಿಸಿಕೊಳ್ಳುತ್ತಾರೆ.

ಕನ್ನಡ ಸಾಹಿತ್ಯದ ಕವಯಿತ್ರಿಯರ ಸಾಲಿಗೆ ಅಕ್ಕನ ನಂತರ ಗುರುತಿಸುವ ಸಂಚಿಯ ಹೊನ್ನಮ್ಮ, ಮೈಸೂರು ಅರಸರ ಊಳಿಗದ ಹೆಣ್ಣುಮಗಳು, ಈಕೆಯ ಕೃತಿ 'ಹದಿಬದೆಯ ಧರ್ಮ' ಕುಟುಂಬದಲ್ಲಿ ಗೃಹಿಣಿಯ ಸಾಧ್ವಿ ಗುಣಗಳನ್ನು ವಿಶೇಷವಾಗಿ ಗುರುತಿಸುವಂಥದ್ದು ಈಕೆ ವೈಷ್ಣವ ಧರ್ಮದಲ್ಲಿ ನಂಬಿಕೆಯುಳ್ಳವಳು. ಸ್ತ್ರೀಯರು ಬದುಕಿನಲ್ಲಿ ಗೃಹಿಣಿ ಧರ್ಮವನ್ನು ಪಾಲಿಸಲು, ರೀತಿ, ನೀತಿ, ಪಾಲನೆ ಮುಂತಾದವು ಕುರಿತು ವಿವರವಾದ ನೀತಿಕಾವ್ಯವನ್ನು ಕಟ್ಟಿರುವಳು.

ಹೊನ್ನಮ್ಮ ಕನ್ನಡ ಸಾಹಿತ್ಯದಲ್ಲಿ ಮಹಿಳಾ ಕವಯಿತ್ರಿಯಾಗಿ ಅಕ್ಕಮಹಾದೇವಿಯ ನಂತರದಲ್ಲಿ ಮಹತ್ವದ ಕವಯಿತ್ರಿ ಸ್ಥಾನ ಪಡೆದುಕೊಂಡಿದ್ದಾಳೆ. ಈಕೆಯ ನಂತರದ ಮಹಿಳಾ ರಚನೆಗಳು ೧೭೮೫ರಲ್ಲಿ ಶೃಂಗಾರಮ್ಮನ ಕಾವ್ಯ, 'ಪದ್ಮಿನೀ ಕಲ್ಯಾಣ' ಈಕೆ ವೈಷ್ಣವ ಕವಯಿತ್ರಿ, ಸಾಂಗತ್ಯ ಪ್ರಕಾರದಲ್ಲಿ ಕೃತಿಯನ್ನು ರಚಿಸಿರುವಳು. ಈ ಕೃತಿಯಲ್ಲಿ ತಿರುಪತಿ ಶ್ರೀನಿವಾಸ ದೇವರಿಗೂ ಪದ್ಮಾವತಿಗೂ ನಡೆದ ವಿವಾಹ ವರ್ಣನೆ ವಸ್ತುವಾಗಿದೆ. ೧೮೯ ಪದ್ಯಗಳನ್ನೊಳಗೊಂಡ ಈ ಕಾವ್ಯದಲ್ಲಿ ನಿರೂಪಿತವಾಗಿರುವುದು ಪದ್ಮಿನಿಯ ಬಾಲ್ಯದ ಚಿತ್ರಣ, ಸಹಜ ಸರಳತೆಗಳಿಂದ ಕೂಡಿದೆ. 'ಕಂತುಗಿಮ್ಮಡಿ ರೂಪ ಚಿಕ್ಕದೇವ ಭೂಪಾಲ ಸಂತವಿಸಿದ ಸಣ್ಣಮಗಳು' ತಾನೆಂದು ಈಕೆ ಹೇಳಿಕೊಂಡಿದ್ದಾಳೆ.

ಮತ್ತೋರ್ವ ಮಹಿಳೆ ಚೆಲುವಾಂಬೆ ಮೈಸೂರು ದೊರೆಗಳಾದ ದೊಡ್ಡ ಕೃಷ್ಣರಾಜರ ಪಟ್ಟಮಹಿಷಿ ಈಕೆಯ ಕಾಲ (ಕ್ರಿ.ಶ. ೧೭೧೩-೧೭೩೫) ದಳವಾಯಿ ದೊಡ್ಡೇಂದ್ರನ ತನುಜ ಕಳಲೆ ಕಾಂತನೃಪನ ಮಗಳು. ವರನಂದೀ ಕಲ್ಯಾಣ, ವೆಂಕಟಾಚಲ ಮಹಾತ್ಮೆ, ಲಾಲೀಪದ, ಅಲಮೇಲಮಂಗೆ ಲಾಲೀಪದ, ತಲಕಾವೇರಿ ಮಹಾತ್ಮೆ ಟೀಕೆ ಮುಂತಾದವು ಈಕೆಯ ಕೃತಿಗಳು. ಆದರೆ ಈ ಕೃತಿಗಳು ಪೌರಾಣಿಕ ವಸ್ತುವನ್ನು ಹೊಂದಿದ್ದರೂ ಅಲ್ಲಿನ ಪ್ರೇಮ, ವಿರಹ ಮುಂತಾದವುಗಳು ಮಾನವರ ಬದುಕನ್ನು ಅನುಕರಿಸುವಂತಿವೆ. ಈಕೆಯ ಕಾವ್ಯಕ್ಕೆ ಹೊನ್ನಮ್ಮಳ ಸತಿಭಕ್ತಿಯು, ಪತಿಪ್ರೇಮವು ಪ್ರಭಾವ ಬೀರಿರುವುದು ಎಂಬುದು ವಿದ್ವಾಂಸರಲ್ಲಿನ ಅಭಿಪ್ರಾಯವಾಗಿದೆ. ಈಕೆಯ ಕಾಲಮಾನದಲ್ಲಿ ಅಂದರೆ ಕ್ರಿ.ಶ. ೧೭೧೩-೧೭೩೫ ಹರಿದಾಸರ ಸಾಹಿತ್ಯವು ಪುನರುಜ್ಜೀವನಗೊಳ್ಳುತ್ತಿದ್ದ ಕಾಲವಾಗಿದೆ. ಇದಕ್ಕೆ ಮೊದಲು ಪ್ರಸ್ತಾಪಿಸಿರುವ ಹೊನ್ನಮ್ಮ, ಶೃಂಗಾರಮ್ಮ, ಚೆಲುವಾಂಬೆಯರ ಕೃತಿ ರಚನೆಗಳು ವೈಷ್ಣವ ಕಾವ್ಯವಾದರೂ, ಹರಿದಾಸ ಸಾಹಿತ್ಯದ ಸಾಂಗತ್ಯ ಪ್ರಕಾರದಲ್ಲಿರುವವು. ಇದು ಧರ್ಮ ಪ್ರಸಾರಕ್ಕಲ್ಲದೆ ಭಕ್ತಿಗೆ ಮಾತ್ರ ಎಂದು ಗುರುತಿಸಬಹುದು. ಇದೇ ಸಂದರ್ಭದಲ್ಲಿ ಹರಿ ಸರ್ವೋತ್ತಮತೆಯನ್ನು ಧಾರ್ಮಿಕ, ತಾತ್ವಿಕ, ವಿಚಾರಗಳಿಂದ ಬಲಪಡಿಸಲು ಜನಸಾಮಾನ್ಯರತ್ತ ಹರಿದಾಸರು ಗಮನಹರಿಸಿದರು. ಜನಸಾಮಾನ್ಯರೆಲ್ಲ ಭಕ್ತಿಯಿಂದ ಸಮಾಜದ ಎಲ್ಲ ವರ್ಗದವರು ಪಾಲಿಸುವ, ಆರಾಧಿಸುವ, ಪಾಲ್ಗೊಳ್ಳುವ ಅವಕಾಶ ದಾಸಕೂಟದಲ್ಲಿ ಪ್ರಾಪ್ತವಾಯಿತು.

ಹರಿದಾಸ ಪರಂಪರೆಯು ವೈಷ್ಣವ ಧರ್ಮವನ್ನು ಪ್ರಸಾರ ಮಾಡಲು ಮಧ್ವಾಚಾರ್ಯರ ದ್ವೈತ ಮತ ಪ್ರಸಾರಕ್ಕೆ ಹೆಚ್ಚು ಆದ್ಯತೆ ನೀಡಿತು. ಗುರುಗಳ ಮೂಲಕ ದೀಕ್ಷೆ ಪಡೆದು, ತಮ್ಮ ಇಷ್ಟ ದೈವದ ಅಂಕಿತದೊಂದಿಗೆ ಕೀರ್ತನೆಗಳನ್ನು ರಚಿಸುವುದು ಹರಿದಾಸ ಪರಂಪರೆಯ ವೈಶಿಷ್ಟ್ಯವಾಗಿದೆ. ಹೀಗೆ ಸಮಾಜಮುಖಿಯಾಗಿ ಸಾಮೂಹಿಕವಾಗಿ ಭಕ್ತಿಯ ಆಂದೋಲನ ಪ್ರಾರಂಭಿಸಿದ ಹರಿದಾಸರ ಆಶಯಗಳನ್ನು ಸ್ತ್ರೀ ಪುರುಷರೆನ್ನದೆ ಎಲ್ಲರೂ ಒಮ್ಮತದಿಂದಲೇ ಬೆಂಬಲಿಸಿದರು. ಕೀರ್ತನ ಸಾಹಿತ್ಯವು ಹರಿದಾಸರ ಜೀವನಾನುಭವಗಳನ್ನು ಭಕ್ತಿಯ ಪರಿಸರದಲ್ಲಿ ಹರಡಿತು. ಬಹುಮುಖ್ಯವಾಗಿ ಮಹಿಳೆಯರು ಸಂಪ್ರದಾಯದ ಆಚರಣೆಯ ಮೂಲಕ ನಿತ್ಯದ ಕೆಲಸ, ಕಾರ್ಯ, ಪೂಜೆ, ಸಮಾರಂಭಗಳಲ್ಲಿ ಹಾಡುತ್ತಾ, ರೂಢಿಗತವಾಯಿತು. ಹಾಡು, ಕಥೆ, ಲಾಲೀಪದಗಳಾಗಿ ಕೀರ್ತನ ಸಾಹಿತ್ಯವು ವೈವಿಧ್ಯಮಯವಾಗಿ ಸಾಂಸ್ಕೃತಿಕ ರೂಪು ಪಡೆಯಿತು. ಇಂತಹ ಸಾಂಸ್ಕೃತಿಕ ಪರಿಸರ ನಿರ್ಮಾಣ ಮಾಡುವಲ್ಲಿ ಮಹಿಳೆಯರದು ಹಿರಿಯ ಪಾತ್ರ. ಅವರ ಭಾವಾಭಿವ್ಯಕ್ತಿಗೆ ಭಕ್ತಿಯೇ ಗುರಿ. ಬದುಕಿನ ಅನುಭವಗಳೇ ಆಕರ ಸಾಹಿತ್ಯವಾಗಿದೆ. ಮಹಿಳಾ ಕೀರ್ತನಕಾರ್ತಿಯರ ಬದುಕು ಬರಹಗಳ ಮೂಲ ನೆಲೆ ಭಕ್ತಿಯಾಗಿತ್ತು. ಹದಿಬದೆಯ ಧರ್ಮದ ಹೊನ್ನಮ್ಮ ವೈಷ್ಣವ ಭಕ್ತೆಯಾದರೂ, ಆಕೆಯ ಕಾವ್ಯ ಸಂಸಾರದಲ್ಲಿ ಸತಿಪತಿಯರ ಪ್ರೇಮ, ಹೊಂದಾಣಿಕೆ, ಸತಿಯರು ಪಾಲಿಸುವ ಪತಿವ್ರತಾಧರ್ಮವನ್ನು ತಿಳಿಸುವ ನೀತಿ ಸೂತ್ರದಂತಿದೆ. ಈಕೆಯ ನಂತರದಲ್ಲಿ ಶೃಂಗಾರಮ್ಮ, ಚೆಲುವಾಂಬೆಯರು ಕವಯಿತ್ರಿಯರ ಸಾಲಿನಲ್ಲಿ ಕಂಡುಬಂದರೂ ಹೊನ್ನಮ್ಮನ ಕಾವ್ಯದ ಶೈಲಿ, ಭಕ್ತಿ, ಸಾಂಗತ್ಯ ಛಂದಸ್ಸಿನಲ್ಲಿ ರಚಿತವಾಗಿರುವುದು ಸ್ಪಷ್ಟವಾಗಿ ಹೊನ್ನಮ್ಮಳ ಪ್ರಭಾವಕ್ಕೊಳಗಾಗಿರುವುದನ್ನು ತಿಳಿಸುತ್ತವೆ. ಕಾಲಮಾನದ ದೃಷ್ಟಿಯಿಂದ ಅಂದರೆ ಶೃಂಗಾರಮ್ಮನ ಕಾಲ (ಕ್ರಿ.ಶ.೧೬೮೫) ಮತ್ತು ಚೆಲುವಾಂಬೆಯ ಕಾಲ ಕ್ರಿ.ಶ. ೧೭೧೩-೧೭೩೫. ಇವರಿಬ್ಬರ ಕಾಲಮಾನದ ಆಸುಪಾಸಿನಲ್ಲಿ ಗುರುತಿಸಬಹುದಾದ ಮಹಿಳಾ ಕೀರ್ತನಕಾರ್ತಿಯೆಂದರೆ ಗಲಗಲಿ ಅವ್ವನವರು. ಅವರ ಕಾಲ(ಕ್ರಿ.ಶ.೧೬೫೦-೧೭೭೦).

ಅವ್ವನವರು ಹರಿದಾಸ ಸಾಹಿತ್ಯದಲ್ಲಿ ಪ್ರಥಮ ಮಹಿಳಾ ಹರಿದಾಸರೆನಿಸಿದ್ದಾರೆ. ಈತನಕ ಕೃತಿ ರಚನೆ ಮಾಡಿರುವ ಕವಯಿತ್ರಿಯರಲ್ಲಿ ಹೊನ್ನಮ್ಮ ನೀತಿಕಾವ್ಯ ರಚಿಸಿದ್ದಾಳೆ. ಇಲ್ಲಿ ಭಕ್ತಿಯ ನಿವೇದನೆಗಿಂತ ನೀತಿಯೇ ಪ್ರಮುಖವಾಗಿದೆ. ಅನಂತರದಲ್ಲಿ ಕಾಣಬರುವ ಚೆಲುವಾಂಬೆಯು ಶ್ರೀವೈಷ್ಣವ ಕಾವ್ಯ ರಚನೆ ಮಾಡಿದ್ದಾಳೆ. ಈಕೆಯು ತನ್ನ ಕಾವ್ಯದ ವರ್ಣನೆಯ ಸಂದರ್ಭದಲ್ಲಿ ಹೊನ್ನಮ್ಮಳಿಂದ ಪ್ರಭಾವಿತಳಾಗಿದ್ದಾಳೆ. ಆ ಕಾಲ ವೈಷ್ಣವ ಧರ್ಮದ ಪುನರುತ್ಥಾನ ಕಾಲ. ಬಿಡಿಬಿಡಿಯಾಗಿ ಕಾಣಸಿಗುವ ರಚನೆಗಳು ಸಂಪೂರ್ಣ ಪ್ರಮಾಣದ ಕೀರ್ತನೆಗಳಾಗದೆ, ಪುರಾಣ ವಸ್ತುವುಳ್ಳ ಕಾವ್ಯಗಳಾಗಿರುವವು.

ಈ ನಿಟ್ಟಿನಲ್ಲಿ ಮಹಿಳಾ ಕೀರ್ತನಕಾರ್ತಿಯರ ರಚನೆ ಅತ್ಯಂತ ಮಹತ್ವವಾದುದು. ಹರಿದಾಸ ಸಾಹಿತ್ಯಕ್ಕೆ ಮಹಿಳಾ ಹರಿದಾಸರು ತಮ್ಮದೆ ಆದ ಕೊಡುಗೆ ನೀಡಿದ್ದಾರೆ. ಹರಿಕೀರ್ತನೆ, ಭಜನೆ, ಹಾಡು

ಹಸೆಗಳಲ್ಲಿ ಹರಿದಾಸ ಸಾಹಿತ್ಯವನ್ನು ಉಳಿಸಿ ಬೆಳೆಸಿದವರು. ತನು-ಮನ ತೃಪ್ತಿಗಾಗಿ ಭಕ್ತಿಯ ಹಾಡುಗಳನ್ನು ರಚಿಸಿದರು. ಆ ಮೂಲಕ ಬದುಕಿನ ಆತಂಕಗಳ ನಿವಾರಣೆಗಾಗಿ ಭಕ್ತಿಯ ಮೊರೆಹೋಗಿದ್ದಾರೆ. ಅಂದು ಮಹಿಳೆಯರ ಹಾಡುಗಳಿಗೆ ಜನಪದರ ಬದುಕು ಪ್ರಧಾನವಾದ ಆಕರ ಸಾಹಿತ್ಯವಾಗಿತ್ತು. ಅವರ ಕೀರ್ತನೆಗಳಲ್ಲಿ ಕಾಣಬರುವ ಗಾದೆ, ಶಕುನ, ಒಗಟು ಮುಂತಾದವುಗಳಲ್ಲಿ ಅದನ್ನು ಗಮನಿಸಬಹುದು. ಗಲಗಲಿ ಅವ್ವನವರನ್ನು ಇತರೆ ಕವಯಿತ್ರಿಯರ ಹಿನ್ನೆಲೆಯಲ್ಲಿ ನೋಡಬಹುದಾದರೆ, ಮೊದಲಿಗೆ ವಚನ ಸಾಹಿತ್ಯದಲ್ಲಿ ಅಕ್ಕಮಹಾದೇವಿ ಪ್ರಥಮ ಹಾಗೂ ಶ್ರೇಷ್ಠ ಕವಯಿತ್ರಿ. ಅಂತೆಯೇ ಹರಿದಾಸ ಸಾಹಿತ್ಯದಲ್ಲಿ ಗಲಗಲಿ ಅವ್ವನವರು ಪ್ರಥಮ ಕವಯಿತ್ರಿಯೆನಿಸುವರು. ಅಕ್ಕನ ಕಾಲಕ್ಕೂ, ಅವ್ವನ ಕಾಲಕ್ಕೂ ಸರಿಸುಮಾರು ಐದು ಶತಮಾನಗಳಷ್ಟು ದೀರ್ಘ ಅಂತರವಿರುವುದು. ಈ ದೀರ್ಘ ಕಾಲದಲ್ಲಿ ಕರ್ನಾಟಕ ದಲ್ಲಿ ಅನೇಕ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಘರ್ಷಗಳುಂಟಾಗಿವೆ. ಇಂತಹ ಹೊತ್ತಿ ನಲ್ಲಿ ಮಹಿಳೆಯರ ಭಾಗವಹಿಸುವಿಕೆಯು ಸಾಹಿತ್ಯಕ್ಷೇತ್ರದಲ್ಲಿ ಗಮನಾರ್ಹವಾದುದು.

ಅಕ್ಕಮಹಾದೇವಿ, ವಚನ ಚಳುವಳಿಯ ಶರಣೆಯರ ಸಮೂಹದಲ್ಲಿ ಪ್ರಕಾಶಮಾನ ವ್ಯಕ್ತಿತ್ವದವಳು ಆಕೆಯೇ ಹೇಳುವಂತೆ ನಾಮದಲ್ಲಿ ಹೆಂಗೂಸೆಂಬ ಹೆಸರಾದಡೇನು ಭಾವಿಸಲು ಗಂಡುರೂಪ ಎಂಬುದು ಅಕ್ಕನ ವ್ಯಕ್ತಿತ್ವದ ಪ್ರತಿರೂಪವಾಗಿದೆ. ಅಂತೆಯೇ ಅವ್ವ ದಾಸ ಸಾಹಿತ್ಯದಲ್ಲಿ ಗುರುತಿಸುವ ಪ್ರಥಮ ಹರಿದಾಸಳು. ಅತ್ಯಂತ ಪ್ರತಿಭಾವಂತ ವ್ಯಕ್ತಿತ್ವ ಹೊಂದಿದ್ದು ಆದ್ಯರ ಸಾಲಿನಲ್ಲಿ ಗುರುತಿಸಿಕೊಂಡಿದ್ದಾಳೆ. ಅವ್ವನ ಕುರಿತು ವಿದ್ವಾಂಸರ ಅನಿಸಿಕೆಯೊಂದು ಹೀಗಿದೆ: 'ಸ್ತ್ರೀರೂಪದ ಪುರುಷಯತಿ' ಎಂಬುದು ಅವ್ವನವರ ಪ್ರತಿಭಾ ವ್ಯಕ್ತಿತ್ವದ ನುಡಿಗನ್ನಡಿಯಾಗಿದೆ. ಅಕ್ಕಮಹಾದೇವಿಯ ವಚನಗಳು ಭಾವಗೀತಾತ್ಮಕವಾದ ವುಗಳಾದರೆ, ಅವ್ವನವರು ದೀರ್ಘ ಕಥನ ಗೀತೆಗಳನ್ನು ರಚಿಸಿದ್ದಾರೆ. ಅವ್ವನವರ ಭಕ್ತಿ ಪ್ರಧಾನವಾದ ಹಾಡುಗಳನ್ನು ಮದುವೆ ಸಮಾರಂಭದಲ್ಲಿ ಹಾಡುತ್ತಾರೆ. ಅಕ್ಕನ ಸ್ಫೋಟಕಗುಣದ ವಚನಗಳಂತೆ ಪ್ರಖರವಾಗಿರದೆ ಅವ್ವನ ಕೀರ್ತನೆಗಳು ಮಧುರವಾದ ಸಂಗತಿಗಳನ್ನು ನಿಂದಾಸ್ತುತಿಯ ಮೂಲಕ ಪ್ರಚುರ ಪಡಿಸುತ್ತವೆ. ಇವರಿಬ್ಬರ ಕಾಲ, ವಿಚಾರ ಗುಣಗಳಲ್ಲಿ ಸ್ವತಂತ್ರ ಅಭಿವ್ಯಕ್ತಿಯು ಕಾಣಬರುವುದು. ಆದರೂ ಅವರ ರಚನೆಗಳು ಎರಡು ಭಕ್ತಿ ಚಳುವಳಿಯಲ್ಲಿ ತಮ್ಮದೆ ವಿಚಾರ, ಧೋರಣೆಗಳ ಮೂಲಕ ಕನ್ನಡ ಸಾಹಿತ್ಯದಲ್ಲಿ ಪ್ರಮುಖ, ಪ್ರಥಮ ಸ್ಥಾನ ಪಡೆದ ಸ್ತ್ರೀಮೂರ್ತಿಗಳ ರಚನೆಗಳು.

ಅವ್ವನವರ ಬದುಕು ಪ್ರಾರಂಭದಿಂದಲೇ ವೈರಾಗ್ಯದ ಹಂತದಲ್ಲಿರುವುದು. ಆದರೂ ಅವರು ಅಭಿವ್ಯಕ್ತಿಸುವುದು ಸಂಭ್ರಮ ಸಡಗರ ತುಂಬಿದ ಭಕ್ತಿ ಭಾವಗಳಲ್ಲಿ. ಆಕೆ ಮಡಿಹೆಂಗಸಾದರೂ, ಮಂಗಳ ಕಾರ್ಯಗಳನ್ನು ವರ್ಣಿಸುವಲ್ಲಿ ಎಳ್ಳಷ್ಟು ನೋವು, ನಿರಾಸೆ ತೋರಿಸದಂತಹ ದಿಟ್ಟ ಮನಸ್ಸಿನವಳು. ಚಿಕ್ಕವಯಸ್ಸಿನಲ್ಲಿ, ವೈಧವ್ಯಕ್ಕೆ ಗುರಿಯಾಗಿ ಅಂದು ತಾವು ಕಾಣುವ ಸುತ್ತಲಿನ ಪರಿಸರದಲ್ಲಿ ಭಕ್ತಿ ಸಂಭ್ರಮಗಳನ್ನೇ ಹಾಡು ಕಟ್ಟಿ ಹಾಡಿದ್ದಾರೆ. ಇದಕ್ಕೆ ಅವ್ವ, ಬಾಳಿದ ಮನೆಯ ಕಟ್ಟುನಿಟ್ಟಿನ ಸಂಪ್ರದಾಯ,

ಪಡೆದ ಶಿಕ್ಷಣ, ಆಕೆಯ ಅಭಿವ್ಯಕ್ತಿಗೆ ಸಹಕಾರಿಯಾಯಿತು. ಕಟ್ಟಾ ಸಂಪ್ರದಾಯವಾದಿ ಬ್ರಾಹ್ಮಣರ ಮನೆಯ ವಿಧವೆಯಾದರೂ ಪುರುಷಯತಿಯಂತೆ ಬಾಳಿದುದು ಅವರ ಪ್ರತಿಭಾವಂತ ಬದುಕಿನ ವೈಶಿಷ್ಟ್ಯವಾಗಿದೆ.

ಅವ್ವನವರು ಕೀರ್ತನೆಗಳಲ್ಲಿ ಮಾಧ್ವಮತದ ಗಹನ ವಿಚಾರಗಳೇ ಅಡಕವಾಗಿರುವ ಗೂಢತತ್ವಗಳನ್ನು ರಚಿಸಿದ್ದಾರೆ. ಅವರ ರಚನೆಗೆ ಬದುಕೊಂದು ಪಾಠಶಾಲೆಯಾಗಿದೆ. ತಮ್ಮ ನಿರೂಪಣೆಯಲ್ಲಿ ಮಾಧ್ವಮತದ ಔನ್ನತ್ಯವನ್ನು ಪ್ರಮುಖವಾಗಿಸಿದ್ದಾರೆ. ಬದುಕಿನುದ್ದಕ್ಕೂ ತಾವು ನಂಬಿದ ಮತಕ್ಕೆ ನಿಷ್ಠರಾಗಿದ್ದು ಆಧ್ಯಾತ್ಮ ಜೀವನದಲ್ಲೇ ಕಾಲ ಕಳೆದರು. ವೇದ, ಶಾಸ್ತ್ರ, ಪುರಾಣ, ಭಾಗವತ, ಭಾರತ ಮೊದಲಾದವುಗಳ ಸಾರವನ್ನು ಪಾಂಡಿತ್ಯ ಅನುಭಾವಗಳ ಮೂಲಕ ನೀತಿಸುಧೆ, ಶುದ್ಧಾಚರಣೆ, ಹರಿಭಕ್ತಿ ಸಾಧನೆಗಳನ್ನು ಬೋಧಿಸಿದ್ದಾರೆ. ಅವ್ವನವರ ರಚನೆಯ ಕೀರ್ತನೆಗಳು ಸಂಖ್ಯಾದೃಷ್ಟಿಯಲ್ಲಿ ಬಹಳ ಕಡಿಮೆ ಎನಿಸಿದರೂ ಆಕೆಯ ರಚನಾ ವಿದ್ವತ್, ವರ್ಣನಾಕೌಶಲಗಳು ಮಹಿಳಾ ಲೋಕದ ಸುಂದರ ಅಲಂಕಾರಗಳ ರೂಪ ಪಡೆದಿವೆ.

ಅಕ್ಕನ ವಚನಗಳು ೩೫೪ ಲಭ್ಯವಾಗಿವೆ. ಶರಣ ಸಾಹಿತ್ಯದಲ್ಲಿ ಪ್ರಮುಖ ಸ್ಥಾನ ಪಡೆದಿವೆ. ಇದಲ್ಲದೆ ಅಕ್ಕ ಯೋಗಾಂಗ ತ್ರಿವಿಧಿ, ಸೃಷ್ಟಿಯ ವಚನ, ಮಂತ್ರಗೋಪ್ಯಗಳೆಂಬ ಲಘುಕೃತಿಗಳನ್ನು ಬರೆದಿದ್ದಾಳೆ. ಅಕ್ಕನ ವಚನಗಳಲ್ಲಿ ವ್ಯಕ್ತವಾಗಿರುವ ಭಾವತೀವ್ರತೆಯ ಸಾಹಿತ್ಯವು ಆಕೆಯ ಅಂತರಂಗ ದರ್ಶನ ಮಾಡಿಸುತ್ತವೆ. ಹೀಗೆ ಎಲ್ಲ ದೃಷ್ಟಿಯಿಂದಲೂ ಅಕ್ಕನಿಗೆ ವಚನ ಸಾಹಿತ್ಯದ ವಿಶಿಷ್ಟ ಕವಯಿತ್ರಿ ಸ್ಥಾನ ಸಲ್ಲುತ್ತದೆ.

> ''ಆದ್ಯರ ಅರವತ್ತು ವಚನಕ್ಕೆ ಡಣ್ಣಾಯಕರ ಇಪ್ಪತ್ತು ವಚನ
> ಡಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ
> ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ
> ಅಜಗಣ್ಣನ ಐದು ವಚನಕ್ಕೆ ಕೂಡಲ ಚೆನ್ನಸಂಗಮದೇವಾ
> ಮಹಾದೇವಿಯಕ್ಕನ ಒಂದು ವಚನ ನಿರ್ವಚನ''

ಎಂಬ ಸಾಹಿತ್ಯಿಕ ಸತ್ಯ ತುಂಬಿರುವುದು ಅಕ್ಕನ ವಚನಗಳಲ್ಲಿ. ಅವ್ವನ ಕೀರ್ತನೆಗಳು ಅಂದಿನ ಕಾಲಕ್ಕೆ ಸರಳ ಜನಪದರ ಹಾಡಿನಂತಿವೆ. ಆದರೂ ಅವರ ರಚನೆಗಳು ಸಾಮಾನ್ಯರಿಗೂ ತಿಳಿಯುವಂತಿವೆ. ಭಕ್ತಿ ಮತ್ತು ಶೃಂಗಾರ, ಹಾಸ್ಯ, ಕರುಣಾರಸಗಳನ್ನು ಎರಕಹೊಯ್ದಿದ್ದಾರೆ. ಆಕೆ ರಚಿಸಿದ ಮುಯ್ಯ ಒಯ್ಯುವ ಹಾಗೂ ಮುಯ್ಯ ತಿರುಗಿಸಿವ ಹಾಡುಗಳು ವಿಶೇಷವಾದವು. ಒಟ್ಟು ೨೬೬ ಹಾಡುಗಳು ರಚನೆಗೊಂಡಿವೆ. ಜೊತೆಗೆ ಸೇತುಬಂಧದ ಹಾಡು, ಜೋಗುಳ ಹಾಡು, ಅಲಂಕಾರ ತಾರತಮ್ಯ ಹೀಗೆ ಅವರ ರಚನೆಯ ಹಾಡುಗಳು ಲಭ್ಯವಾಗಿವೆ. ಅವ್ವನವರ ರಚನೆಗಳು ಭಕ್ತಿಪ್ರಧಾನವಾಗಿವೆ. ರಮಿ ಅರಸು, ರಾಮೇಶ ಎಂಬ ಅಂಕಿತಗಳಿಂದ ಕೃತಿ ರಚನೆ ಮಾಡಿ ಭಕ್ತಿಪೂರ್ವಕ, ಧಾರ್ಮಿಕ ತತ್ವಗಳ ಕಾವ್ಯ ರಚಿಸಿದ್ದಾರೆ. ಅವರ

ವೈಭವದ ದ್ವಾರಕಾಪುರ ವರ್ಣನೆಯಲ್ಲಿ ಕೃಷ್ಣ ಪರಿವಾರದ ಸಡಗರವು ಮೂಡಿಬಂದಿರುವುದು ಹೀಗೆ.

''ದಿಕ್ಕು ತುಂಬಿತು ಲೆಕ್ಕವಿಲ್ಲದ ಜನರು ಕಾಶ ತುಂಬಿತು ಎಲ್ಲಕೋಶ ತುಂಬಿತು
ಆಶೆ ಬಿಡುತಲೆ ಜನರು ಸೋಸಿನ ಮುಯ್ಯಕ್ಕೆ
ಹಾದಿ ತುಂಬಿತು ಎಲ್ಲ ಬೀದಿ ತುಂಬಿತು
ಅಂಬರ ತುಂಬಿತು ಪಟ್ಟಣ ತುಂಬಿತು
ಒಂದಿಷ್ಟು ಬಿಡದಲೆ''

ಹೀಗೆ ಅವ್ವನವರ ವರ್ಣನಾಕೌಶಲ ಭಕ್ತಿಪೂರದಲ್ಲಿ ತುಂಬಿ ಹರಿದಿದೆ. ಅಲ್ಲದೇ ಕೋಲಹಾಡುಗಳ ಪದರಚನೆಯ ಆರಂಭಕಾರರೂ ಅವ್ವನವರೇ ಎನ್ನಬಹುದು. ಅವರ ಮೇಲೆ ಜನಪದರ ಪ್ರಭಾವವು ಸಾಕಷ್ಟಿತ್ತು, ಎಂಬುದಕ್ಕೆ ಆಕೆ ಬಳಸಿಕೊಂಡ ಬೀಸುವ, ಕುಟ್ಟುವ, ತೌಡು ತೆಗೆಯುವ ಮುಂತಾದವು ಗ್ರಾಮೀಣ ಪರಿಸರದಲ್ಲಿ ಬಳಕೆಯಲ್ಲಿದ್ದ ಬದುಕಿನ ಕ್ರಿಯೆಗಳು. ಹಾಗೆಯೇ ಸೋಬಾನೆ ಪದಗಳು, ಲಾಲಿ ಹಾಡುಗಳು ಅವ್ವನವರ ಮೇಲೆ ಪ್ರಭಾವ ಬೀರಿವೆ.

ವಿಶೇಷವಾಗಿ ಹಬ್ಬಗಳಲ್ಲಿ ಮೆರವಣಿಗೆ ಸಾಗುವಾಗ ಕೋಲಾಟಗಳಲ್ಲಿ ಹಾಡುವ ಸಂಪ್ರದಾಯವು ಉತ್ತರ ಕರ್ನಾಟಕದಲ್ಲಿತ್ತು. ಈ ಕೋಲಾಟವನ್ನು ಶ್ರೀಕೃಷ್ಣನೂರಿನ ಗೋಪಿಕೆಯರು ಆಡುತ್ತಿದ್ದರು. ಅಲ್ಲಿಂದ ವಲಸೆ ಬಂದ ಉತ್ತರದ ಗುಜ್ಜರು ಅಥವಾ ಗೂರ್ಜರು ಅಥವಾ ಮಾರವಾಡಿಗಳು ಎಂದು ಪ್ರಾದೇಶಿಕವಾಗಿ ಗುರುತಿಸಿಕೊಂಡವರು. ಇಂದು ಉತ್ತರ ಕರ್ನಾಟಕಾದ್ಯಂತ ವ್ಯಾಪಿಸಿದ್ದಾರೆ. ಇಂದಿಗೂ ಈ ಸಮಾಜದವರು ನವರಾತ್ರಿ, ದೀಪಾವಳಿ ಸಂದರ್ಭದಲ್ಲಿ ''ದಾಂಢಿಯಾ'' ನೃತ್ಯ ಕೋಲಾಟಗಳೊಂದಿಗೆ ಮಾಡುತ್ತಾರೆ. ಇವರ ನೃತ್ಯದ ಪ್ರಭಾವ ಅವ್ವನವರ ಕೋಲಾಟದ ರಚನೆಗೆ ಪ್ರಭಾವ ಬೀರಿರಬಹುದು ಎಂಬುದಾಗಿ ಗ್ರಹಿಸಬಹುದಾಗಿದೆ. ಅವ್ವನವರ ಕೀರ್ತನೆಗಳು ಅಂದು ದಾಸ ಸಾಹಿತ್ಯದಲ್ಲಿ ಪ್ರಮುಖವೆನಿಸದಿದ್ದರೂ ಅವರ ವಿದ್ವತ್ಪೂರ್ಣ ವ್ಯಕ್ತಿತ್ವದಿಂದ ರಾಜರು, ಪಂಡಿತರು, ಪೇಶ್ವೆಗಳಿಂದ ಸನ್ಮಾನಿತರಾಗಿದ್ದುದೇ ಆಕೆಯ ಪ್ರತಿಭೆಗೆ ಸಂದ ಗೌರವವಾಗಿದೆ. ಸುಸಂಸ್ಕೃತ ಸ್ವಭಾವದ ಅವ್ವ, ವಿನಯಶೀಲೆ, ಶಾಸ್ತ್ರ ಕುರಿತಾಗಿ ಓದಿಲ್ಲದೆ, ಪಠಣ ಮಾಡದೆಯೇ, ಮಕ್ಕಳಿಂದ ಶ್ರವಣ ಮಾತ್ರದಲ್ಲಿಯೇ ಕಲಿತು ಪಂಡಿತರ ಸಮಾವೇಶದಲ್ಲಿ ಭಾಗವಹಿಸುವ ಮೂಲಕ ಅಲ್ಲಿನ ಸಭೆಗಳಲ್ಲಿ ಧಾರ್ಮಿಕ ತತ್ವಗಳ ಕುರಿತು ಪ್ರಮೇಯಗಳನ್ನು ಬಿಡಿಸುವ ಕುಶಾಗ್ರಮತಿ, ಆದರೂ ಅವರು ವಿನಯದಿಂದ ಭಿನ್ನವಿಸಿರುವುದು ಹೀಗೆ,

''ಬಲ್ಲಿದ ಗುರುಗಳ ಎಲ್ಲ ಹಿರಿಯರ ದಯದಿ
ಬಲ್ಲಷ್ಟು ತತ್ವ ರಚಿಸಿದೆ''

ಅವ್ವನವರ ಶಾಸ್ತ್ರಪಾಂಡಿತ್ಯವು ಅಂದಿನ ವಿದ್ವತ್ ಸಭೆಗಳಲ್ಲಿ ಪ್ರಕಾಶಿಸಿದುದು, ರಾಜಸಭೆಗಳಲ್ಲಿ ಆಕೆಗೆ ಗೌರವ, ಸನ್ಮಾನಗಳು ದೊರೆತದ್ದು, ಅಷ್ಟಲ್ಲದೇ ಮೈಸೂರು ಅರಸರಲ್ಲಿ ಸನ್ಮಾನ ಸ್ವೀಕರಿಸಿ, ಅವರ ಅರಮನೆಯಲ್ಲಿ ತಂಗಿದ ದಿನಗಳಲ್ಲಿ ತಾವೇ ಪೂಜಿಸುವ, ನೇವೇದ್ಯ ಅರ್ಪಿಸುವ ನಂತರ ತೀರ್ಥ ಪ್ರಸಾದಗಳನ್ನು ಪಡೆಯಬೇಕೆಂಬ ಷರತ್‌ಗಳನ್ನು ಅವ್ವ ಹಾಕಿದ್ದುದು. ಗಲಗಲಿಯಲ್ಲಿ ತವರೂರ ನೆನಪಿನಿಂದ ತಂದ ಭೋಗಾಪುರೇಶ ಚಿಕ್ಕಮೂರ್ತಿಯೊಂದನ್ನು ಪ್ರತಿಷ್ಠಾಪಿಸಿ ಪೂಜಿಸಿದುದು. ಅಷ್ಟಲ್ಲದೇ ಪುಣೆಯಲ್ಲಿ ಔತ್ತರೇಯ ಪಂಡಿತರ ಸಮಾವೇಶದಲ್ಲಿ ದಕ್ಷಿಣ ಪಂಡಿತರ ಪರವಾಗಿ ಪಾಲ್ಗೊಂಡು, ಪ್ರಮೇಯ ನಿರ್ಣಾಯಕ ಹಂತದಲ್ಲಿ ಅವ್ವ ತಮ್ಮ ಮಕ್ಕಳ ಮೂಲಕ ಆ ಪ್ರಮೇಯಗಳನ್ನು ಬಿಡಿಸಿ, ಅದರಿಂದ ಉದ್ಭವಿಸುವ ಪ್ರಶ್ನೆಗಳಿಗೆ ಪರಿಹಾರ ಸೂಚಿಸಿದ್ದು, ಅದಕ್ಕಾಗಿ ಪುಣೆಯ ಪೇಶ್ವೆಗಳು ಅವ್ವನವರಿಗೆ ವರ್ಷಾಸನ ನೀಡಿ ಗೌರವಿಸಿದ್ದು. ಈ ಎಲ್ಲಾ ವಿಚಾರಗಳಿಂದ ಆಕೆಯನ್ನು ಕುರಿತು ಅಂದಿನ ವಿದ್ವಾಂಸರು "ಅವ್ವನವರು" ಎಂದು ಗೌರವಿಸುತ್ತಿದ್ದರು. ಯತಿ ಗುರುವರ್ಯರ ಸ್ಮರಣೆಯೊಂದಿಗೆ ಮಹಿಳೆಯಾಗಿ ತೀರ್ಥಯಾತ್ರೆ, ಪರ್ಯಟನೆ ಮುಂತಾದಗಳನ್ನು ಅವ್ವ ಸಾಧಿಸಿರುವುದು ಹೆಗ್ಗಳಿಕೆಯ ವಿಷಯವೇ ಸರಿ. ಹರಿದಾಸ ಸಾಹಿತ್ಯದಲ್ಲಿ ಹರಿದಾಸರೆಲ್ಲರೂ ಕೇಶವಾದಿ ಚತುರ್ವಿಂಶತಿ ಹಾಡು ರಚಿಸಿದ್ದಾರೆ. ಶ್ರೀಪಾದರಾಜರಾದಿಯಾಗಿ, ಪುರಂದರದಾಸರು, ಕನಕದಾಸರು, ವಾದಿರಾಜರು, ಗೋಪಾಲದಾಸರ ತನಕವೂ ಈ ಪದ್ಧತಿಯನ್ನು ಕಾಣಬಹುದುದಾಗಿದೆ.

ಆದರೆ ಸ್ತ್ರೀಯರಲ್ಲಿ ಈ ಪದ್ಧತಿಯು ನಿಷೇಧಿಸಲ್ಪಟ್ಟ ಸಾಧನ ಕ್ರಮವಾಗಿದೆ. ಮತ್ತು ಅವರಿಗೆ ಭಗವಂತನ ನಾಮ ಸಂಕೀರ್ತನೆ ಮಾತ್ರವೇ ಸುಲಭ ಸಾಧನ ಎಂದಿದ್ದಾರೆ. (ಕೆ.ಆರ್. ಶಾಂತಿಬಾಯಿ ಸಂಗ್ರಹ, ಕೇಶವಾದಿ ಚತುರ್ವಿಂಶತಿ ನಾಮಾವಳಿಗಂಥ) ಮೊಟ್ಟ ಮೊದಲಿಗೆ ಅವ್ವನವರ ಹಾಡುಗಳಲ್ಲಿ ಈ ಕೇಶವಾದಿ ಚತುರ್ವಿಂಶತಿ ಗಮನಿಸಬಹುದಾಗಿದೆ. ಇದು ಆಕೆಯ ಶಾಸ್ತ್ರಪಾಂಡಿತ್ಯದ ಉನ್ನತಿಯನ್ನು ತಿಳಿಸುತ್ತದೆ.

ಕೇಶವ ನಾರಾಯಣ ಶ್ರೀಶಮಾಧವ
...............................
...............................
ಸರ್ವೇಶ ಗೋವಿಂದ

ಅಕ್ಕಮಹಾದೇವಿ ತನ್ನ ವೈರಾಗ್ಯ ಬದುಕಿಗೆ ಶಿವನೇ ಪತಿಯೆಂದು, ಭಕ್ತಿ ನಿವೇದನೆಯಲ್ಲಿ ಸಂಭ್ರಮದ ವರ್ಣನೆಯನ್ನು ಬಣ್ಣಿಸಿಕೊಳ್ಳುವುದು ಹೀಗೆ,

ಪಚ್ಚೆಯ ನೆಲೆಗಟ್ಟು ಕನಕದ ತೋರಣ ವಜ್ರದ ಕಂಭ
ಹವಳದ ಚಪ್ಪರವಿಕ್ಕಿ ಮದುವೆಯ ಮಾಡಿದರು

ಎಂದು ಚೆನ್ನಮಲ್ಲಿಕಾರ್ಜುನನ್ನು ಗಂಡನಾಗಿ ಪಡೆಯಲು ಹಂಬಲಿಸಿದರೆ, ಅವ್ವನವರು, ದ್ವಾರಕೆಯ ಕೃಷ್ಣನ ಸಿರಿ ಸೌಂದರ್ಯದ ವರ್ಣನೆಯನ್ನು ಬಣ್ಣಿಸಿರುವುದು ಹೀಗೆ,

ಹಸಿರು ಪಚ್ಚೆವ ಬಿಗಿದ ಕುಸುರು
ಸಿಂಹಾಸನ ದೇಶಕೆಲ್ಲ ಬೆಳಕು ಎಸೆಯುತ
ಪಚ್ಚೆದ ಪಾವಟಿಗೆ, ರತ್ನ ಹಚ್ಚಿದ ಚೌಕಟ್ಟು

ಹೀಗೆ ಅಕ್ಕಮಹಾದೇವಿ ಲೌಕಿಕ ಆಗಮಿಕ (ಧಾರ್ಮಿಕ) ಗಳನ್ನು ಒಂದರೊಳಗೊಂದು ಬೆಸೆದರೆ, ಅವ್ವ ದ್ವೈತ ಸಿದ್ಧಾಂತದ ಹಿನ್ನಲೆಯಲ್ಲಿ ಅವೆರಡನ್ನು ಪ್ರತ್ಯೇಕಿಸಿ ನೋಡಲು ಪ್ರಯತ್ನಿಸಿದ್ದಾರೆ.

ಒಟ್ಟಾರೆ ಕನ್ನಡ ಸಾಹಿತ್ಯದ ಮಹಿಳಾ ಕವಯಿತ್ರಿಯರಲ್ಲಿ ಅಕ್ಕಮಹಾದೇವಿ ವಚನ ಸಾಹಿತ್ಯದ ಮೇರು ವಿದ್ವತ್ತಿನ ಶ್ರೇಷ್ಠ ಕವಯಿತ್ರಿಯಾಗಿದ್ದಾಳೆ. ಆಕೆಯ ನಂತರ ವೈಚಾರಿಕ ಸತ್ವವುಳ್ಳ ರಚನೆಗಳು ಮುಂದಿನ ಶರಣೆಯರಲ್ಲಿ ಸಾಗಿ ಬಂದಿರುವುದು ಅಕ್ಕನ ಪ್ರಭಾವವನ್ನು ತಿಳಿಸುತ್ತವೆ.

ಅಂತೆಯೇ ಹರಿದಾಸ ಸಾಹಿತ್ಯದಲ್ಲಿ ಮಹಿಳೆಯರು ಭಾಗವಹಿಸಿದ್ದು, ಧಾರ್ಮಿಕ ವಿಚಾರಗಳಿಗೆ ತಮ್ಮದೇಯಾದ ರೀತಿಯಲ್ಲಿ ಪ್ರತಿಕ್ರಿಯಿಸಿದ್ದಾರೆ. ಅಕ್ಕನ ನಂತರದ ಕಾಲಘಟ್ಟದಲ್ಲಿ ಕಾಣಬರುವ ಕವಯಿತ್ರಿಯರು ಕಾವ್ಯ ರಚಿಸಿದ್ದಾರೆ. ಅವರ ರಚನೆಗಳು ಅಂದಿನ ಧಾರ್ಮಿಕ, ಸಾಂಸ್ಕೃತಿಕ ವಿಚಾರಗಳಿಗೆ ಮಾತ್ರ ಸೀಮಿತವಾಗಿದ್ದವು. ಈ ಹಿಂದೆ ಹೇಳಿದಂತೆ ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ, ಆಕೆಯ ನಂತರದ ಶೃಂಗಾರಮ್ಮ, ಚೆಲುವಾಂಬೆಯರು ವೈಷ್ಣವ ಕಾವ್ಯ ರಚಿಸಿದರು. ಆದರೆ ಅವರ ಕಾವ್ಯದ ವಸ್ತು ಧಾರ್ಮಿಕವಾದವು. ಶೈಲಿ, ನಿರೂಪಣೆಗಳು ಸಂದರ್ಭೋಚಿತವಾಗಿದ್ದವು. ಇವರ ಕಾಲಮಾನದಲ್ಲೇ ಬರುವ ಗಲಗಲಿ ಅವ್ವನವರು ತಮ್ಮ ಪ್ರತಿಭಾಪೂರ್ಣ ವಿದ್ವತ್ತಿನಿಂದ ಅಂದಿನ ವಿದ್ವಾಂಸರು, ರಾಜರಿಂದ ಮನ್ನಣೆ ಪಡೆಯುವ ಉನ್ನತ ವ್ಯಕ್ತಿತ್ವದವರಾಗಿದ್ದಾರೆ. ಅವರ ರಚನೆಗಳು ಸಮಕಾಲೀನ ಧಾರ್ಮಿಕ ತತ್ವ ಹಾಗೂ ಸಾಂಸ್ಕೃತಿಕ ವಿಚಾರಗಳಿಗೆ ಮಹತ್ವದ ಕೈಗನ್ನಡಿಯಂತಿವೆ.

ಈ ನಿಟ್ಟಿನಲ್ಲಿ ಗಲಗಲಿ ಅವ್ವನವರನ್ನು ವೈಷ್ಣವ ಕವಯಿತ್ರಿಯರ ಸಾಲಿನಲ್ಲಿ ಪ್ರಥಮ ಕೀರ್ತನಕಾರ್ತಿಯೆಂದು ಸ್ಥಾನ ನಿರ್ದೇಶಿಸಬಹುದು. ಮುಂದಿನವರೆಗೆ ಪ್ರೇರಣೆಯನ್ನಿತ್ತ ಮುಂಚೂಣಿಯ ಪ್ರಮುಖ ಮಹಿಳಾ ಹರಿದಾಸರನ್ನಾಗಿ ಗುರುತಿಸಬಹುದು. ಆಕೆಯ ಶಿಷ್ಯ ಭಾಗಮ್ಮನವರು ಅತ್ಯಂತ ಕ್ಲಿಷ್ಟ ತತ್ವಗಳನ್ನೊಳಗೊಂಡ ಸ್ಕಂದ ಪುರಾಣದ ತೃತೀಯ ಭಾಗವನ್ನು ಕನ್ನಡದಲ್ಲಿ ರಚಿಸಿದ ಹೆಗ್ಗಳಿಕೆಗೆ ಪಾತ್ರರಾಗಿ ದಾಸಸಾಹಿತ್ಯದಲ್ಲಿ ದ್ವಿತೀಯ ಹರಿದಾಸ ಮಹಿಳೆ ಎಂದು ಗುರುತಿಸಲ್ಪಟ್ಟಿದ್ದಾರೆ.

೯

# ಸಮಾರೋಪ

ಕನ್ನಡ ಸಾಹಿತ್ಯದಲ್ಲಿ ಮಹಿಳಾ ಸಾಹಿತ್ಯ ರಚನೆಯು ಪ್ರಮುಖವಾಗಿದೆ. ಹರಿದಾಸ ಸಾಹಿತ್ಯದಲ್ಲಿ ಮಹಿಳಾ ಹರಿದಾಸರು ಹರಿನಾಮ ಸ್ಮರಣೆಯನ್ನು ಕಾವ್ಯವಾಗಿಸಿದ್ದಾರೆ. ಈ ಕುರಿತು ಮಹಿಳೆಯರ ಸಾಹಿತ್ಯಿಕ ಪ್ರಯತ್ನವು ಹರಿದಾಸ ಸಾಹಿತ್ಯದ ಹಿರಿಮೆಯಾಗಿದೆ. ಸಾಹಿತ್ಯ ಸರ್ವರ ಹಿತವನ್ನು ಕಾಪಾಡುವುದಾಗಿದೆ. ಇಲ್ಲಿ ಹರಿಯೇ ಸರ್ವೋತ್ತಮ. ಹರಿದಾಸರ ಬದುಕು ಹರಿಮಯವೆನಿಸುವುದು ಎಲ್ಲ ಹರಿದಾಸರ ಕಾವ್ಯದ ಮುಖ್ಯ ಆಶಯವಾಗಿದೆ.

ಮಹಿಳಾ ಹರಿದಾಸರು ತಮ್ಮ ಬದುಕಿನುದ್ದಕ್ಕೂ ಕಂಡ ಅನುಭವಗಳನ್ನು ಹರಿಭಕ್ತಿಯಲ್ಲಿ ಹೋಲಿಸಿ, ಭಾವಿಸಿ, ಸುಖಿಸಿದ್ದಾರೆ. ಭಕ್ತಿ ಎಂಬುದನ್ನು ಮಾನವರ ಬದುಕಿನ ಸಾರ್ಥಕ ಕ್ಷಣವೆನಿಸಿದ್ದಾರೆ. ತಮ್ಮ ಬದುಕಿನ ನೋವು ದುಃಖಗಳನ್ನು ಹರಿಸ್ಮರಣೆಯಲ್ಲಿ ನಿವಾರಿಸಿಕೊಂಡಿದ್ದಾರೆ.

ಗಲಗಲಿ ಅವ್ವನವರು ಬದುಕಿನ ಬಹುಭಾಗವನ್ನು ಹರಿಭಕ್ತಿಗೆ ಮೀಸಲಿರಿಸಿದ್ದಾರೆ. ಅವರ ಬದುಕು ಬರಹಗಳು ಮುಂದಿನ ಮಹಿಳಾ ಹರಿದಾಸರಿಗೆ ಪ್ರೇರಣೆ ನೀಡಿವೆ. ಅವ್ವ ರಚಿಸಿರುವ ಮುಯ್ಯದ ಹಾಡುಗಳು ದೀರ್ಘ ಕಥನ ಕಾವ್ಯವಾಗಿವೆ. ಅವರ ರಚನೆಯಲ್ಲಿ ಕಾವ್ಯವೊಂದು ಸಹಜ ಸುಂದರತೆಯ ಸಾಲಂಕೃತ ಕಲಾಕೃತಿಯೆನಿಸಿದೆ. ಅವರು ಭಾವಿಸಿರುವ ರಮಿಅರಸನ ಕುಟುಂಬ ಪ್ರೀತಿಯು 'ವಸುದೈವ ಕುಟುಂಬಕಂ' ಎಂಬಂತೆ ಸಮಾಜಮುಖಿಯಾಗಿದೆ.

ಅವ್ವನವರ ಭಾಷೆ ಮತ್ತು ಸಾಹಿತ್ಯಗಳೆರಡೂ ಸರಳವಾಗಿವೆ. ತಮ್ಮ ಹಾಡುಗಳಿಗೆ ಜನಭಾಷೆಯನ್ನು ಬಳಸಿಕೊಂಡಿದ್ದಾರೆ. ಅವರ ನಿರೂಪಣಾ ಶೈಲಿಯು ಸರಸಮಯವಾಗಿದೆ. ದೇಸಿ ನುಡಿ ಬಳಕೆ ಅವ್ವನವರ ಬರವಣಿಗೆಯ ವಿಶಿಷ್ಟತೆ ಎಂಬುದನ್ನು ಗಮನಿಸಲಾಗಿದೆ. ಆ ಮೂಲಕ ಧರ್ಮ ಪ್ರಸಾರ, ಧಾರ್ಮಿಕ

ತತ್ತ್ವ ವಿಚಾರಗಳನ್ನು ಒಳಗೊಂಡಿರುವ ಮೌಲಿಕವಾದ ಸಮಾಜಮುಖಿ ಸಾಹಿತ್ಯ ಅವ್ವನವರಿಂದ ರಚನೆಯಾಗಿವೆ.

ಅವ್ವನವರ ಬದುಕು ಒಂದು ಪಾಠಶಾಲೆಯಾಯಿತು. ಶಿಕ್ಷಣವೇ ಅವರ ಬಾಳಿನ ಗುರಿಯಾಯಿತು. ಈ ಗುರಿ ಸಾಧನೆಗೆ ಭಕ್ತಿಯು ಮೂಲ ಕಾರಣವಾಯ್ತು. ಅವರ ಬದುಕಿನುದ್ದಕ್ಕೂ ಪಡೆದ ಅನುಭವಗಳನ್ನು ಆತ್ಮವಿಶ್ವಾಸದಿಂದ ಸ್ವೀಕರಿಸಿದರು. ವಿದ್ಯೆಯು ಎಲ್ಲ ಮಹಿಳೆಯರಿಗೆ ಅಂದು ಸುಲಭ ಸಾಧ್ಯವಾಗಿರಲಿಲ್ಲ. ಬಹುಪಾಲು ಮಹಿಳಾ ಹರಿದಾಸರು ಭಕ್ತಿಯನ್ನು ವೈರಾಗ್ಯದ ಮೂಲಕ ಸಾಧಿಸಿದ್ದಾರೆ. ಆದರೆ ಅವ್ವ, ಬ್ರಾಹ್ಮಣ ಕುಟುಂಬದಲ್ಲಿ ವಿಧವಾ ಮಹಿಳೆಯಾಗಿದ್ದೂ, ತಮ್ಮ ಬಲಮಕ್ಕಳಿಂದ ಶಿಕ್ಷಣ ಪಡೆದು ಬದುಕನ್ನು ಸಾರ್ಥಕವಾಗಿಸಿಕೊಂಡಿರುವುದು ಅವರ ಪ್ರತಿಭಾಸಂಪನ್ನ ಗುಣವಿಶೇಷವಾಗಿದೆ.

ಅವ್ವ ಬದುಕಿರುವ ಕಾಲ ಹರಿದಾಸ ಸಾಹಿತ್ಯದ ಪುನರುಜ್ಜೀವನದ ಕಾಲ. ಅಂದಿನ ಮಹಿಳೆಯರು ಮನೆ ಮನೆಯಲ್ಲೂ ಸಂಪ್ರದಾಯ, ಆಚಾರ ವಿಚಾರಗಳಲ್ಲಿ ಭಕ್ತಿಯನ್ನು ರೂಢಿಸಿಕೊಂಡಿದ್ದರು. ಅವ್ವ ಶಿಕ್ಷಣ ಪಡೆಯುವ ಮೂಲಕ ಸಂಪ್ರದಾಯದಲ್ಲಿನ ಭಕ್ತಿಗೆ ವಿಶೇಷ ಮೆರಗು ತಂದಳು. ಅವರು ಧಾರ್ಮಿಕ ವಿಚಾರಗಳನ್ನು ಪ್ರಸ್ತಾಪಿಸುವುದು. ವೈಚಾರಿಕ ನೆಲೆಗಟ್ಟಿನಲ್ಲಿ ಮಹಿಳೆಯಾಗಿ ಅಂದಿನ ವಿದ್ವತ್ ಸಭೆಗಳಲ್ಲಿ ಭಾಗವಹಿಸುವುದು, ಪಂಡಿತೋತ್ತಮರ ಸಮಸ್ಯೆ ಸವಾಲುಗಳಿಗೆ ಉತ್ತರಿಸುವ ದಿಟ್ಟತನ. ಹಾಗೂ ಧಾರ್ಮಿಕ ವಿಚಾರಗಳಾದ ಪ್ರಮೇಯಗಳನ್ನು ಬಿಡಿಸಿ ಪರಿಹಾರ ಸೂಚಿಸುವ ಪ್ರತಿಭಾವಂತರಾಗಿದ್ದರು. ಬದುಕಿನುದ್ದಕ್ಕೂ ಸವಾಲುಗಳನ್ನು ಸ್ವೀಕರಿಸುತ್ತಲೇ ಬಾಳಿದರು.

ಅಂದಿನ ಹರಿದಾಸ ಸಾಹಿತ್ಯದ ಪುನರುಜ್ಜೀವನ ಕಾಲಘಟ್ಟದಲ್ಲಿ ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಸಂದಿಗ್ಧತೆಯಿಂದ ಸಮಾಜದಲ್ಲಿ ಗೊಂದಲವುಂಟಾಗಿತ್ತು. ಇಂತಹ ಸಂದರ್ಭದಲ್ಲಿ ಮಹಿಳಾ ಹರಿದಾಸರು ತಮ್ಮದೇ ಕುಟುಂಬದ ಆವರಣದಲ್ಲಿ ಕೀರ್ತನೆ ರಚನೆ ಮಾಡಿರುವುದು ಅವರ ಭಕ್ತಿಯ ಸಾಧನೆಯಾಗಿದೆ. ಅಂಥವರಲ್ಲಿ ಗಲಗಲಿ ಅವ್ವನವರು ಪ್ರಥಮರೂ ಹೌದು ಪ್ರಮುಖರೂ ಹೌದು.

ಅವ್ವ, ತಮ್ಮ ಕೌಟುಂಬಿಕ ಪ್ರೀತಿಯನ್ನು ಕಾವ್ಯದಲ್ಲಿ ಅಭಿವ್ಯಕ್ತಿಸಿದ್ದಾರೆ. ಕುಟುಂಬವೆಂಬುದು ಪತಿ ಪತ್ನಿಯರಷ್ಟೇ ಅಲ್ಲದೇ ಅಲ್ಲಿ ಅಣ್ಣ ತಂಗಿ, ಅತ್ತಿಗೆ ನಾದಿನಿ, ಭಾವ, ಮೈದುನ, ಬೀಗರು, ಬಂಧುಗಳು, ಪರಿವಾರ ಜನ ಹೀಗೆ ಸಾಲು ಸಾಲು ಸಂಬಂಧಗಳನ್ನು ಹೆಸರಿಸುತ್ತಾ, ಅವಿಭಕ್ತ ಕುಟುಂಬದ ಕೌಟುಂಬಿಕ ಸಂಬಂಧಗಳ ಶಬ್ದಚಿತ್ರಣವನ್ನು ಕಟ್ಟಿಕೊಡುತ್ತಾರೆ. ಆ ಮೂಲಕ ಅವರು ಭಾವಿಸುವ ಸಮಾಜವು ಸುಖಿಸಂಸಾರ ಮಾತ್ರವಲ್ಲ. ಆ ಪರಿವಾರದಲ್ಲಿ ಉಂಟಾಗುವ ಮಾನವ ಸಂಬಂಧಗಳ ಸಂಘರ್ಷವನ್ನು ಭಾವ ಸಂಕೀರ್ಣತೆಯನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ. ಅವರು ಕಾಣುವ ಪಾತ್ರಗಳಲ್ಲಿ ಭಾವ ವೈವಿಧ್ಯತೆ ಹಾಗೂ ಪುರಾಣ ಪ್ರಸಂಗಗಳ ಪಾತ್ರಗಳಲ್ಲಿ ಮಾನವ ಸಂಬಂಧಗಳ

ತಾಕಲಾಟವಿದೆ. ದ್ವೈತಮತ ವಿಚಾರವನ್ನು ತಾವು ಕಂಡ ಅನುಭವಗಳೊಡನೆ ಹೋಲಿಸಿ, ಮಾನವ ಸಂಬಂಧಗಳೊಡನೆ ಪರಿಭಾವಿಸಿರುವ ಪರಿಯನ್ನು ಇಲ್ಲಿ ಗ್ರಹಿಸಲಾಗಿದೆ.

ಅಪ್ಪನವರ ಸಮಾಜಮುಖಿ ಕೀರ್ತನೆಗಳಲ್ಲಿ ವ್ಯವಹರಿಸುವ ಪಾತ್ರಗಳು ನಮ್ಮ ನಡುವಿರುವ ಜೀವಂತ ರೂಪಗಳೆನಿಸುತ್ತವೆ. ಅವ್ವ, ಮನೆಯ ಕಿರಿಯರಲ್ಲಿ ನಡೆಯುವ ವಾಗ್ವಾದಗಳನ್ನು ನಿವಾರಿಸಿ ಸಂತೈಸುವ ಹಿರಿಯಳಂತೆ ಕಾವ್ಯವನ್ನು ನಿರೂಪಿಸಿದ್ದಾಳೆ. ತನ್ನ ಕಾವ್ಯದುದ್ದಕ್ಕೂ ಪತಿ ಪತ್ನಿಯರ ಸಂಬಂಧದಷ್ಟೇ ಸೋದರತೆಗೂ ಪ್ರಾಮುಖ್ಯತೆ ಒದಗಿಸಿದ್ದಾಳೆ. ಅವರ ಹಾಡುಗಳು ಇಂದಿಗೂ ಜನಸಾಮಾನ್ಯರಲ್ಲಿ ಸ್ಥಳೀಯವಾಗಿ ಹಾಡಿಸಿಕೊಳ್ಳುತ್ತಿರುವುದು ಕಂಡುಬರುತ್ತವೆ. ಅಪ್ಪನವರನ್ನು ಕುರಿತ ಈ ಪ್ರಬಂಧದಲ್ಲಿ ಪ್ರಸ್ತಾಪಿಸುವ ಸಾಹಿತ್ಯ, ಸಮಾಜ, ಧರ್ಮ ಇತರೆ ವಿಚಾರಗಳೊಡನೆ ಕೀರ್ತನೆ ಅಡಕವಾಗಿಸಿಕೊಂಡಿರುವ ಮಾನವ ಸಂಬಂಧಗಳ ಹಿರಿಮೆಯನ್ನು ವಿಸ್ತಾರವಾಗಿ ವಿವೇಚಿಸಲಾಗಿದೆ.

**ಈ ಪ್ರಬಂಧದಲ್ಲಿ ಕಂಡುಕೊಂಡ ಫಲಿತಗಳು ಹೀಗಿವೆ**

೧. ಗಲಗಲಿ ಅಪ್ಪನವರು ಹರಿದಾಸ ಸಾಹಿತ್ಯದಲ್ಲಿ ಪ್ರಮುಖ ಹಾಗೂ ಪ್ರಥಮ ಮಹಿಳೆಯೆನಿಸಿದ್ದಾರೆ. ತಮ್ಮ ಕೀರ್ತನೆಗಳ ಮೂಲಕ ಹರಿಭಕ್ತಿಯನ್ನು ಪ್ರಚುರಪಡಿಸಿದ್ದಾರೆ. ಇಲ್ಲಿ ಅವ್ವ ಪ್ರಸ್ತಾಪಿಸುವ ಪಾತ್ರಗಳಲ್ಲಿ ಮಾನವ ಸಂಬಂಧಗಳನ್ನು ಗುರುತಿಸುವುದು ಕಾವ್ಯದ ಮೂಲ ಆಶಯವಾಗಿದೆ. ಹಾಡುಗಳಲ್ಲಿ ಮನುಷ್ಯ ಸಂಬಂಧಕ್ಕೆ ಜನಪದರ ಬದುಕಿನ ಧಾಟಿಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾಳೆ. ಪ್ರತಿಮೆಗಳ ಮೂಲಕ ತಮ್ಮ ಕಾವ್ಯವನ್ನು ಸುಂದರವಾಗಿಸಿದ್ದಾರೆ. ಅವರ ಪ್ರತಿಮೆಗಳೆಲ್ಲಾ, ಜೀವಂತ ಪಾತ್ರಗಳಾಗಿ ಧ್ವನಿಸುತ್ತವೆ. ಅವುಗಳೆಲ್ಲಾ ಜನಪದರ ಬದುಕಿಗೆ ಹತ್ತಿರವಿರುವ ಸಂಗತಿಗಳಾಗಿವೆ. ಇವು ದೇಸಿಯತೆಗೆ ಪೂರಕವಾಗಿವೆ. ಈ ಮೂಲಕ ಅವ್ವ, ಜನಸಾಮಾನ್ಯರ ನಡುವಿನ ಸಮಾಜವನ್ನು ಗುರುತಿಸಿದ್ದಾರೆ. ಅಂದಿನ ಸಾಮಾಜಿಕ, ಸಾಂಸ್ಕೃತಿಕ ಘಟನೆಗಳ ಭಾಷಿಕ ಸಂಕಥನವನ್ನು ಕಾವ್ಯ ನಿರೂಪಿಸುತ್ತದೆ. ವೈಚಾರಿಕ ಮನೋಭಾವದ ಅವ್ವ, ತಾವು ಕೇಳಿದ, ನೋಡಿದ ಲೋಕಾನುಭವವನ್ನು ಹಾಗೂ ಮಾನವ ಸ್ವಭಾವಗಳನ್ನು ಕೀರ್ತನೆಗಳಲ್ಲಿ ಗುರುತಿಸಿದ್ದು, ಅವುಗಳ ವಿಶ್ಲೇಷಣಾತ್ಮಕವಾದ ಅಧ್ಯಯನ ಮಾಡಲಾಗಿದೆ.

ಸಮಾಜದಲ್ಲಿ ಬದುಕನ್ನು ಮಹಿಳಾ ದೃಷ್ಟಿಕೋನದಿಂದ ವಿಶೇಷವಾಗಿ ಗ್ರಹಿಸಿದ್ದಾರೆ. ಅವರ ಅಭಿವ್ಯಕ್ತಿಯ ಒಂದೊಂದು ಸಾಲು ವಿಚಾರಪೂರ್ಣವಾಗಿದೆ. ಅಲ್ಲಿ ಪ್ರಸ್ತಾಪಿಸುವ ವರ್ಗಸಂಘರ್ಷವನ್ನು ಪಾತ್ರಗಳಲ್ಲಿ ಸಮರ್ಥವಾಗಿ ಹಿಡಿದಿಟ್ಟಿದ್ದಾರೆ. ಸಾಮಾಜಿಕವಾಗಿ ಅಂದು ನಡೆಯುತ್ತಿರುವ ವೈರುಧ್ಯಗಳನ್ನು, ಮಾನವೀಯ ಗುಣಗಳನ್ನು ಶಬ್ದಚಿತ್ರಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. ಈ ಎಲ್ಲಾ ಸಂಗತಿಗಳನ್ನು ತುಲನಾತ್ಮಕವಾಗಿ ಕೀರ್ತನೆಗಳ ವಿವೇಚನೆ ಎಂಬ ಭಾಗದಲ್ಲಿ ವಿವೇಚಿಸಲಾಗಿದೆ.

೨. ಅವ್ವನವರ ಕೀರ್ತನೆಗಳಲ್ಲಿ ಮುಯ್ಯದ ಹಾಡುಗಳು ವಿಶೇಷವಾದವು. ಅವುಗಳೊಡನೆ ಮೋರೆಗೆ ನೀರು ತರುವ ಹಾಡು, ಕೋಲು ಪದಗಳು, ಜೋಗುಳದ ಹಾಡು ಮತ್ತು ಸೇತುಬಂಧದ ಹಾಡು ಮುಂತಾದವುಗಳು ದೀರ್ಘವಾದ ಕಥನ ಗೀತೆಗಳಾಗಿವೆ. ಪ್ರಸ್ತುತ ಪ್ರಬಂಧದಲ್ಲಿ ಮುಯ್ಯದ ಹಾಡುಗಳ ವಿಶೇಷತೆಯನ್ನು ಕುರಿತು ಚರ್ಚಿಸಲಾಗಿದೆ. ಉದಾ. ಮುಯ್ಯದ ಸಂದರ್ಭವು ಮಾನವ ಸಂಬಂಧಗಳನ್ನು ಬಿಗಿಗೊಳಿಸುವಂತಹದ್ದು. ಅದನ್ನು ಭಕ್ತ ಭಗವಂತರ ನಡುವಿನ ಅನ್ಯೋನ್ಯತೆಯ ಸಾಕ್ಷೀಕರಣ ಎಂಬಂತೆ ಗುರುತಿಸಿ ಚರ್ಚೆ ಬೆಳೆಸಲಾಗಿದೆ.

೩. ಸಾಮಾಜಿಕ ಸಂಘರ್ಷ, ಸಮಕಾಲೀನ ಸಾಂಸ್ಕೃತಿಕ ಸಂದರ್ಭ, ಧಾರ್ಮಿಕ ವಿಚಾರಗಳ ಹಿನ್ನೆಲೆಯಲ್ಲಿ ಅನೇಕ ವಿವರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಹರಿದಾಸರು ತಮ್ಮ ಕೀರ್ತನೆಗಳಲ್ಲಿ ವೈಚಾರಿಕ ಆಲೋಚನೆಗಳನ್ನು ಬಿಂಬಿಸಿದ್ದಾರೆ. ಅಂತೆಯೇ, ಅವ್ವನವರು ತಮ್ಮ ಕೀರ್ತನೆಗಳಲ್ಲಿ ದ್ವೈತ ತತ್ವವನ್ನು ಪ್ರತಿಪಾದಿಸುತ್ತಾ, ವರ್ಗಸಂಗರ್ಷವನ್ನು ವಿರೋಧಿಸಿದ್ದಾರೆ.

ಉದಾ. ಚಂದ್ರಜ್ಯೋತಿಗಳು ಹೊಳೆವಂಥ ಯಾದವರ ಕೂಡ ತಂದೆ ರಾಮೇಶ ನಿಂತಾನಮ್ಮ

''ಒಬ್ಬರೆಲ್ಲದಲಿ ಇಡಿಸುವೆ
ಇವರನು ಗುಬ್ಬಿಯ ಹಾಂಗೆ ಭಯ ಪಡಿಸುವೆ''
''ಇವ ಬಲು ಕಳ್ಳ ನಮ್ಮ ಮಾಧವ ಬಲು ಸುಳ್ಳ
ನವ ನವ ಗುಣಗಳ ಹಿಡಿಸಿದನ್ನಳ್ಳ.
ನಿತ್ಯ ತೃಪ್ತನೆಂಬೊ ಸ್ತುತ್ಯಾರ್ಥ ನಿನ್ನಬಿಟ್ಟು
ಎತ್ತ ಹೋದವಯ್ಯು ನಮಗ್ಹೇಳೊ ಯದುಪತಿ''

ಈ ರೀತಿಯ ಕೀರ್ತನೆಗಳನ್ನು ಗಮನಿಸಿ ಚರ್ಚಿಸಲಾಗಿದೆ.

೪. ಸಮಾಜೋಧಾರ್ಮಿಕ ಸಂಗತಿಗಳಿಂದಲೂ ಅವ್ವನವರ ಕೀರ್ತನೆಗಳು ಪ್ರಮುಖವೆನಿಸುತ್ತವೆ. ಕನ್ನಡದಲ್ಲಿ ದ್ವೈತತತ್ವವನ್ನು ಸರಳವಾಗಿ ವಿವರಿಸುವವರು. ಜನಭಾಷೆಗೆ ಹೆಚ್ಚು ಪ್ರಾಮುಖ್ಯತೆ ನೀಡಿದ್ದಾರೆ. ಅಂತೆಯೇ ಅವ್ವನವರು ತಮ್ಮ ಕೃತಿಗಳಲ್ಲಿ ಧಾರ್ಮಿಕ ವಿಚಾರಗಳ ಪ್ರಮೇಯಗಳನ್ನು ಸರಳವಾಗಿ ಬಿಡಿಸಿ ಹೇಳುವರು. ಅವುಗಳಿಗೆ ತಕ್ಕುದಾದ ಪರಿಹಾರವನ್ನು ಸೂಚಿಸಿರುವರು. ಇಲ್ಲಿ ಅವರ ಕಾವ್ಯಕ್ಕೆ ಜನಪದರ ಬದುಕು, ಸಾಹಿತ್ಯವು ಮೂಲ ಆಕರವಾಗಿರುವುದು. ಅವರು ಪ್ರಸ್ತಾಪಿಸುವ ಗಾದೆ, ಶಕುನ, ಒಗಟು, ಮುಹೂರ್ತ, ನಕ್ಷತ್ರ ಇತ್ಯಾದಿಗಳ ವಿಶೇಷತೆಯೆಲ್ಲಾ ಅವರ ಪ್ರತಿಭೆಯಿಂದ ನವಭಾವವಾಗಿ, ರಸಾನುಭೂತಿಯುಂಟುಮಾಡುತ್ತವೆ. ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ.

೫. ವಚನ ಸಾಹಿತ್ಯದಲ್ಲಿ ಮಹಿಳೆಯರಿಗೆ ವಿಶೇಷವಾದ ಪ್ರಾತಿನಿಧ್ಯ ಕಂಡುಬಂದಂತೆ ದಾಸ ಸಾಹಿತ್ಯದಲ್ಲೂ ಮಹಿಳಾ ಹರಿದಾಸರ ರಚನೆಗಳು ವಿಶಿಷ್ಟವೆನಿಸುತ್ತವೆ. ಅವರ ಬದುಕು-ಬರಹಗಳು

ಕೌಟುಂಬಿಕ ಆವರಣದಲ್ಲಿಯೇ ಅನಾವರಣಗೊಳ್ಳುವುದು. ಮಹಿಳಾ ಹರಿದಾಸರು ವೈರಾಗ್ಯದ ಮೂಲಕ ಭಕ್ತಿಯನ್ನು ರೂಢಿಸಿಕೊಂಡವರು. ಅವರು ಸಮಾಜವನ್ನು ಗ್ರಹಿಸುವ ವಿಧಾನ, ಸಾಮಾಜಿಕ, ಧರ್ಮವನ್ನು ನಿರ್ವಹಿಸಿದ ರೀತಿ ವಿಶೇಷವೆನಿಸುತ್ತದೆ. ಈ ನಿಟ್ಟಿನಲ್ಲೂ ಅವ್ವನವರ ರಚನೆಗಳು ಗಮನಸೆಳೆಯುತ್ತವೆ. ಮಹಿಳಾ ಹರಿದಾಸ ಸಾಹಿತ್ಯದಲ್ಲಿ ಬಹುಪಾಲು ಮಹಿಳೆಯರು ಬದುಕಿನ ವೈರಾಗ್ಯ ಭಾವದಿಂದ ಭಕ್ತಿಯನ್ನು ಗ್ರಹಿಸಿದ್ದಾರೆ ಆಚರಿಸಿದ್ದಾರೆ. ಕುಟುಂಬವೇ ಅವರ ಭಕ್ತಿಯ ಭಿತ್ತಿ. ೧೮ನೇ ಶತಮಾನದ ಪೂರ್ವಾರ್ಧದಲ್ಲಿ ಭಕ್ತಿಯು ಆಂದೋಲನವಾಗಿ ಪರಿಣಮಿಸಿರುವುದು. ಭಕ್ತಿ-ಆಚಾರ-ವಿಚಾರ, ನಂಬಿಕೆ-ನಡೆ-ನುಡಿಗಳನ್ನು ಮಹಿಳೆಯ ಸ್ವತಂತ್ರ ವೈಚಾರಿಕ ನೆಲೆಗಟ್ಟಿನಿಂದ ಅವ್ವನವರ ವೈಚಾರಿಕ ಮನೋಭಾವವನ್ನು ವಿಮರ್ಶಾತ್ಮಕವಾಗಿ ಅಭ್ಯಸಿಸಲಾಗಿದೆ.

೬. ಗೇಯ ಪ್ರಧಾನವಾದ ಹರಿದಾಸ ಸಾಹಿತ್ಯದಲ್ಲಿ ಭಾಷೆ ದೇಸಿಯತೆನ್ನು ರೂಢಿಸಿಕೊಂಡಿದೆ. ಅಂತೆಯೇ ಅವ್ವನವರ ಹಾಡುಗಳು ಇಂದಿಗೂ ಸ್ಥಳೀಯರಲ್ಲಿ ಹಾಡಿಸಿಕೊಂಡಿರುವುದು ಗೋಚರಿಸುತ್ತದೆ. ಸಹಜ ಸುಸಂಗತ ಭಾಷಾ ಶೈಲಿಯಿಂದ ರಚನೆಗೊಂಡ ಅವ್ವನವರ ರಚನೆಗಳು ತುಂಬ ಆಕರ್ಷಕವಾಗಿವೆ. ಸರಸ-ವಿರಸಗಳ ಸಂವಾದ ರೂಪದಲ್ಲಿರುವ ಹಾಡುಗಳು ನಿಂದಾಸ್ತುತಿ ತಂತ್ರದಿಂದ ರಂಜನೀಯವಾಗಿವೆ. ಅಲ್ಲೆಲ್ಲಾ ಭಾಷೆಯು ಪ್ರತಿಮೆಗಳಿಂದ ಕೂಡಿ ಅನೇಕ ವಿಚಾರಗಳನ್ನು ಒಮ್ಮೆಗೆ ಹೊಳೆಯಿಸುತ್ತದೆ. ಇಂಥಲ್ಲಿ ಅವ್ವ ನಿರೂಪಿಸಿರುವ ಪಾತ್ರಗಳಲ್ಲಿ ತಾವೇ ಪಾತ್ರವಾಗುವ ತನ್ಮಯಭಾವವಿದೆ. ಅವರ ಬದುಕಿನ ಕುರಿತ ಕಾಳಜಿಯನ್ನೂ ಇಲ್ಲಿ ಮುಖ್ಯವಾಗಿ ಅಭ್ಯಸಿಸಲಾಗಿದೆ.

೭. ಹರಿದಾಸ ಸಾಹಿತ್ಯ ಸರಳವಾಗಿ ಜನರ ಮಧ್ಯೆ ಬೆರೆತುಬಿಡುವ ಭಾಷಾ ವೈಶಿಷ್ಟ್ಯತೆಯಿಂದ ಕೂಡಿದೆ. ಗೇಯಗುಣದ ಕೀರ್ತನೆಗಳು ಹರಿದಾಸರ ಪ್ರೇರಣೆ ಪ್ರಭಾವಗಳಿಂದ ರಚಿತವಾಗಿವೆ. ಅವ್ವನವರ ನಂತರದ ಮಹಿಳಾ ಹರಿದಾಸರು ರಚಿಸಿರುವ ಕೀರ್ತನೆಗಳು ಅವರ ಪ್ರೇರಣೆ ಪ್ರಭಾವಗಳಿಂದ ಕೂಡಿರುವುದನ್ನು ಇಲ್ಲಿ ತೌಲನಿಕವಾಗಿ ಚರ್ಚಿಸಲಾಗಿದೆ.

೮. ಕನ್ನಡ ಮಹಿಳಾ ಸಾಹಿತ್ಯದಲ್ಲಿ ಅಕ್ಕಮಹಾದೇವಿಯನ್ನು ಪ್ರಥಮ ಕವಯಿತ್ರಿಯಾಗಿ ಗುರುತಿಸಲಾಗಿದೆ. ಅಂತೆಯೇ ಅವ್ವನವರನ್ನು ದಾಸ ಸಾಹಿತ್ಯದಲ್ಲಿ ಪ್ರಥಮ ಹರಿದಾಸ ಮಹಿಳೆಯಾಗಿ ಗುರುತಿಸುವ ಪ್ರಯತ್ನ ಈ ಅಧ್ಯಾಯದಲ್ಲಿದೆ. ಅವರ ಕಾಲ, ಬದುಕು, ಬರಹಗಳ ಕುರಿತು ತೌಲನಿಕವಾಗಿ ವಿವೇಚಿಸಿ ಕನ್ನಡ ಮಹಿಳಾ ಹರಿದಾಸ ಸಾಹಿತ್ಯದಲ್ಲಿ ಅವ್ವನವರ ಸ್ಥಾನವನ್ನು ಗುರುತಿಸುವ ಪ್ರಯತ್ನ ಇಲ್ಲಿನ ವಿಶೇಷ ಅಧ್ಯಯನವಾಗಿದೆ.

೯. ಈ ಮೇಲಿನ ಅಂಶಗಳನ್ನು ಪ್ರಸ್ತಾಪಿಸಿರುವ ಎಂಟು ಅಧ್ಯಾಯಗಳಲ್ಲಿ ಪ್ರಥಮ ಮಹಿಳಾ ಹರಿದಾಸರಾದ ಗಲಗಲಿ ಅವ್ವನವರ ಜೀವನ ಮತ್ತು ಕೃತಿಗಳನ್ನು ಕುರಿತು ಸಮಗ್ರ ದಾಸ ಸಾಹಿತ್ಯದ

ಹಿನ್ನಲೆಯಲ್ಲಿ ಅಭ್ಯಸಿಸಲಾಗಿದೆ. ಹಾಗೂ ತೌಲನಿಕ ವಿವೇಚನೆಗೊಳಪಡಿಸಿದೆ. ಒಟ್ಟಾರೆಯಾಗಿ ಗಲಗಲಿ ಅವ್ವನವರ ಬದುಕು-ಬರಹಗಳು ಭಕ್ತಿಪೂರ್ವಕವಾಗಿವೆ. ಅವರ ಬದುಕಿನ ದಾರಿ ಸಮಾಜಮುಖಿ ಯಾಗಿರುವುದು. ಅಂದಿನ ಸಾಮಾಜಿಕ ಸಂದರ್ಭದಲ್ಲಿ ಸಾಂಪ್ರದಾಯಿಕ ವೈದಿಕ ಕುಟುಂಬದ ವಿಧವಾ ಮಹಿಳೆಯೊಬ್ಬರು ರಚಿಸಿದ ಹಾಡುಗಳು ವಿಶೇಷವಾದುವು ಎಂದೇ ಗುರುತಿಸಲಾಗಿದೆ. ಅವರ ಹಾಡುಗಳಲ್ಲಿ ಸಾಂಸ್ಕೃತಿಕ ಹಿರಿಮೆಯು ನಿಂದಾಸ್ತುತಿ ತಂತ್ರದಿಂದ ರೂಪಿತಗೊಂಡಿದೆ. ಜನರಿಗೆ ಉಪದೇಶವು ಬಹುಕಾಲ ರುಚಿಸದು ಎಂಬ ಅನುಭವ ಸತ್ಯದಿಂದ ಸಮಾಜದಲ್ಲಿನ ದೋಷಗಳ ತಿದ್ದುವ ಕಾರ್ಯಕ್ಕೆ ಚಿಕಿತ್ಸಕ ಮನಸ್ಸಿನ ಬುದ್ಧಿಯು ಅತ್ಯವಶ್ಯಕವೆಂಬುದನ್ನು ತಮ್ಮ ಕಾವ್ಯದಲ್ಲಿ ಅವ್ವ ಸಾಧಿಸಿದ್ದಾರೆ. ಅಂದಿನ ಸಾಮಾಜಿಕ ಸಂದರ್ಭಗಳಲ್ಲಿ ಬಹುತೇಕವಾಗಿ ಸಾಂಪ್ರದಾಯಿಕ ವೈದಿಕ ಕುಟುಂಬದ ನಂಬಿಕೆ ಆಚರಣೆಗಳ ಚಿತ್ರಣಕ್ಕೆ, ಅವ್ವನವರ ಕೃತಿಗಳು ಸೀಮಿತವೆನಿಸುತ್ತವೆ. ಅವಿಭಕ್ತ ಕುಟುಂಬದ ಅವಿಭಕ್ತ ಪ್ರಜ್ಞೆಗೆ ನೀರೆರೆದು ಪೋಷಿಸಿ, ಕೂಡು ಕುಟುಂಬಗಳ ನಡುವಿನ ಭಾವನಾತ್ಮಕ ಸುಂದರ ಒಡನಾಟ, ಪರಸ್ಪರ ಒಡಹುಟ್ಟಿದವರ ಸಂಬಂಧಗಳನ್ನು ಮಾರ್ಮಿಕವಾಗಿ ಕಟ್ಟಿಕೊಟ್ಟಿದ್ದಾಳೆ. ಅಂತೆಯೇ ಅವರ ರಚನೆಗಳು ಅವಿಭಕ್ತ ಪ್ರಜ್ಞೆಯ, ಗೇಯಗೀತಾತ್ಮಕ ಕಥನಗಳಾಗಿವೆ. ಆ ಮೂಲಕ ಇಂದಿನ ಯಾಂತ್ರಿಕ ಜಗತ್ತಿನ ವಿಭಕ್ತ ಕುಟುಂಬ ಪ್ರಜ್ಞೆಗೆ ತನ್ನ ಕೃತಿಗಳ ಮೂಲಕ ತೀಕ್ಷ್ಣವಾಗಿ ಪ್ರತಿಕ್ರಿಯಿಸಿದ್ದಾಳೆ.

ಈ ಎಲ್ಲವುಗಳ ಹಿನ್ನಲೆಯಲ್ಲಿ ಗಲಗಲಿ ಅವ್ವನವರ ಜೀವನ ಮತ್ತು ಕೃತಿಗಳನ್ನು ಸಮಕಾಲೀನ ಸಾಂಸ್ಕೃತಿಕ ಸಂಗತಿಗಳೊಂದಿಗೆ ಒಟ್ಟಾರೆ ಸಮತಲದಲ್ಲಿ ಅಭ್ಯಸಿಸಿರುವುದು ಈ ನಿಬಂಧದ ವಿಶಿಷ್ಟತೆ ಎಂದು ಹೇಳಬಹುದಾಗಿದೆ.

# ೧. ಪರಾಮರ್ಶನ ಗ್ರಂಥಗಳು

೧. ಅಬಾಜಿಸಾವಂತ (ಅನು), ಅವ್ವನವರ ಮುಯ್ಯದ ಪದಗಳು ಭಾಗ-೧, ಶ್ರೀ ರಾಮತತ್ವ ಪ್ರಕಾಶನ, ಬೆಳಗಾವಿ, ೧೯೨೭

೨. ಅಮರೇಶ ನುಗಡೋಣಿ, ಹೈದರಬಾದು ಕರ್ನಾಟಕ ಹಾಡು ಪಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೩. ಅಂಗಡಿ ಎಸ್.ಎಸ್., ವಚನ ಸಾಹಿತ್ಯ ಛಂದೋಲಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೪. ಅಂಗಡಿ ಎಸ್.ಎಸ್., ದಾಸ ಸಾಹಿತ್ಯ ಶಬ್ದಶಿಲ್ಪ , ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೫. ಅಂಗಡಿ ಎಸ್.ಎಸ್., ದಾಸ ಸಾಹಿತ್ಯ ಮತ್ತು ಭಾಷೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೬. ಅಗ್ರಹಾರ ಕೃಷ್ಣಮೂರ್ತಿ, ಸಂಸ್ಕೃತಿ ಕಥನ, ಕನ್ನಡ ಮತ್ತು ಸಂಸ್ಕೃತಿಇಲಾಖೆ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು, ೨೦೦೬

೭. ಇಂದೂಬಾಯಿ ಟಿ.ಕೆ., ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೮೭

೮. ಉಷಾರಾಣಿ ಪಿ., ಹೆಳವನಕಟ್ಟೆ ಗಿರಿಯಮ್ಮನ ಜೀವನ ಮತ್ತು ಕೃತಿಗಳು, (ಅಪ್ರಕಟಿತ, ಸಂಶೋಧನ ಪ್ರಬಂಧ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೯. ಉಷಾ ಕೆ.ಪಿ.ರೈ, ಲೇಖಕಿಯರ ಸಣ್ಣಕಥೆಗಳು ಭಾಗ ೨, ಸಾಗರ ಪ್ರಕಾಶನ, ಬನಶಂಕರಿ, ಬೆಂಗಳೂರು, ೨೦೦೫

೧೦. ಎನ್ಕೆ, ದ.ರಾ.ಬೇಂದ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೧

೧೧. ಎಚ್ಚೆಸ್ಕೆ, ದಾಸಸಾಹಿತ್ಯ ದರ್ಶನ, ಮಂಗಳ ಭಾರತಿ ಪ್ರಕಾಶನ, ಮೈಸೂರು, ೧೯೮೪

೧೨. ಕೃಷ್ಣ ಕೊಲ್ಹಾರ, ಕುಲಕರ್ಣಿ ಬಿಜಾಪುರದ ಕಾಖಂಡಕಿ ಮಹಿಪತಿ ದಾಸರು, ಮರಾಠಿ ಕನ್ನಡ ಸ್ನೇಹವರ್ಧನ ಕೇಂದ್ರ, ಪುಣೆ, ೧೯೮೯

೧೩ ಕುವೆಂಪು, ರಸೋವೈಸಃ, ಉದಯರವಿ ಪ್ರಕಾಶನ, ಮೈಸೂರು, ೧೯೯೩

೧೪. ಕುವೆಂಪು, ಕಾವ್ಯವಿಹಾರ, ಉದಯರವಿ ಪ್ರಕಾಶನ, ಮೈಸೂರು, ೧೯೪೬

೧೫. ಗೊರವರ ಬ.ಸೊ., ಕನ್ನಡ ರಚನಾತ್ಮಕ ಮತ್ತು ಸಮಾಜೋ ಭಾಷಿಕ ಅಧ್ಯಯನ, ಲಡಾಯಿ ಪ್ರಕಾಶನ, ಗದಗ, ೨೦೦೮

೧೬. ಜನಪ್ರಿಯ, ವಿಚಾರ ಸಂಗಮ, ಕಿರಣ್ ಎಂಟರ್‌ಪ್ರೈಸಸ್, ಬೆಂಗಳೂರು, ೨೦೦೮

೧೭. ತಿಪ್ಪೇಸ್ವಾಮಿ ಜಿ.ಆರ್., ಮೌಖಿಕ ಕಥನ, ವಿಜಯಲಕ್ಷ್ಮಿ ಪ್ರಕಾಶನ, ಕುವೆಂಪುನಗರ, ಮೈಸೂರು, ೨೦೦೫

೧೮. ತೋಟದ ಎಸ್.ಬಿ., ಮೃಗಜಲ, ಸಂಶೋಧನ ಕೃತಿ, ಶಿಶು ಸಂಗಮೇಶ ಪ್ರಕಾಶನ, ಗೋಕಾಕ, ೨೦೦೦

೧೯. ತಿಪ್ಪೇರುದ್ರಸ್ವಾಮಿ ಹೆಚ್., ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ.ಮೂರ್ತಿ, ಮೈಸೂರು, ೧೯೬೮

೨೦. ದಿವಾಕರ ಆರ್.ಆರ್., ಹರಿಭಕ್ತಸುಧೆ, ರಂಗನಾಥ ರಾಮಚಂದ್ರ, ದಿವಾಕರ, ಆಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ, ೧೮೬೦

೨೧. ದೇವುಡು, ಕರ್ನಾಟಕ ಸಂಸ್ಕೃತಿ, ದೇವುಡು ಪ್ರತಿಷ್ಠಾನ, ಬೆಂಗಳೂರು, ೧೯೩೫

೨೨. ದೇಜಗೌ(ಪ್ರ.ಸಂ), ರಾಜೇಗೌಡ ಹ.ಕ.(ಸಂ), ಸಿರಿಯೊಡಲು, ಸ್ವಾಗತ ಸಮಿತಿ ೬೩ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ, ಮಂಡ್ಯ, ೧೯೯೪

೨೩. ನಾಗವೇಣಿ ಹೆಗಡೆ, ಸರಸ್ವತಿ ಬಾಯಿ ರಾಜವಾಡೆ, ಕರ್ನಾಟಕ ಬುಕ್ ಏಜೆನ್ಸಿ, ಗಾಂಧಿನಗರ, ಬೆಂಗಳೂರು, ೨೦೦೬

೨೪. ನಾರಾಯಣಾಚಾರ್ಯ ಧೂಳಖೇಡ, ಶ್ರೀಗುರು ಜಗನ್ನಾಥದಾಸರು ಮತ್ತು ಇತರ ಸಮಕಾಲೀನರ ಕೃತಿಗಳು, ಸಮಗ್ರದಾಸ ಸಾಹಿತ್ಯ ಸಂಪುಟ ೨೬, ೨೦೦೩

೨೫. ನಾಗರತ್ನ ಟಿ.ಎನ್., ದಾಸಸಾಹಿತ್ಯ ಸೌರಭ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೭

೨೬. ನಾಗರತ್ನ ಟಿ.ಎನ್., ಅಕ್ಕಮಹಾದೇವಿ(ಸಂ) ಹರಪನಹಳ್ಳಿ ಭೀಮವ್ವನ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೨೭. ನಾಗರತ್ನ ಟಿ.ಎನ್., ಕೀರ್ತನಕಾರರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೬

೨೮. ನಾಗರತ್ನ ಟಿ.ಎನ್., ಹರಿದಾಸ ಸಾಹಿತ್ಯದ ಪ್ರಸ್ತುತತೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೨೦೦೯

೨೯. ನಾಗಭೂಷಣ ಡಿ.ಎಸ್., ಕುವೆಂಪು ಸಾಹಿತ್ಯದರ್ಶನ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೭

೩೦. ನಾವಡ ಎ.ವಿ., ವಾದಿರಾಜರ ಶ್ರೀಕೃಷ್ಣಬಾಲಲೀಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೩೧. ನಾಗರತ್ನ ಟಿ.ಎನ್., ಶ್ರೀಪಾದರಾಜರು ಜೀವನ ಮತ್ತು ಕೃತಿಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೩೨. ನಾವಡ ಎ.ವಿ., ಈಸಬೇಕು ಇದ್ದು ಜೈಸಬೇಕು: ಸಮಾಜ ಮುಖಿ ಕೀರ್ತನೆಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೩೩. ನಾವಡ ಎ.ವಿ. ಹಾಗೂ ಗಾಯಿತ್ರಿ ನಾವಡ, ಸಾವಿರ ಕೀರ್ತನೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩೪. ಪವನ್‌ಕುಮಾರ್ ಜಿ., ಹೂವಕೊಡೆ ತಾಯಿ, ಇಂದಿರೇಶ ಪ್ರಕಾಶನ, ಗಂಗಾವತಿ, ೨೦೦೨

೩೫. ಪೋಲಂಕಿ ರಾಮಮೂರ್ತಿ, ಸೀತಾಯಣ, ಸ್ಪಂದನ ಪ್ರಕಾಶನ, ಚಳ್ಳಕೆರೆ, ೧೯೩೦

೩೬. ಪ್ರೇಮಪಲ್ಲವಿ, ಕನ್ನಡ ಚಲನಚಿತ್ರಗಳಲ್ಲಿ ಕನ್ನಡ ಭಾಷೆಯ ಬಳಕೆ (ಅಪ್ರಕಟಿತ ಸಂಶೋಧನ ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ

೩೭. ಪರಮೇಶ್ವರಯ್ಯ ಸೊಪ್ಪಿನ ಮಠ, ಅಕ್ಕಮಹಾದೇವಿ ಕಂಡ ಬಸವಣ್ಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೩೮. ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು, ಬೆಳಕಿನೆಡೆಗೆ, ಶ್ರೀ ಶಿವಕುಮಾರ ಕಲಾಸಂಘ, ಸಾಣೇಹಳ್ಳಿ

೩೯. ಬಸವರಾಜ ಸಬರದ, ಬಸವೇಶ್ವರ ಮತ್ತು ಪುರಂದರದಾಸ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೪೦. ಬೆಟಗೇರಿ ಕೃಷ್ಣಶರ್ಮ, ಕನ್ನಡ ಜಾನಪದ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೬

೪೧. ಮುಗಳಿ ರಂ.ಶ್ರೀ, ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು, ಶ್ರೀನಿಧಿ ಪ್ರಕಾಶನ, ವಿದ್ಯಾನಗರ, ೧೯೭೨

೪೨. ಮುರಳೀಧರ ಹೆಚ್.ಎನ್., ಈಪರಿಯ ಸೊಬಗು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೪೩. ಮಧುವೆಂಕಾರೆಡ್ಡಿ, ಹೊನ್ನಮ್ಮನ ಹದಿಬದೆಯ ಧರ್ಮ: ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೭೫

೪೪. ಮಹೇಶ ತಿಪ್ಪಶೆಟ್ಟಿ(ಸಂ), ಬಸವತತ್ವ ಸಾಮಾಜಿಕ ಬದಲಾವಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೪೫. ಮಂಗಳ ಚಿ.ನ., ತಿರುಮಲಾಂಬ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

೪೬. ಮಂದಾಕಿನಿ ಪುರೋಹಿತ, ಸಾಹಿತ್ಯ ಸಿರಿಗಂಧ, ಹೇಮಂತ ಸಾಹಿತ್ಯ, ಬೆಂಗಳೂರು, ೨೦೦೮

೪೭. ಯಮನೂರಪ್ಪ ಅಣ್ಣಿಗೇರಿ, ಮಹಿಳೆ ಮತ್ತು ಸಮೃದ್ಧಿ ನೆಲೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೪೮. ರಹಮತ್ ತರೀಕೆರೆ (ಸಂ)., ಹೊಸ ತಲೆಮಾರಿನ ತಲ್ಲಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೪೯. ರಹಮತ್ ತರೀಕೆರೆ, ಸಾಂಸ್ಕೃತಿಕ ಅಧ್ಯಯನ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೨೦೦೪

೫೦. ರುಕ್ಮಿಣಿ ಗಿರಿಮಾಜಿ(ಲೇ), ಸದ್ವೈಷ್ಣವ ಹರಿದಾಸ ಮಹಿಳೆಯರು, ಪ್ರಕಾಶಕರು ಡಿ.ಎಲ್.ಎನ್. ಬೆಂಗಳೂರು, ೨೦೦೩

೫೧. ರುಕ್ಮಿಣಿ ಗಿರಿಮಾಜಿ(ಸಂ), ಓರುಬಾಯಿ ಲಕ್ಷ್ಮಿದೇವಮ್ಮನವರ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೫೨. ರಾಮಚಂದ್ರರಾವ್ ಎಸ್.ಕೆ., ತಿರುಪತಿ ತಿಮ್ಮಪ್ಪ, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು, ೧೯೪೦

೫೩. ರಾಜಪುರೋಹಿತ ಬಿ.ಬಿ., ಶೈಲಿವಿಜ್ಞಾನ ಮತ್ತು ಜ್ಞಾನಶಾಸ್ತ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೫೪. ರಾಮಚಂದ್ರರಾವ್ ಸಾ.ಕೃ.(ಸಂ) ಪುರಂದರ ಸಾಹಿತ್ಯ ದರ್ಶನ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫

೫೫. ರಮೇಶ್ ಸ.ಚಿ.(ಸಂ), ಜಾನಪದ ಕರ್ನಾಟಕ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಲಯ, ಹಂಪಿ, ೨೦೦೫

೫೬. ರಾಮಕೃಷ್ಣ ಎಂ.(ಸಂ), ರನ್ನ ಮತ್ತು ಆತನ ಕೃತಿಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೮೪

೫೭. ರಾ.ಗೌ., ನಮ್ಮ ಒಗಟುಗಳು, ಡಿ.ವಿ.ಕೆ.ಮೂರ್ತಿ, ಮೈಸೂರು, ೧೯೭೦

೫೮. ಲೀಲಾವತಿ ಎಸ್.ರಾವ್.(ಸಂ), ಅಂಬಾಬಾಯಿಯವರ ಕೀರ್ತನೆಗಳು, ಸಮಗ್ರದಾಸ ಸಾಹಿತ್ಯ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೫೯. ಲೀಲಾವತಿ ಎಸ್.ರಾವ್.(ಸಂ), ನಿಡಗುರಕಿ ಜೀವುಬಾಯಿ ಅವರ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೬೦. ಲೀಲಾವತಿ ಎಸ್.ರಾವ್.(ಸಂ), ಹೆಳವನಕಟ್ಟೆ ಗಿರಿಯಮ್ಮನ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩

೬೧. ಲಕ್ಷ್ಮೀನಾರಾಯಣ ಹೆಚ್.ಬಿ.,(ಸಂ), ರಂಗವಿಠಲ ಸಂಪುಟ ೩, ಸಂಚಿಕೆ ೨, ಹರಿಕಥೆ ಅಧ್ಯಯನ ಅಭಿಯಾನ, ಶ್ರೀಪಾದರಾಜರ ಮಠ, ಮುಳಬಾಗಿಲು ಕೋಲಾರ ಜಿಲ್ಲೆ, ೨೦೦೭

೬೨. ಲಕ್ಷ್ಮೀದೇವಿ ಎಂ.ಎರ್., ಗಲಗಲಿ ಅವ್ವನವರ ಹಾಡುಗಳು: ಒಂದು ಸಮಗ್ರ ನೋಟ(ಅಪ್ರಕಟಿತ)

೬೩. ಲಕ್ಷ್ಮೀನಾರಾಯಣ ಭಟ್ಟ, ಶಾಸ್ತ್ರಭಾರತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೨

೬೪. ವರದರಾಜರಾವ್ ಜಿ., ಹರಿದಾಸ ಸಾಹಿತ್ಯಸಾರ, ಕನ್ನಡ ಅಧ್ಯಯನ ಸಂಘ, ಮೈಸೂರು,

೬೫. ವೀರಣ್ಣ ರಾಜೂರ (ಸಂ), ಶಿವಶರಣೆಯರ ವಚನ ಸಂಪುಟ, ಸಂಪುಟ ೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೬೬. ವೆಂಕಟೇಶ ಮೂರ್ತಿ ಎಚ್.ಎಸ್., ಕೀರ್ತನಕಾರರು ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೫

೬೭. ವಾಣಿಶ್ರೀ ಗಿರೀಶ್ (ಸಂ), ತುಳಸಿ ಕೀರ್ತನ ಮಂಜರಿ ಮತ್ತು ವ್ರತಕಥಾಮಾಲಿಕೆ, ಅನಘ ಪ್ರಕಾಶನ ಟ್ರಸ್ಟ್, ಬೆಂಗಳೂರು

೬೮. ವೆಂಕಟೇಶ ಹೆಚ್.(ಸಂ), ಶಿವಶರಣ ಶರಣೆಯರ ಸಾಮಾಜಿಕ ಪ್ರಜ್ಞೆಯ ಆಯ್ದ ಸಂದೇಶಗಳು, ಇಳಾಮುದ್ರಣ, ಬೆಂಗಳೂರು, ೨೦೦೮

೬೯. ವಸಂತ ಕುಷ್ಟಗಿ, ವಿಜಯನಗರ ಸಾಮ್ರಾಜ್ಯ ಪತನಾನಂತರ ಹರಿದಾಸ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೭೦. ವಿಜಯಶ್ರೀ ಸಬರದ, ಸಾಹಿತ್ಯ ಮತ್ತು ಮಹಿಳೆ, ನವಕರ್ನಾಟಕ, ಪ್ರಕಾಶನ, ಬೆಂಗಳೂರು, ೧೯೮೯

೭೧. ವಿರೂಪಾಕ್ಷಪ್ಪ ಬಿ.(ಪ್ರ.ಸಂ), ಬಸವಪಥ, ಬಸವ ಸಮಿತಿ ಬಸವಭವನ, ಬಸವೇಶ್ವರ ವೃತ್ತ, ಬೆಂಗಳೂರು, ೧೯೯೯

೭೨. ಶೇಷನವರತ್ನ, ಬೇಂದ್ರೆ ಕಾವ್ಯದಲ್ಲಿ ಸ್ತ್ರೀ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೭೩. ಶಾಂತಲಕ್ಷ್ಮೀ, ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು: ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

೭೪. ಶ್ರೀಧರ ಪಿಸ್ಸೆ, ಕನ್ನಡ ದಾಸ ಸಾಹಿತ್ಯ ಮತ್ತು ಸಾಂಸ್ಕೃತಿಕ ಪಲ್ಲಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮

೭೫. ಸಣ್ಣಯ್ಯ ಬಿ.ಎಸ್.(ಲೇ), ದಾಸಸಾಹಿತ್ಯ ದರ್ಶನ, ಮಂಗಳ ಭಾರತಿ ಪ್ರಕಾಶನ, ಮೈಸೂರು, ೧೯೮೪

೭೬. ಸಾಂಬಮೂರ್ತಿ, ಕ್ರಿಯಾರಚನೆ ಬಗೆಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೭೭. ಸುಮಿತ್ರಬಾಯಿ ಬಿ.ಎನ್., ವೈಷ್ಣವ ಕವಯಿತ್ರಿಯರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೭೮

೭೮. ಸರೋಜ ಬಿ.ಎಸ್., ಸಂಪ್ರದಾಯದ ಹಾಡುಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೮

೭೯. ಸಾರಾ ಅಬೂಬಕ್ಕರ್, ಸಾಹಿತ್ಯ, ಸಂಸ್ಕೃತಿ ಮತ್ತು ಮಹಿಳೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೮೦. ಶ್ರೀಮತಿ ಹೆಚ್.ಎಸ್., ಗರ್ಭಾಶಯ, ಮಹಿಳೆಯ ಶಕ್ತಿಕೇಂದ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೮೧. ಸರಿತ ಕುಸುಮಾಕರ ದೇಸಾಯಿ, ಹರಪನಹಳ್ಳಿ ಭೀಮವ್ವನ ಹಾಡುಗಳು ಒಂದು ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧

೮೨. ಹಣಮಂತ ತಾಸಗಾಂವಕರ, ಗಲಗಲಿ ಅವ್ವನವರ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೮೩. ಹಣಮಂತ ತಾಸಗಾಂವಕರ, ಹರಿದಾಸರ ಹಾಡುಗಳಲ್ಲಿ ಜೀವನ ಪ್ರೀತಿ, ಸುಧನ್ವ ಪ್ರಕಾಶನ, ಬಾಗಲಕೋಟೆ

೮೪. ಹಣಮಂತ ತಾಸಗಾಂವಕರ, ಪ್ರಥಮ ಹರಿದಾಸ ಮಹಿಳೆ ಗಲಗಲಿ ಅವ್ವನವರು, ಪುಸ್ತಕ ಶಕ್ತಿ ಪ್ರಕಾಶನ, ಬೆಂಗಳೂರು, ೨೦೦೨

೮೫. ಹಿರೇಮಠ ಆರ್.ಸಿ., ಮಹಾದೇವಿಯಕ್ಕನ ವಚನಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮

೮೬. ಹಿರೇಮಠ ಆರ್.ಸಿ., ಶಿವಶರಣೆಯರ ವಚನಗಳು, ಸಮಗ್ರ ಸಂಪುಟ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೮

೮೭. ಹಣಮಂತ ತಾಸಗಾಂವಕರ, ಬಾಗಲಕೋಟೆ ಜಿಲ್ಲೆಯ ಹರಿದಾಸ ಸಾಹಿತ್ಯ, ಸುಧನ್ವ ಪ್ರಕಾಶನ, ಶ್ರೀರಾಮಕೃಷ್ಣ ಬಡಾವಣೆ, ನವನಗರ, ಬಾಗಲಕೋಟೆ ಜಿಲ್ಲೆ, ೨೦೦೮

೮೮. ಹಲಸಂಗಿ ಗೆಳೆಯರು, ಗರತಿಯ ಹಾಡು ತ್ರಿಪದಿಗಳ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೫

೮೯. ಹಲಸಂಗಿಯ ಚೆನ್ನಮಲ್ಲಪ್ಪ ಮತ್ತು ಇತರರು, ಗರತಿಯ ಹಾಡು (ತ್ರಿಪದಿ ಸಂಗ್ರಹ), ಸಮಾಜ ಪುಸ್ತಕಾಲಯ, ಧಾರವಾಡ

೯೦. ಸಂಪಾದಕರು, ರುಕ್ಮಿಣಿ ಗಿರಿಮಾಜಿ, ಪದ್ಮಾಮೂರ್ತಿ ಹೆಚ್.ಎಸ್, ಗೀತಾಚಾರ್ಯ, ನೀ.ಕೃ ರಾಮಶೇಷನ್, ಮೀನಾರಾವ್, ನಳಿನಿ ವೆಂಕಟೇಶ್, ನಂಜನಗೂಡು ತಿರುಮಲಾಂಬ ಮತ್ತು ಇತರ ಮಹಿಳಾ ಹರಿದಾಸರ ಕೀರ್ತನೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೨೦೦೩



ಅವ್ವನವರ ಮನೆಯ ಮುಖ್ಯದ್ವಾರ, ಗಲಗಲಿ



ಅವ್ವನವರ ಮನೆಯ ಒಳಾಂಗಣ ಚಿತ್ರ



ಅವ್ವನವರ ಮನೆಯ ಪ್ರವೇಶ ಒಳಾಂಗಣ



ಅವ್ವನವರು ವಾಸಿಸುತ್ತಿದ್ದ ಮನೆಯಲ್ಲಿನ 'ನೀರುಮನೆ'



ಅವ್ವನವರ ಮನೆಯ ಉಪ್ಪರಿಗೆ ಚಿತ್ರ



ಇಡಿಯಾಗಿ ಅವ್ವನವರ ಮನೆ ಚಿತ್ರಣ



ಶ್ರೀ ಮುದ್ಗಲಾಚಾರ್ಯ (ಅಪ್ಪಾ)ರವರ ಪೀಠ



ದೇವಾಲಯದ ಪಕ್ಕದ ಆವರಣದ.



ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ದೇವಾಲಯ



ಶ್ರೀ ಲಕ್ಷ್ಮೀ ನರಸಿಂಹಸ್ವಾಮಿ ದೇವಾಲಯ



ನರಸಿಂಹಸ್ವಾಮಿ ಗುಡಿಯಲ್ಲಿರುವ ಅಪ್ಪಾರವರ ಮಣೆ



ಶ್ರೀ ವಿಠ್ಠೋಬ ದೇವಾಲಯ



ನರಸಿಂಹ ಸ್ವಾಮಿ ದೇವಾಲಯದ ಎದುರಿನ ಅಶ್ವಥ ಕಟ್ಟೆ, ಗಲಗಲಿ



ಭೋಗಾಮರೇಶ ಸ್ವಾಮಿ – ಅವ್ವನವರಿಂದ ಸ್ಥಾಪಿತವಾದದ್ದು




ಗಲಗಲಿ ಊರಿನ ಗ್ರಾಮದೇವತೆ



ಶ್ರೀ ಆಂಜನೇಯ ಗುಡಿಯ ಮುಖ್ಯದ್ವಾರ

